ಪೂರ್ವಕರ್ಮಕ್ಕೆ ಅನುಸಾರವಾಗಿ

ಮಹಾಪುರುಷರಂತೆ

ದುಃಖಪರಂಪರೆಯನ್ನು ಅನುಭವಿಸುವುದಕ್ಕಾಗಿಯೇ ಜನ್ಮವೆತ್ತಿದ್ದರೂ

ಸತ್ಯಸಂಧತೆಯನ್ನೂ

ಪರದುಃಖದುಃಖಿತತ್ವವನ್ನೂ ಪರೋಪಕಾರಪ್ರವಣತೆಯನ್ನೂ

ಸೌಭ್ರಾತ್ರಯೋಗದ ಮೂಲತತ್ತ್ವವನ್ನೂ

ಜೀವಲೋಕದಲ್ಲಿ ಬಿತ್ತರಿಸುವುದರ ಮೂಲಕವಾಗಿ

ಎಲ್ಲರ ಪ್ರೀತಿಗೂ ನಿರಂತರದಲ್ಲಿಯೂ ಪೂರ್ಣಪಾತ್ರವೆನಿಸಿಕೊಂಡು

ದೈವಯೋಗದಿಂದ

ಶ್ರೀ ಶುಕ್ಲಾಶ್ವಯುಜ ಕೃಷ್ಣ ದ್ವಿತೀಯಾ ಭಾನುವಾಸರದ

ಬ್ರಾಹ್ಮಮುಹೂರ್ತದಲ್ಲಿ

(20—10—29)

ಇಹ ಜನ್ಮದ ಮಾನವ ಲೀಲೆಯನ್ನು ಸಂವರಣ ಮಾಡಿದ

ಭ್ರಾತೃಮಯ್ಯೈಕಜೀವಿತನೆನಿಸಿಕೊಂಡಿದ್ದ

ನನ್ನ ತಮ್ಮನಾದ ಶ್ರೀ **ಕೃಷ್ಣಮೂರ್ತಿ**ಯ

ಜ್ಞಾಪಕಾರ್ಥವಾಗಿ

# ಈ ಕಂಠಾಭರಣವು

**ಸ್ತ್ರೀ ಪುರುಷ ಪಾಠಕ ಮಹಾಶಯರ**

ಮಂಗಳಾಲಂಕಾರಕ್ಕೋಸುಗ

**ಸಮರ್ಪಿಸಲ್ಪಟ್ಟಿರುವುದು**

ಚಿರದುಃಖಿಯಾದ ಗ್ರಂಥಕರ್ತ,

**ಬಾಲಸರಸ್ವತೀ.**

4-11-1929

ಮೈಸೂರು

# ವಿ ಜ್ಞಾ ಪ ನಾ .

ಇದು ಅಮೂಲ್ಯವೆನಿಸಿದ ಕಂಠಾಭರಣವು. ಆರ್ಯಮಹಿಳೆಯರೆಲ್ಲರೂ ಈ ಕಂಠಾಭರಣವನ್ನು ಬದುಕಿರುವ ವರೆಗೂ ತಮ್ಮ ತಮ್ಮ ಕಂಠಗಳಲ್ಲಿ ಧರಿಸಿರಬೇಕು. ಕಂಠದಲ್ಲಿ ಒಂದು ಸಲ ಧರಿಸಿದ ಮೇಲೆ ಮತ್ತೆ ತೆಗೆಯಕೂಡದೆಂದು ಗ್ರಂಥಕರ್ತನ ಬಿನ್ನಪಂಗಳಿರುವುವು. ಒಂದು ವೇಳೆ ಗ್ರಂಥಕರ್ತನ ಪ್ರಾರ್ಥನೆಯನ್ನು ಉದಾಸೀನತೆಯಿಂದ ಲೆಕ್ಕಿಸದೆ ಈ ಕಂಠಾಭರಣವನ್ನು ದೂರಮಾಡುವುದಾದರೆ, ಈ ಆಭರಣದ ಮಹಿಮೆಯು ಅಂದಿಗೆ ತೀರೀತು. ಅನಂತರದಲ್ಲಿ ಪಶ್ಚಾತ್ತಾಪ ಪಡುವುದಾದರೂ, ಮಹಿಮೆಯು ಹಿಂತಿರುಗಿ ಬರಲಾರದು. ಈ ವಿಷಯವನ್ನು ಕುರಿತು ಗ್ರಂಥಕರ್ತನು ಕಂಠಾಭರಣದ ೨೪ ನೆಯ ಲಂಬಕದಲ್ಲಿ ವಿಶೇಷವಾಗಿ ವಿಜ್ಞಾಪಿಸಿಕೊಂಡೂ ಇರುವನು. ಸ್ತ್ರೀ ಪುರುಷ ಪಾಠಕ ಮಹಾಶಯರೆಲ್ಲರೂ ಈ ಕಂಠಾಭರಣವನ್ನು ಕಣ್ಣುಗಳಿಂದ ಚೆನ್ನಾಗಿ ಪರಿಶೀಲಿಸಿ, ಮನವೆಂಬ ಒರೆಗಲ್ಲಿನ ಮೇಲೆ ಒರೆಯಿಟ್ಟು ಇದರ ಮಹಾಮಹಿಮೆಯನ್ನು ಅರಿವುದು. ನಮ್ಮ ದೇಶಬಾಂಧವರಾದ ಸ್ತ್ರೀ ಪುರುಷರು ಇಷ್ಟರ ಮಟ್ಟಿಗೆ ನಡೆಯಿಸಿ ಕೊಡುವುದಾದರೆ, ಗ್ರಂಥಕರ್ತನು ಪರಮ ಧನ್ಯನಾಗುವನು.

ಇತಿ ಸರ್ವಮಂಗಳಾಕಾಂಕ್ಷಿ,

**ಬಾಲಸರಸ್ವತೀ,**

ಗ್ರಂಥಕರ್ತ.

|| ಜಯತು ಭಗವಾನ್ ||

# ಕಂಠಾಭರಣಂ.



( ಸಾಮಾಜಿಕ ನವನ್ಯಾಸ )

## ಒಂದನೆಯ ಲಂಬಕ.



### ಅಂಕುರಾರ್ಪಣ

"ಸಾದಿ! ಓ ಸಾದಿ! ಅಷ್ಟರಲ್ಲಿಯೇ ಎಲ್ಲಿಗೆ ಹೊರಟುಹೋದೆ?"

"ಇಲ್ಲಿಯೇ ಇರುವೆನು ಬುದ್ಧಿ! ಏನಪ್ಪಣೆ?"

"ಮನೆಯ ಯಜಮಾನಿಗೆ ಕ್ಷ್ಯತಿರವಿದ್ದರೆ, ಆಕೆಯನ್ನು ಇಲ್ಲಿಗೆ ಬರ ಹೇಳು"

"ಅಪ್ಪಣೆ"

ಮನೆಯ ದಾಸಿಯಾದ ಸಾದಿಯು ಬಿರಬಿರನೆ ಮನೆಯೊಳಗೆ ಹೋಗಿ ಯಜಮಾನಿಗೆ ಯಜಮಾನನ ಅಪ್ಪಣೆಯನ್ನು ತಿಳಿಸಿದಳು. ಯಜಮಾನಿಯು ಸಡಗರದಿಂದ "ಝಣ್ ಝಣ್ ಝಣಕ ಝಣ್ ಝಣ್" ಎಂದು ಒಡವೆಗಳನ್ನು ಅಲುಗಾಡಿಸುತ್ತ ಮೆಲ್ಲಮೆಲ್ಲನೆ ಗಂಡನ ಬಳಿಗೈತಂದಳು.

ಯಜಮಾನನ ಹೆಸರು ಅಚ್ಯುತಾನಂತಗೋವಿಂದಶರ್ಮ. ಈತನು ಶಿವರಾಮಪುರದ ಕೊಬ್ಬಿದ ಜೋಡೀದಾರನಾಗಿದ್ದನು. ಈತನಿಗೆ ನಮ್ಮ ಕಥಾಪ್ರಾರಂಭದಲ್ಲಿ ಐವತ್ತನೆಯ ವರ್ಷವು ನಡೆಯುತ್ತಿದ್ದಿತು. ಈ ವಯಸ್ಸಿನಲ್ಲಿ ಜೋಡೀದಾರನು ಶಿವರಾಮಪುರದಲ್ಲಿ ಇದಿರಿಲ್ಲದ ಪ್ರತಾಪಶಾಲಿಯಾಗಿದ್ದನು. ತನ್ನ ಜೋಡೀಗ್ರಾಮದಲ್ಲಿ ಸಿಂಹದಂತಿರುತ್ತಿದ್ದ ಈ ಅಚ್ಯುತಾನಂತಗೋವಿಂದಶರ್ಮನು ತನ್ನ ಹೆಂಡತಿಯ ಬಳಿಯಲ್ಲಿ ಮುಟ್ಟಿಗೆ ಗ್ರಾಮಸಿಂಹದಂತಾಗಿಬಿಡುತ್ತಿದ್ದನು. ಇದರ ಮರ್ಮವನ್ನು ಬಲ್ಲವರೇ ಬಲ್ಲರು. ಇಂತಹ ಜೋಡೀ

ವಿದ್ವಾನ್ ವಿದ್ಯಾಭೂಷಣ ಬಾ. ಸರಸ್ವತಿಯವರಿಂದ ರಚಿಸಲ್ಪಟ್ಟುದು

ಗಂಡ—ಹುಲಿಗೂ ಸರಿಗೂ ನಾಟಿಯೆಂದರೇನು? ಇದಾಗತಕ್ಕ ಕೆಲಸವಲ್ಲ.

ಹೆಂಡಿತಿ—ಅದೇಕೆ? ವಿನಯನು ದಿಕ್ಕಿಲ್ಲದ ಬಡಹುಡುಗನಲ್ಲವೇ?

ಗಂಡ—ದಿಕ್ಕಿಲ್ಲದ ಬಡಹುಡುಗನಿಗೆ ಇಷ್ಟು ಅತ್ಯಾಚಾರವೆಲ್ಲಿಯದು? ದೊಡ್ಡತನವು ದೊಡ್ಡ ವಂಶವನ್ನು ಹೇಳುವುದು ಬಡವನಾದ ಮೇಲೆ ನಮ್ರನಾಗಿರಬೇಕು. ನಮ್ರತೆಯೇ ದೊಡ್ಡತನಕ್ಕೆ ಮೊದಲನೆಯ ಕಾರಣವು.

ಹೆಂಡಿತಿ—ಅತ್ಯಾಚಾರವೆಂದು ನಿಮಗೆ ಗೊತ್ತಾದುದು ಹೇಗೆ? ದೋಷವೆಲ್ಲವೂ ನಮ್ಮ ಹುಡುಗಿಯದಾಗಿರಬಾರದೇನು? ನಮ್ಮ ತಪ್ಪು ನಮಗೆ ಕಾಣಿಸುವುದೇ ಇಲ್ಲ. ಇತರರ ತಪ್ಪು ಕೊಂಚವಾಗಿದ್ದರೂ, ಅದು ನಮ್ಮ ಕಣ್ಣಿಗೆ ಹೆಚ್ಚಾಗಿ ಕಾಣುವುದು ಸ್ವಭಾವವಾಗಿಯೇ ಇರುವುದು ಕಮಲವು ಬಾಯ್ದೆರೆದ ಹೊರತು ಭ್ರಮರವು ಅದರಲ್ಲಿ ಪ್ರವೇಶ ಮಾಡಿ ಮಧುಪಾನ ಮಾಡಬಲ್ಲುದೇ? ಕಮಲವು ಸಂತೋಷದಿಂದ ಅರಳುವುದು, ಭ್ರಮರವೂ ಬಂದು ಅದರಿಂದ ಮಧುಪಾನಮಾಡುವುದು ಈ ಕಾರ್ಯವು ಇವೆರಡಕ್ಕೂ ಹಿತವಾಗಿರುವುದರಿಂದಲೇ ಇಷ್ಟೆಲ್ಲಾ ನಡೆಯುತ್ತಿರುವುದು ಉಭಯ ಸಮ್ಮತವಿಲ್ಲದಿರುವುದರಿಂದ ಭ್ರಮರನು ಲಂಪಟನಾದರೂ ಕೇದಗೆಯಲ್ಲಿ ಸೇರಲೊಲ್ಲನು.

ಗಂಡ—ಇಂದಿರೆ! ಗೊತ್ತಾಯಿತು, ಗೊತ್ತಾಯಿತು! ಸಂಬಂಧವನ್ನು ಬೆಳೆಯಿಸುವುದಕ್ಕೆ ಹುಡುಗರೇ ಸ್ವತಂತ್ರರೋ? ಇದರಲ್ಲಿ ಮನೆಯ ಯಜಮಾನನ ಇಷ್ಟವೂ ಬೇಡ, ಯಜಮಾನಿಯ ಇಷ್ಟವೂ ಬೇಡ, ಏನನ್ನೂ ಅರಿಯದ ಹುಡುಗರು ಒಬ್ಬರನ್ನೊಬ್ಬರು ಒಪ್ಪಿಬಿಟ್ಟರ ನಾಕೇನು? ಅದೆಂತಹ ಕಲಿಗಾಲ ಬಂದಿತೋ ನಾನು ಕಾಣೆ ಶಿವಶಿವಾ! ಈ ದುಷ್ಟಕಾಲದಲ್ಲಿ ಮನೆಯ ಹಿರಿಯರಾದವರು ಬದುಕಿದ್ದರೂ ಸತ್ತಂತೆಯೇ ಆಯಿತು ಇದಂತಿರಲಿ.

ನಂದನ ಗ್ರಾಮದಲ್ಲಿ ನಾನೊಬ್ಬ ವರನನ್ನು ನೋಡಿರುವೆನು ವರನ ತಂದೆಯಾದರೋ ಬಲು ಹಣಗಾರನು ಆತನು ಕನ್ನೆಗೆ ಬೇಕುಬೇಕಾದ ನಗನಟ್ಟುಗಳನ್ನಿಡುವನು. ಭೋಜನೋಪಚಾರಗಳಿಗೇನೂ ಕೊರತೆಯಿಲ್ಲ. ಅಷ್ಟೇ ಅಲ್ಲದೆ, ಅವರು ನನ್ನ ಗೌರವಕ್ಕೆ ತಕ್ಕವರೂ ಆಗಿರುವರು. ಅವರು ಮದುವೆಯನ್ನು ಬಲು ವಿಜೃಂಭಣೆಯಿಂದ ಮಾಡುವರಂತೆ. ವರನ ಸೌಂದರ್ಯವಾದರೋ ಹೇಳಲೇ ಕೆಲಸವಿಲ್ಲ. ಹೀಗಿರುವಲ್ಲಿ ಇದೆಲ್ಲವನ್ನೂ ಬಿಟ್ಟು, ಅನಾ

ಧನೂ ಬಿಕಾರಿಯೂ ಅಸಮಾನನೂ ಪಾಶ್ಚಾತ್ಯಭಾಷೆಯನ್ನೋದಿ ಜಾತಿಭ್ರಷ್ಟನೂ ಆದ ವಿನಯನಲ್ಲಿಯೇ ನನ್ನ ಮಗಳಿಗೆ ಪ್ರೇಮ! ಅವಳ ಪ್ರೇಮಕ್ಕೆ ಬೆಂಕಿಬಿದ್ದು ಹೋಗಲಿ ಆ ಹಾಳು ಪ್ರೇಮಕ್ಕೆ ಪಾತ್ರಾಪಾತ್ರವಿಲ್ಲವೆ?

ಪಂಡಿತಿ—ಹುಡುಗ ಹುಡುಗಿಯರು ಒಪ್ಪಿರುವುದು ಮಾತ್ರವೆ ಅಲ್ಲ ನಮ್ಮ ಮಗನಾದ ಜಾನಕೀನಾಥನೂ ಒಪ್ಪಿರುವನು ಜಾನಕೀನಾಥನು ಏನೇನೋ ಪುಸ್ತಕಗಳನ್ನು ಓದಿಯೋದಿ ನಮಗಿಂತಲೂ ಎಷ್ಟೋ ಬುದ್ಧಿವಂತನಾಗಿರುವನು ಅವನು ನನಗೆ ಈ ವಿಷಯವಾಗಿ ಎಷ್ಟೋ ತಿಳಿಯ ಹೇಳಿರುವನು. ಆತನು ಹೇಳಿದುದೇನೆಂದರೆ—

"ಪ್ರಣಯವೆಂಬುದು ಸುಖವನ್ನುಂಟುಮಾಡುವ ಕೋಮಲಸದಳವಾದ ಹೃದಯದ ಅದೊಂದು ಭಾವವು. ಪ್ರಣಯಕ್ಕೆ ಬಡವ ಬಲ್ಲಿದರೆಂಬ ಭೇದವಿಲ್ಲ, ಗುಣದೋಷಗಳ ವಿವೇಚನೆಯಿಲ್ಲ, ಸುರೂಪ ಕುರೂಪಗಳ ಮಾತೇ ಇಲ್ಲ, ಪಂಡಿತ ಮೂರ್ಖರೆಂಬ ತಾರತಮ್ಯವಿಲ್ಲ ಪ್ರಣಯವು ಎಲ್ಲಿ ಹುಟ್ಟುವುದೋ ಅದು ವನವಾಗಲಿ, ರಣರಂಗವಾಗಲಿ, ಪ್ರಚಂಡವಾದ ಮರುಭೂಮಿಯೇ ಆಗಲಿ ನಂದನವನವಾಗಿ ಬಿಡುವುದು ಗಡ್ಡೆಗೆಣಸುಗಳು ಮಿಷ್ಟಾನ್ನವಾಗುವುವು ಗಿಡಮರಗಳ ಬುಡಗಳೇ ಹಂಸತೂಲಿಕಾತಲ್ಪವಾಗುವುವು. ಪ್ರೇಮವಿಲ್ಲದಿರುವಾಗ ಬಗಬಗೆಯ ಉಡುಗೆ ತೊಡುಗೆಗಳನ್ನು ತೊಟ್ಟು ಉಪ್ಪರಿಗೆಯ ಮೇಲೆ ರತ್ನಪರ್ಯಂಕದಲ್ಲಿ ಪವಡಿಸಿದರೂ ಸುಖವುಂಟಾಗಲಾರದು ರುಚಿರುಚಿಯಾದ ಭೋಜನವೂ ಅನುಕೂಲರಾದ ದಾಸದಾಸಿಯರ ಸೇವೆಯೂ ಹಿತಕರವಾಗಲಿಕ್ಕಿಲ್ಲ"

ಈಗ ನೋಡೋಣವಾಗಲಿ ನಮ್ಮ ಸರಳೆಯು ವಿನಯನನ್ನು ಮನಸಾರೆ ಪ್ರೀತಿಸುತ್ತಿರುವಳು ಆದುದರಿಂದಲೇ ಆತನ ಮಾತನ್ನು ಕಿವಿಯಾರೆ ಕೇಳುವುದರಲ್ಲಿ ಆಕೆಗೆ ಎಷ್ಟೋ ಪ್ರೀತಿಯಿರುವುದು ಒಂದೊಂದುದಿನ ವಿನಯನು ಜ್ವರದಿಂದ ಹಾಸುಗೆ ಹಿಡಿದು ಮಲಗಿರಲು, ನಮ್ಮ ಮಗು ಮಾಡಿದ ಉಪಚಾರವೊಂದೇ ಸಾಲದೇ! ಪ್ರಣಯವಿಲ್ಲದಿದ್ದರೆ ಹಾಗೆ ಉಪಚರಿಸುವವರಾರು? ವಿನಯನು ಸ್ವಸ್ಥನಾಗುವ ವರೆಗೂ ಸರಳೆಯು ನಿದ್ರಾಹಾರಗಳನ್ನು ದೂರ ತೊರೆದು ಆತನಿಗೆ ಮಂಗಳವಾಗಲೆಂದು ಕಂಡಕಂಡ ದೇವರಿಗೆಲ್ಲಾ ಹರಕೆ ಹೊತ್ತಳು ಹೀಗಿರುವಲ್ಲಿ ಇವರಿಬ್ಬರೂ ಇಷ್ಟು ಅನ್ಯೋನ್ಯಭಾವದಿಂದ ಪ್ರೀತಿಸುತ್ತಿರುವಾಗ, ಅವರವರ ಪ್ರಣಯಕ್ಕೆ ಭಂಗವನ್ನುಂಟುಮಾ

ಡಬಾರದು. ವಿನಯಕುಮಾರನಿಗೆ ಸರಳಕುಮಾರಿಯನ್ನು ಕೊಟ್ಟು ಮದುವೆ ಮಾಡುವುದೇ ಒಳ್ಳೆಯದು. ಇವರಿಬ್ಬರೂ ದಂಪತಿಗಳಾಗುವುದಾದರೆ, ಇವರ ಸಂಸಾರದಲ್ಲಿ ಶಾಶ್ವತವೆನಿಸಿದ ಸುಖಸಂಪತ್ತುಗಳು ಏಕಾಧಿಪತ್ಯಮಾಡಿಯಾವು.

ಗಂಡ—ಇಂದಿರೆ! ಇಂದಿಗೆ ನೀನೂ ನನಗೆ ವಿರೋಧಿನಿಯಾದೆಯಾ? ಇರಲಿ, ಬೆಳಗಾಗುವುದರೊಳಗಾಗಿಯೇ ವಿನಯನಿಗೆ ತಕ್ಕ ಶಿಕ್ಷೆಯನ್ನು ಮಾಡಿಸದೇ ಬಿಡೆನು. ಬಳಿಕ ನೀವುಗಳೆಲ್ಲರೂ ಏನ ಮಾಡುವಿರೋ ನೋಡುವೆನು. ವಿನಯನು ನಿರ್ನಾಮನಾಗುವ ವರೆಗೂ ನಮ್ಮ ಕುಲಗೌರವ ಮಾನಮರ್ಯಾದೆಗಳಾವುವೂ ಉಳಿಯವ ಹಾಗಿಲ್ಲ.

ಅಚ್ಯುತಾನಂತ ಗೋವಿಂದಮಹಾಶಯನು ಹೀಗೆ ಮಾತನಾಡಿದ ಬಳಿಕ ಹಾಸುಗೆಯಲ್ಲಿ ಸುಮ್ಮನೆ ಮಲಗಿದನು ಇಂದಿರೆಯು ಗಂಡನಿಗೆ ಕೋಪಬಂದಿತೆಂದು ತಿಳಿದು ಎಷ್ಟೋಸಲ ಕೂಗಿ ನೋಡಿದಳು. ಎಷ್ಟೋಸಲ ವಿನಯದಿಂದ ಬೆಸಗೊಂಡಳು ಯಜಮಾನನು ಇದಾವುದಕ್ಕೂ ಗಮನಕೊಡದಿರಲು, ಇಂದಿರೆಯು ಕೋಪದಿಂದ ಮುಖವನ್ನು ತಿರುಗಿಸಿಕೊಂಡು ಮಲಗಿದಳು. ಗಂಡಹೆಂಡಿರಿಬ್ಬರೂ ಏನೇನೋ ಚಿಂತಿಸುತ್ತಿದ್ದ ಹಾಗೆಯೇ, ನಿದ್ರಾದೇವಿಯು ಅವರ ಕಣ್ಣುಗಳನ್ನಾವರಿಸಿಬಿಟ್ಟಳು.



# ಎರಡನೆಯ ಲಂಬಕ.

## ವಿ ನ ಯ ಕು ಮಾ ರ.



ಮಲಿನಾಂಬರವನ್ನುಟ್ಟು ಸಂಸ್ಕಾರವಿಲ್ಲದ ತಲೆಯಕೂದಲನ್ನು ಕೆದರಿಕೊಂಡು ದಿಕ್ಕಿಲ್ಲದ ದುಃಖಿನಿಯಾದ ವೃದ್ಧೆಯಂತೆ ಭೈರವೀನದಿಯು ಮೆಲ್ಲಮೆಲ್ಲನೆ ಹರಿದುಹೋಗುತ್ತಿದ್ದಿತು. ದಡದಲ್ಲಿ ಬಗೆಬಗೆಯ ಗಿಡಮರಗಳು ಭೈರವೀನದಿಯು ಸಂಕಟವೇನೆಂಬುದನ್ನು ಕೇಳುವುದಕ್ಕಾಗಿಯೋ ಎಂಬಂತೆ ನೀರಿನ ಕಡೆಗೆ ಬಗ್ಗಿಕೊಂಡಿರುತ್ತಿದ್ದುವು. ಅತ್ಯಾಚಾರಿಯಾದ ವಾತಪೋತವು ಅಶಿಕ್ಷಿತನಾದ ಹುಡುಗನಂತೆ ಒಂದೊಂದುಸಲ ಹಕ್ಕಿಗಳನ್ನು ಹೆದರಿಸಿ ಬೆದರಿಸುತ್ತಲೂ, ಒಂದೊಂದು ಸಲ ಅವುಗಳನ್ನು ನೆಲದ ಮೇಲೆ ತುಪ

ತುಪನೆ ಕೆಡಹುತ್ತಲೂ, ಒಂದೊಂದು ಸಲ ಅವುಗಳ ರಾಶಿಯಲ್ಲಿ ಸರಸರನೆ ಸರಿಯುತ್ತಲೂ, ಒಂದೊಂದು ಸಲ ಉದುರಿದ ಹಣ್ಣೆಲೆಗಳನ್ನು ನದಿಯ ನೀರಿನಮೇಲೆ ತೇಲಿಬಿಡುತ್ತಲೂ ಇಲ್ಲದ ಕಿರುಕುಳವನ್ನುಂಟುಮಾಡುತ್ತಿದ್ದಿತು. ಚಿಗುರೆಲೆಗಳು ವಾಯುವಿನ ಈ ಬಗೆಯ ಚೇಷ್ಟೆಗಳನ್ನು ನೋಡಿ ಸೈ ಎಂದು ತಲೆಗಳನ್ನು ತೂಗುತ್ತಿದ್ದುವು. ಮಕ್ಕಳಾಟಗಳನ್ನು ಕಣ್ಣಾರೆ ನೋಡಿದ ಹೂಗಳು ತಮ್ಮ ತಮ್ಮ ನಗೆಯನ್ನು ತಮ್ಮಲ್ಲಿ ಅಡಗಿಸಿಕೊಂಡಿರಲಾರದೆ ಒಂದೇ ತಡವೆಗೆ ಪಕ್ಕನೆ ನಕ್ಕುಬಿಟ್ಟವು. ಪಕ್ಷಿಗಳು ಗಗನಮಂಡಲದಲ್ಲಿ ಗಾನ ಮಾಡಲಾರಂಭಿಸಿದುವು.

ಮೇಲೆ ಹೇಳಿದ ಭೈರವೀನದಿಯ ಉತ್ತರತೀರದಲ್ಲಿ ರಾಮವಾಡಿಯೆಂಬ ಗ್ರಾಮವೊಂದುಂಟು. ನಾವು ನೋಡಿದಾಗ ಅದು ಶಿಥಿಲವಾಗುತ್ತಿದ್ದಿತು. ಆ ಗ್ರಾಮದ ಒಂದೆಡೆಯಲ್ಲಿ ಒಂದು ಸಣ್ಣದಾದ ಇಟ್ಟಿಗೆಯ ಮನೆ. ಅದರ ಅವಸ್ಥೆಯು ಬಲು ಶೋಚನೀಯವಾದುದು ಬಿರುಗಾಳಿಯ ಹಾವಳಿಗ ಸಿಕ್ಕಿ ಸಹಮೂಲವಾಗಿ ನೆಲಕ್ಕುರುಳಿದ ದೊಡ್ಡ ಮರಕ್ಕ ಅದಾವ ಕಾಂತಿಯೋ, ಸವವೈಧವ್ಯದಿಂದ ಒಡವೆಗಳನ್ನು ಕಳಚಿ ಕೆಂಪುಸೀರೆಯನ್ನುಟ್ಟು, ತನ್ನೊಳಗೆ ತಾನೇ ಸಂಕಟಪಡುತ್ತಿರುವ ಯುವತಿಯಾದ ಭಾರತಮಹಿಳೆಯ ಮುಖದಲ್ಲಿ ಅದಾವ ಲಕ್ಷಣವೋ, ಆ ಇಟ್ಟಿಗೆಯ ಮನೆಯಲ್ಲಿಯೂ ಅದೇ ಕಾಂತಿಯೇ ಅದೇ ಲಕ್ಷಣವೇ ಕಾಣಬರುತ್ತಿದ್ದಿತು ಮನೆಯ ಸುತ್ತಲೂ ಕಾಡಬಳ್ಳಿಗಳು ಹಬ್ಬಿರುವುವು. ಗೋಡೆಗಳ ಸಂದಿಗೊಂದಿಗಳಲ್ಲಿ ಅರಳಿಯ ಸಸಿಗಳು ಬೆಳೆದಿರುವುವು. ಮನೆಯೊಳಗಣ ಕೆಲವೆಡೆಗಳಲ್ಲಿ ಹುಲ್ಲು ಹುಟ್ಟಿರುವುದು, ಕೆಲವೆಡೆಗಳಲ್ಲಿ ತೀರುಗಳು ಮುರಿದು ಹಂಜರವು ಕುಸಿದುಬಿದ್ದಿರುವುದು, ಕೆಲವೆಡೆಗಳಲ್ಲಿ ಹೆಂಚುಗಳು ಒಡೆದು ಮಳೆಯ ಹನಿಗಳು ಸೋರಿಸೋರಿ ನೆಲವೆಲ್ಲವೂ ಗುಳಿಬಿದ್ದಿರುವುದು, ಕೆಲವೆಡೆಗಳಲ್ಲಿ ಕೊಬ್ಬಿದ ಹೆಗ್ಗಣಗಳು ದೊಡ್ಡದೊಡ್ಡ ಬಿಲಗಳನ್ನು ಮಾಡಿಕೊಂಡು ಸಪುತ್ರ, ಸಮಿತ್ರ, ಸಕಲತ್ರವಾಗಿ ವಾಸಮಾಡಿಕೊಂಡಿರುವುವು. ಹಾವುಗಳು ಮಟ್ಟಿಗೆ ಆ ಮನೆಯಲ್ಲಿ ವಾಸವಾಗಿರಲಿಲ್ಲವೆಂಬುದನ್ನು ನಾವು ಎಂದಿಗೂ ನಂಬತಕ್ಕವರಾಗಿರಲಿಲ್ಲ. ಈ ಸೊಬಗಿನ ಮನೆಯು ಇಂತಹ ದುರವಸ್ಥೆಯಲ್ಲಿದ್ದರೂ, ಇದರಲ್ಲಿ ಜನರು ವಾಸವಾಗಿದ್ದರೆನ್ನುವುದೊಂದೇ ಆಶ್ಚರಿಯ ಸುದ್ದಿಯು. ವಿನಯಕುಮಾರನು ಈ ಮನೆಯ ಒಂದು ಕೋಣೆಯಲ್ಲಿ ಕುಳಿತುಕೂಂಡು ಆವುದೋ ಪುಸ್ತಕ

ವನ್ನು ತೆರೆದು ಓದುತ್ತಿದ್ದನು. ಇದೇ ಆತನ ಪಿತೃಪೈತಾಮಹವಾದ ವಾಸದ ಮನೆಯು.

ನಾವು ನೋಡಿದಾಗ ವಿನಯನಿಗೆ ೨೧ ವರ್ಷ ವಯಸ್ಸು. ವಿನಯನು ನೋಡುವುದಕ್ಕೆ ಅತಿ ಸುಂದರನು. ಆವ ಸೌಂದರ್ಯದಿಂದ ಜನರು ಪುರುಷನನ್ನು ಸುಂದರನೆಂದು ತಿಳಿವರೋ, ಅಂತಹ ಸೌಂದರ್ಯವು ಆತನಲ್ಲಿ ಸಂಪೂರ್ಣಾಧಿಕಾರ ಮಾಡುತ್ತಿದ್ದಿತು ಅಲ್ಲದೆಯೂ ವಿನಯಕುಮಾರನು ವಿದ್ಯಾವಂತನೂ, ಬುದ್ಧಿವಂತನೂ, ಧರ್ಮಜ್ಞನೂ, ಪರೋಪಕಾರಿಯೂ ಆಗಿದ್ದನು. ನಮ್ಮ ಕಥಾನಾಯಕನಾದ ಇಂತಹ ವಿನಯಕುಮಾರನು ತನ್ನ ಕೋಣೆಯಲ್ಲಿ ಕುಳಿತು ಓದುತ್ತಿರುವಾಗ, "ವಿನಯ ಮಹಾಶಯ!" ಎಂದು ಆರೋ ಕೂಗಿದ ಶಬ್ದವು ಕೇಳಬಂದಿತು ಕೂಡಲೆ ವಿನಯನು "ಆದಾರು?" ಎಂದು ಕೇಳಲು, ಆಗಂತುಕನು—ನಾನು, ಜೋಡಿದಾರರ ಚಾಕರನು ಯಜಮಾನರು ತಮಗೆ ಪತ್ರವೊಂದನ್ನು ಕಳುಹಿರುವರು," ಎಂದು ಹೇಳಿದನು.

ವಿನಯನು ಇದನ್ನು ಕೇಳಿ ಹೊರಗೆ ಬಂದು ಪತ್ರವನ್ನು ಕೈಗೆ ತೆಗೆದುಕೊಂಡು ಓದಿದ ಬಳಿಕ, ಚಾಕರನನ್ನು ಕುಳಿತುಕೊಳ್ಳುವಂತೆ ಹೇಳಿ ತನ್ನ ತಾಯಿಯ ಬಳಿಗೆ ಬಂದನು ಮನೆಯಲ್ಲಿ ವಿನಯ, ವಿನಯನ ತಾಯಿ, ಇವರಿಬ್ಬರ ಹೊರತಾಗಿ ಮತ್ತಾರೂ ಇರಲಿಲ್ಲ ತಂದೆ ಬದುಕಿದ್ದರೂ ಜೀವನಕ್ಕಾಗಿ ದೇಶಾಂತರ ಹೊರಟುಹೋಗಿದ್ದನು ಸ್ವರ್ಣಲತೆಯೆಂಬ ತಂಗಿಯೊಬ್ಬಳು ತನ್ನ ಗಂಡನೊಡನೆ ಸಂಸಾರಮಾಡಿಕೊಂಡಿರುತ್ತಿದ್ದಳು ವಿನಯನು ಮನೆಯೊಳಗೆ ಬಂದು ತಾಯಿಯನ್ನು ಕುರಿತು—"ಅಮ್ಮ! ಜೋಡಿದಾರರು ನನಗೆ ಪತ್ರವೊಂದನ್ನು ಬರೆದು ಕಳುಹಿರುವರು ಈಗ ನನಗೆ ಸರಕಾರದಲ್ಲಿ ನೌಕರಿಯೊಂದು ಸಿಕ್ಕುವಹಾಗಿದೆ ನಾನೀಗಳೇ ಹೊರಡಬೇಕಾಗಿರುವುದು, ಎಂದು ಹೇಳಿದನು

ತಾಯಿ—ಈಗಳೇ ಹೊರಡುವುದೆಂದರೇನು? ನೆನೆದುಕೊಂಡಾಗಳೇ ಹೊರಡುವುದಕ್ಕೆ ಹೇಗೆ ಸಾಧ್ಯ?

ಮಗ—ಸಾಧ್ಯವೋ, ಅಸಾಧ್ಯವೋ ತಿಳಿಯದು ನಾನಾದರೋ ಹೊರಡಲೇ ಬೇಕಾಗಿರುವುದು. ತಡಮಾಡದೆ ಹೊರಟುಬರಬೇಕೆಂದು ಯಜಮಾನರು ಸ್ಪಷ್ಟವಾಗಿ ಬರೆದು ಕಳುಹಿರುವರು ದೊಡ್ಡವರ ಮಾತಿಗೆ ಪ್ರತಿಯಾಗಿ ನಡೆವುದು ಗೌರವವಲ್ಲ ತಡಮಾಡಿ ಹೊರಟರೆ, ಯಜಮಾನರು ನನ್ನ ಮೇಲೆ

ಆಗ್ರಹಮಾಡುವುದಕ್ಕೂ ಸಾಕು ಆದುದರಿಂದ ನಾನು ಈಗ ಹೊರಡಲೇ ಬೇಕಾಗಿರುವುದು.

ತಾಯಿ—ಮಗು, ನಿನ್ನನ್ನಗಲಿ ನಾನೊಬ್ಬಳೇ ಈ ಮನೆಯಲ್ಲಿ ಹೇಗಿರಲಿ? ನೀನೂ ಹೊರಟುಹೋದ ಮೇಲೆ ದಿಕ್ಕಿಲ್ಲದ ನನ್ನನ್ನು ಕೇಳುವರಾರು?

ಮಗು—ಅಮ್ಮಾ! ನೀನು ಇಷ್ಟು ಹೆದರಲು ಕಾರಣವೇನು? ಈಗ ನೋಡು, ತಂದೆಯು ಮುದಿತನದಲ್ಲಿಯೂ ಪರಸ್ಥಳದಲ್ಲಿದ್ದು ಜೀವನಕ್ಕೆ ಸಂಪಾದಿಸುತ್ತಾ, ತನ್ನ ಕಷ್ಟ ನಷ್ಟಗಳನ್ನೂ ಲೆಕ್ಕಿಸದೆ ತಿಂಗಳು ತಿಂಗಳಿಗೂ ನಾಲ್ಕು ಕಾಸು ಕಳುಹುತ್ತಿರುವನು. ತಂದೆಯು ದ್ರವ್ಯ ಸಂಪಾದನೆಯ ಕೆಲಸದಿಂದ ನಿವೃತ್ತನಾಗಿ ಸುಖವಾಗಿರಬೇಕಾದ ಮುದಿತನದ ಕಾಲದಲ್ಲಿಯೂ, ಯುವಕರಂತೆ ಕಾಸುಕಾಸಿಗೆ ಅಲೆದಲೆದು ಸಾಯುತ್ತಿರುವುದೂ, ಸಂಪಾದಿಸಬೇಕಾದ ಕಾಲದಲ್ಲಿ ಯುವಕನಾದ ಮಗನು ಕೆಲಸವಿಲ್ಲದೆಯೇ ಕುಳಿತುಕೊಂಡು ತಂದೆಯು ತಂದು ಹಾಕಿದುದನ್ನು ತಿಂದುಹಾಕುತ್ತಿರುವುದೂ ಲೋಕ ವಿಲಕ್ಷಣವಾದ ನಡೆವಳಿಯೇ ಸರಿ. ನಾನು ಇಷ್ಟು ಓದಿಯೂ ಬರೆದೂ ಇನ್ನೂ ವಿವೇಕವನ್ನು ಕಲಿಯದಿದ್ದರೆ ಹುಟ್ಟಿದುದಕ್ಕೆ ಸಾರ್ಥಕವೇನು? ಅಮ್ಮಾ, ನಾನು ಹೊರಗೆ ಹೋಗಿ ಹತ್ತು ಕಾಸು ಸಂಪಾದಿಸಿದರಲ್ಲವೇ ಸಂಸಾರವು ನಡೆಯುವುದು ಇದರಿಂದ ಮುಪ್ಪಿನ ತಂದೆಗೂ ಕೊಂಚಮಟ್ಟಿಗೆ ಒತ್ತಾಸೆಯಾದಂತಾದೀತು! ಮುಪ್ಪಿನಲ್ಲಿ ಮಕ್ಕಳು ಕಾಪಿಟ್ಟಾರೆಂದಲ್ಲವೇ ಜನರು ಮಕ್ಕಳನ್ನು ಬಯಸುವರು. ವೃದ್ಧರಾದ ತಾಯಿತಂದೆಗಳನ್ನು ಸೇವಿಸುವುದು ನನ್ನ ಹಣೆಯಲ್ಲಿ ಬರೆಯದಿದ್ದರೆ ನಾನಿದ್ದೇನು ಫಲ? ತಾಯೆ! ನೀನು ಚಿಂತಿಸಬೇಡ.

ತಾಯಿಯು ಮಗನ ಮಾತನ್ನು ಕೇಳಿ ಸಂತೋಷವನ್ನೂ ವ್ಯಸನವನ್ನೂ ತಾಳಿದವಳಾಗಿ—"ಮಗು, ನೀನು ಹೇಳುವುದೆಲ್ಲವೂ ಒಪ್ಪತಕ್ಕುದಾಗಿದೆ. ಆ ಮಾತು ಹಾಗಿರಲಿ. ನೀನು ಒಂದು ದಿನದ ಮಟ್ಟಿಗಾದರೂ ಇಲ್ಲಿದ್ದು ಬಳಿಕ ಹೊರಡಲಾರೆಯಾ? ಎಂದು ಕೇಳಿಕೊಂಡಳು.

ಮಗ-ಅಮ್ಮ! ಅದಾಗಲಾರದಮ್ಮ, ನಾನು ತಡಮಾಡುವುದಾದರೆ ಕೈಗೆ ಬಂದ ತುತ್ತೂ ಬಾಯಿಗೆ ಬರದೇ ಹೋದೀತು. ಗಾಳಿಬಂದಾಗ ತೂರಿಕೊಳ್ಳದಿದ್ದರೆ ನಮ್ಮ ಕೆಲಸವೆಲ್ಲವೂ ಕೆಟ್ಟುಹೋಗುವ ಸಂಭವವುಂಟು. ಆದುದರಿಂದ ನನ್ನನ್ನು ಹರಸಿ, ಕಳುಹು, ನಾನು ಮತ್ತೆ ಬೇಗನೇ ಬಂದು ನಿನ್ನ

ಸೇವೆಯನ್ನು ಕೈಕೊಳ್ಳುವೆನು. ಅಮ್ಮಯ್ಯ ! ನಾನು ಹೋಗಿ ಬರುವುದಕ್ಕೆ ಅಡ್ಡಿಮಾಡಬೇಡ, ಕಂಡೆಯ ? ತಾನಾಗಿಯೇ ಬಂದುದನ್ನು ನಾವು ಬಿಟ್ಟು ಬಿಟ್ಟರೆ, ಬಳಿಕ ನಾವಾಗಿ ಬಯಸಿದರೂ ಅದು ಸಿಕ್ಕುವುದಿಲ್ಲ. ಹೀಗೆಂದಮೇಲೆ, ನಮಗೆ ಮುಂದೆ ಒಳ್ಳೆಯ ಕಾಲವೂ ಬರುವ ಹಾಗಿಲ್ಲ, ನಮ್ಮ ಬಡತನವೂ ಹರಿಯುವ ಹಾಗಿಲ್ಲ ಈ ಹಾಳು ಬಡತನದಿಂದ ನಾವು ಪಡುತ್ತಿರುವ ಕಷ್ಟವು ಅಷ್ಟಿಷ್ಟಲ್ಲ ಹೊಟ್ಟೆಗಿಲ್ಲದಿರುವುದರಿಂದಲೇ ತಂದೆಯೊಂದು ಕಡೆ, ತಾಯಿಯೊಂದು ಕಡೆ, ಇದು ನಮ್ಮ ಯತ್ನದಲ್ಲಿಲ್ಲ. ಅನ್ನ ಬಟ್ಟೆಗಾಗಿ ಎಲ್ಲಿಯಾದರೂ ಕಷ್ಟಪಟ್ಟು ಕೆಲಸಮಾಡಲೇ ಬೇಕು. ಎಲ್ಲರೂ ಒಂದೇ ಕಡೆಯಲ್ಲಿ ಕುಳಿತು ತಿನ್ನುವುದೇನು ? ಹೊಟ್ಟೆಗಾಗಿ ಅಲೆಯಬೇಕು, ಬಟ್ಟೆಗಾಗಿಯೂ ಅಲೆಯಬೇಕು ಇದೆಲ್ಲವೂ ಜಗದೀಶ್ವರನ ವಿಲಾಸವೇ ಆಗಿರುವುದು.

ತಾಯಿ—ಮಗು ! ಹಾಗಾದರೆ ಈಗಳೇ ಹೊರಡಬೇಕೇನು ?

ಮಗ—ಈಗಳೇ ಹೊರಡಬೇಕು. ನನ್ನ ಬಟ್ಟೆ ಬರೆಗಳನ್ನು ತಂದು ಕೊಡು.

ತಾಯಿಯು ಕೊಂಚ ಹೊತ್ತಿನಲ್ಲಿಯೇ ಎಲ್ಲವನ್ನೂ ಸಿದ್ಧಪಡಿಸಿ ತಂದುಕೊಟ್ಟು, ತಾನು ಅತಿ ಕಷ್ಟದಿಂದ ಹೊಟ್ಟೆಕಟ್ಟಿ ಬಟ್ಟೆಕಟ್ಟಿ ಗಳಿಸಿಟ್ಟದ್ದ ಎರಡು ರೂಪಾಯಿಗಳನ್ನೂ ತಂದು ಮಗನ ಕೈಗೆ ಕೊಡುವುದಕ್ಕೆ ಹೋದಳು. ವಿನಯನು ತನ್ನ ಪದಾರ್ಥಗಳನ್ನು ತೆಗೆದುಕೊಂಡು ರೂಪಾಯಿಗಳನ್ನು ಮುಟ್ಟದೆ,—"ಅಮ್ಮ ! ನಾನು ನಿನಗೆ ತಂದುಕೊಡುವುದನ್ನು ಬಿಟ್ಟು, ನಾನೇ ನಿನ್ನಿಂದ ತೆಗೆದುಕೊಳ್ಳಲೇ ! ನನಗೆ ಹಣ ಕಾಸು ಬೇಕಾದರೆ ಜಾನಕೀನಾಥನಿರುವನು. ಅವನು ನನಗೆ ಸಮಯದಲ್ಲಿ ಎಷ್ಟೋ ಉಪಕಾರ ಮಾಡಿರುವನು, ಮಾಡುತ್ತಲೂ ಇರುವನು ಈ ರೂಪಾಯಿಗಳನ್ನು ನೀನೇ ಇಟ್ಟುಕೊಂಡು ಇಷ್ಟಪರಿತು ವೆಚ್ಚಮಾಡು. ಇಷ್ಟರಲ್ಲಿಯೇ ನಾನೇನಾದರೂ ಕಳುಹಿಸಿ ಕೊಡುವೆನು ನಾನು ಮತ್ತೆ ಇಲ್ಲಿಗೆ ಬರುವಾಗ ಸ್ವರ್ಣಲತೆಯನ್ನೂ ಜತೆಯಲ್ಲಿಯೇ ಕರೆದುಕೊಂಡು ಬರುವೆನು. ಒಬ್ಬಳೇ ಮನೆಯಲ್ಲಿ ಇರುವುದು ಹೇಗೆಂದು ಚಿಂತಿಸಬೇಡ, ಎಂದು ತಾಯಿಯ ಕಾಲುಗಳನ್ನು ಹಿಡಿದುಕೊಂಡು ನಮಸ್ಕಾರ ಮಾಡಿದನು ತಾಯಿಯು ಉಕ್ಕಿಬರುವ ವ್ಯಸನದಿಂದ ಗಳಗಳನೆ ಅಳುತ್ತಾ—"ಮಗು, ವಿನಯ ! ನೀನು ಎಷ್ಟೋಸಲ ಹೊರಗೆ ಹೋಗಿರುವೆ. ಆಗ ನನಗೆ ಇಷ್ಟುಸಂಕಟವಾಗಲಿಲ್ಲ. ಈಗಳಾದರೋ ನಿನ್ನನ್ನು

ಅಗಲಿರಬೇಕೆಂದರೆ ಅದೇಕೋ ಮನವೊಡಂಬಡದು. ನಿನ್ನ ಪಯಣದ ಸುದ್ದಿಯನ್ನು ಕೇಳಿದಾಗಳಿಂದಲೂ ನನ್ನ ಪ್ರಾಣವು ತತ್ತರಗುಟ್ಟುತ್ತಿರುವುದು. ನನ್ನ ಈ ದುರಂತವಾದ ಸಂಕಟವನ್ನು ನೋಡಿದರೆ, ಹತವಿಧಿಯು ನನ್ನನ್ನು ಸುಟ್ಟು ಬೂದಿಮಾಡದೇ ಬಿಡನು. ನನ್ನ ಪಾಡು ಹೇಗಾದರೂ ಆದೀತು. ನೀನು ಆವ ಸ್ಥಳದಲ್ಲಿ ಆವ ಅವಸ್ಥೆಯಲ್ಲಿ ಇದ್ದರೂ, ದೀನಾನಾಥ ರಕ್ಷಕನಾದ ಪರಮಾತ್ಮನ ನಾಮಸ್ಮರಣೆಯನ್ನು ಮಟ್ಟಿಗೆ ಮರೆಯಬೇಡ, ಕಂಡೆಯ ? ಆ ನಾಮಸ್ಮರಣೆಯ ಬಲದಿಂದಲೇ ಪ್ರಹ್ಲಾದನು ಅಗಾಧವಾದ ಸಾಗರದಿಂದಲೂ, ಭೀಷಣವಾದ ಬೆಂಕಿಯಿಂದಲೂ, ದುಸ್ಸಹವಾದ ಕಾಲಕೂಟ ವಿಷದಿಂದಲೂ, ಮದಿಸಿದ ಆನೆಯ ಕಾಲಿನಿಂದಲೂ ರಕ್ಷಿಸಲ್ಪಟ್ಟನು. ಆ ನಾಮದ ಬಲದಿಂದಲೇ ಅಜಮಿಳನು ಘೋರವಾದ ನರಕದಿಂದ ಪಾರಾಗಿರುವನು. ಪರಮಾತ್ಮನ ತುದಿ ಮೊದಲಿಲ್ಲದ ಮಹಿಮೆಯ ತತ್ತ್ವವನ್ನರಿತವರಾರು ? ಆತನ ಮಹಿಮೆಯು ಅಪಾರವಾದ ಗಗನಮಾರ್ಗದಲ್ಲಿ ಕೋಟ್ಯನುಕೋಟಿ ಗ್ರಹೋಪಗ್ರಹಗಳನ್ನು ಒಂದಕ್ಕೊಂದು ವಿರೋಧವಿಲ್ಲದೆ ಸಂಚರಿಸುವಂತೆ ಮಾಡಿರುವುದು. ಆತನ ಮಹಿಮೆಯು ಸ್ಥಾವರ ಜಂಗಮ ಪ್ರಪಂಚದ ಅಣುಪರಮಾಣುಗಳಲ್ಲಿಯೂ ವ್ಯಾಪಿಸಿಕೊಂಡು ಜಗತ್ತಿನ ಯೋಗಕ್ಷೇಮವನ್ನು ವಹಿಸಿ ಕಾಪಿಡುತ್ತಿರುವುದು ಆತನ ಮಹಿಮೆಯಿಂದಲೇ ಕಾಲಚಕ್ರವು ಹೆಚ್ಚುಕಡಮೆಯಿಲ್ಲದೆ ಒಂದೇ ವಿಧವಾಗಿ ಸುತ್ತುತ್ತಿರುವುದು. ಅಂತಹ ಮಹಾಮಹಿಮನಾದ ಪರಮಾತ್ಮನು ದೀನರಿಗೆ ಬಂಧುವು, ಅನಾಥರಿಗೆ ನಾಥನು, ಗತಿಯಿಲ್ಲದವರಿಗೆ ಗತಿಯು, ಆದುದರಿಂದ ಪಿನಯ ! ಇಂತಹ ಮಹಿಮೆಯುಳ್ಳ ಪರಮಾತ್ಮನನ್ನು ನೀನೆಂದಿಗೂ ಮರೆಯಲಾಗದು. ಜಗದೀಶ್ವರನು ನಿನ್ನ ಸಮಸ್ತವಾದ ವಿಪತ್ಪರಂಪರೆಗಳನ್ನು ಪರಿಹಾರಮಾಡಲಿ, ಎಂದು ಹರಸಿ ದರದರನೆ ಕಂಬನಿಗರೆಯುತ್ತಾ ನಿಂತುಬಿಟ್ಟಳು

ವಿನಯನು ತಾಯಿಯ ಸದುಪದೇಶವನ್ನು ಕೇಳಿ ಮನಕರಗಿದವನಾಗಿ "ಅಮ್ಮ! ನೀನೊಬ್ಬಳೇ ಇಲ್ಲಿರುವೆಯ?" ಎಂದು ವಿನಯದಿಂದ ಬೆಸಗೊಂಡನು. ತಾಯಿಯು—"ಇಲ್ಲಿಯೇ ಇರುವೆನಪ್ಪ ಮಗು! ಪ್ರಯಾಣಕಾಲದಲ್ಲಿ ಬಾಯಿತುಂಬಾ ದೇವರ ಸ್ಮರಣೆಯನ್ನು ಮಾಡು ನೋಡೋಣ," ಎಂದಳು.

ವಿನಯನು ಹರಿನಾಮ ಕೀರ್ತನ ಮಾಡಿದನು —

ಹರೇರಾಮ ಹರೇರಾಮ | ರಾಮರಾಮ ಹರೇಹರೇ ||
ಹರೇಕೃಷ್ಣ ಹರೇಕೃಷ್ಣ | ಕೃಷ್ಣಕೃಷ್ಣ ಹರೇಹರೇ ||

ತಾಯಿಯು ಮಗನ ಹರಿನಾಮಸಂಕೀರ್ತನವನ್ನು ಕೇಳಿ ಬಲು ಸಂತೋಷಪಟ್ಟವಳಾಗಿ ಮಗನನ್ನು ಹರಸಿದಳು. ಬಳಿಕ ವಿನಯಕುಮಾರನು ಪಯಣಮಾಡಿದನು. ಅವನ ಹಿಂದೆ ಹಿಂದೆಯೇ ಚಾಕರನೂ ಹೊರಟನು. ತಾಯಿಯು ರಪ್ಪೆಹಾಕದೆ ತನ್ನ ಮಗನು ಹೊರಟು ಹೋಗುವುದನ್ನೇ ನೋಡುತ್ತಾ ನಿಂತುಬಿಟ್ಟಳು. ಕಾಲಕ್ರಮದಲ್ಲಿ ವಿನಯಕುಮಾರನು ಕಣ್ಮರೆಯಾಗಲು, ತಾಯಿಯು ಜಾರಿಬೀಳುತ್ತಿದ್ದ ಕಣ್ಣೀರನ್ನು ಸೀರೆಯ ಸೆರಗಿನಿಂದ ತೊಡೆದುಕೊಳ್ಳುತ್ತಾ ಮನೆಯೊಳಗೆ ಪ್ರವೇಶಮಾಡಿದಳು.

ಲೋಕದಲ್ಲಿ ಮಾತೆಯ ಪ್ರೀತಿಯೇ ಧನ್ಯವಾದುದು.



# ಮೂರನೆಯ ಲಂಬಕ.



## ಸರಳಕುಮಾರಿಯ ಸರಳಪ್ರೇಮ

ಚೈತ್ರಮಾಸದಲ್ಲಿ ಶುಕ್ಲಪಕ್ಷದ ಅಷ್ಟಮಿಯು ಕಳೆದುಹೋಗುವುದರಲ್ಲಿದ್ದಿತು. ಆರಕ್ತವಾದ ಸೂರ್ಯನ ಕಿರಣಗಳು ವಸಂತಾನಿಲಾಂದೋಳಿತವಾದ ಭೈರವೀನದಿಯ ಅಲೆಗಳ ಮೇಲೆ ವಿಹರಿಸುತ್ತಿರುವುವು ಪ್ರಾಣಕಾಂತನು ಹೊರಟು ಹೋಗುವನೆಂಬ ವ್ಯಸನದಿಂದ ಪದ್ಮಿನೀ ಸುಂದರಿಯು ತಲೆವಾಗಿ ನಿಂತಿರುವಳು ಕೋಗಿಲೆಗಳು ತಮ್ಮ ಮಧುರವಾದ ಪಂಚಮಸ್ವರವನ್ನು ಗಾಳಿಯಲ್ಲಿ ತೇಲಿಬಿಡುತ್ತಿದ್ದುವು. ಗ್ರಾಮ ಮಹಿಳೆಯರು ಮನೋಮೋಹಕರವಾದ ಸುಲಲಿತ ವೇಷಗಳನ್ನು ತಾಳ್ದು ಒಬ್ಬೊಬ್ಬರಾಗಿ ನದಿಗೆ ಬಂದು ನೀರಿನಲ್ಲಿಳಿದು ತಮ್ಮ ತಮ್ಮ ಕೆಲಸಗಳನ್ನು ನೆರವೇರಿಸುತ್ತಿರುವರು.

ಈ ಸಮಯದಲ್ಲಿ ಶಿವರಾಮಪುರದ ಜೋಡೀದಾರನು ತನ್ನ ಅಧಿಕಾರಮಂದಿರದಲ್ಲಿ ಕುಳಿತುಕೊಂಡು ಗ್ರಾಮದ ಲೆಕ್ಕಪಕ್ಕಗಳನ್ನು ವಿಚಾರಿಸುತ್ತಿದ್ದನು. ಅವನ ಪಕ್ಕದಲ್ಲಿ ಗ್ರಾಮದ ಸರ್ವಾಧಿಕಾರಿಯು ಕುಳಿತಿರುವನು. ಆತನ ಬಳಿಯಲ್ಲಿಯೇ ಕೋಶಾಧ್ಯಕ್ಷನೂ ಹಿಂಗಡೆಯಲ್ಲಿ ಸೇವಕರೂ ಕುಳಿತು ತಮ್ಮ ತಮ್ಮ ಕೆಲಸಗಳಲ್ಲಿ ನಿಯುಕ್ತರಾಗಿದ್ದರು. ಮತ್ತಾರಾರೋ ಹತ್ತಾರು ಗ್ರಾಮನಿವಾಸಿಗಳು ಜೋಡೀದಾರನ ಮುಖವಿಲಾಸವನ್ನು ಬಯಸುವುದ

ಕ್ಕಾಗಿ ಕುಳಿತಿದ್ದರು. ಬರತಕ್ಕ ಜನರು ಬರುತ್ತಿದ್ದರು, ಹೋಗತಕ್ಕವರು ಹೊರಟುಹೋಗುತ್ತಿದ್ದರು. ಈ ಹೊತ್ತಿಗೆ ಸರಿಯಾಗಿ ವಿನಯಕುಮಾರನು ಸೇವಕನನ್ನು ಹಿಂದಿಟ್ಟುಕೊಂಡು ಜೋಡೀದಾರನಿದ್ದಲ್ಲಿಗೆ ಬಂದು ಸೇರಿದನು. ಜೋಡೀದಾರ ಅಚ್ಯುತಾನಂತ ಗೋವಿಂದ ಮಹಾಶಯನು ವಿನಯನನ್ನು ನೋಡಿ ನಸುನಕ್ಕು,—"ಬಾ, ಮಗು, ಬಾ, ಕ್ಷೇಮದಲ್ಲಿರುವೆಯಷ್ಟೇ ?" ಎಂದು ಕುಶಲಪ್ರಶ್ನೆ ಮಾಡಿದನು. ವಿನಯನು ಭಯ ಭಕ್ತಿ ನಯ ನೀತಿಗಳಿಂದ ಯಜಮಾನನಿಗೆರಗಿ,—"ತಮ್ಮ ಅನ್ನಪ್ರಭಾವದಿಂದ ನಾನು ಇಂದಿನವರೆಗೂ ಕ್ಷೇಮದಿಂದಿರುವೆನು, ಎಂದು ಮೃದು ಮಧುರವಾಗಿ ನುಡಿದನು.

ಅಚ್ಯುತ—ನೀನು ಬೇಗನೆ ಬಂದುದು ಒಳ್ಳೆಯದೇ ಆಯಿತು. ನನ್ನಲ್ಲಿಗೆ ದೊಡ್ಡಮನುಷ್ಯರೊಬ್ಬರು ಬಂದಿರುವರು ಅವರು ಇಷ್ಟರಲ್ಲಿಯೇ ತಮ್ಮೂರಿಗೆ ಹೊರಡುವವರಾಗಿದ್ದಾರೆ ನೀನೂ ಅವರ ಜತೆಯಲ್ಲಿಯೇ ಹೊರಡು. ಅವರು ನಿನಗೆ ಯೋಗ್ಯವಾದದೊಂದು ನೌಕರಿಯನ್ನು ಸಂಪಾದಿಸಿ ಕೊಡುವರು ಈಗ ನೀನು ಬಲು ಬಳಲಿರುವುದರಿಂದ ಒಳಗೆ ಹೋಗಿ ವಿಶ್ರಮಿಸಿಕೊಳ್ಳು.

ವಿನಯ—ಅಪ್ಪಣೆ. ಈಗ ಜಾನಕೀನಾಥನಿರುವುದೆಲ್ಲಿ ?

ಅಚ್ಯುತ—ಮಹೇಂದ್ರನಗರದಲ್ಲಿಯೇ

ಬಳಿಕ ವಿನಯನು ಮನೆಯೊಳಗೆ ಪ್ರವೇಶಮಾಡಿದನು ಇಷ್ಟೆನ್ನುವುದರೊಳಗಾಗಿ ಸೂರ್ಯದೇವನು ಪಶ್ಚಿಮತೀರವನ್ನಡರಿದನು. ಕತ್ತಲೆಯು ಕಳ್ಳನಂತೆ ಮೆಲ್ಲಮೆಲ್ಲನೆ ಬರಲಾರಂಭಿಸಿತು ಗಗನಮಂಡಲದಲ್ಲಿ ನಕ್ಷತ್ರಗಳು ರಾಶಿರಾಶಿಯಾಗಿ ಕಾಣಿಸಿಕೊಳ್ಳುತ್ತಾ ಮಕ್ಕಳಂತೆ ನಿಷ್ಕಾರಣವಾಗಿ ಕಿಲಕಿಲನೆ ನಗಲಾರಂಭಿಸಿದುವು ಚಂದ್ರನು ತನ್ನ ಬೆಳ್ದಿಂಗಳೆಂಬ ಮೋಹಚೂರ್ಣವನ್ನು ಜಗತ್ತಿನ ಮೇಲೆ ಬೀರಿ ಜನರನ್ನು ಮುಗ್ಧರನ್ನಾಗಿ ಮಾಡತೊಡಗಿದನು. ಹಿತವಾದ ಸ್ಪರ್ಶವುಳ್ಳ ದಕ್ಷಿಣವಾಯುವು ಜಗದ್ವಿಜಯಕಾರ್ಯದಲ್ಲಿ ಸಹಾಯವಾಗಿ ಬಂದು ನಿಂತಿತು. ಈ ವೇಳೆಗೆ ಸರಿಯಾಗಿ ಮಾದಿಯು ಬಂದು,—"ವಿನಯ ಮಹಾಶಯ ! ಯಜಮಾನಿಯರು ನಿಮ್ಮನ್ನು ನೋಡುವುದಕ್ಕಾಗಿ ಕರೆದುಕೊಂಡು ಬರಹೇಳಿರುವರು, ಎಂದು ಹೇಳಿ ಹೊರಟುಹೋದಳು.

ವಿನಯನು ಹೆಂಗುಸರ ಬೀಡಾರಕ್ಕೆ ಬರುತ್ತಿರುವಾಗ, "ವಿನಯ ಬಂದ, ವಿನಯ ಬಂದ," ಎಂದು ಕೋಲಾಹಲವೆದ್ದಿತು. ವಿನಯನು ಬಾಲ್ಯ

ದಿಂದಲೂ ಈ ಮನೆಯಲ್ಲಿಯೇ ಬಳೆದು ತನ್ನ ನಡೆನುಡಿಗಳಿಂದ ಎಲ್ಲರ ಪ್ರೀತಿ ವಿಶ್ವಾಸಗಳಿಗೂ ಪಾತ್ರನಾಗಿದ್ದನು. ಇವನ ಶೀಲಸ್ವಭಾವವನ್ನರಿತ ಅಕ್ಕಪಕ್ಕದವರೆಲ್ಲರೂ ಸರಳಕುಮಾರಿಯನ್ನು ವಿನಯನಿಗೆ ಕೊಟ್ಟು ವಿವಾಹವಾಗುವುದೆಂದು ನಿಶ್ಚಯವಾಗಿಯೂ ನಂಬಿದ್ದರು. ಈಯಭಿಮಾನದಿಂದಲೇ ವಿನಯನು ಬಂದೊಡನೆಯೇ ಎಲ್ಲರೂ ಆನಂದ ಸೂಚಕವಾದ ದನಿಗೈದರು. ವಿನಯನು ಬಂದನೆಂದು ಅಡುಗೆಯ ಹೆಂಗುಸು ವಿಶೇಷವಾಗಿ ಕಾಯಿಪಲ್ಯಗಳನ್ನು ಹೆಚ್ಚುವುದಕ್ಕೆ ಕುಳಿತಳು. ದಾಸಿಯರು ಮಣೆಗಳನ್ನು ಸಿದ್ಧಪಡಿಸಿದರು. ಬಿಸಿಯೂಟವೂ ಸಿದ್ಧವಾದುದು. ಭೋಜನೋತ್ತರದಲ್ಲಿ ಸೇವಿಸಬೇಕಾದ ವೀಳಯವೂ ನೇರ್ಪಡಿಸಲ್ಪಟ್ಟುದು. ಬಲುಮಾತಿನಿಂದೇನು ? ಮನೆಯೊಳಗಣ ಹೆಂಗುಸರೆಲ್ಲರೂ ವಿನಯನು ಬಂದುದನ್ನು ನೋಡಿ ಸಡಗರದಿಂದ ಮನೆಯ ಕೆಲಸಗಳನ್ನು ಮಾಡತೊಡಗಿದರು ಅಂದು ನೋಟಕರಿಗೆ ಜೋಡೀದಾರನ ಮನೆಯಲ್ಲಿ ಮಹೋತ್ಸವವಿರಬಹುದೆಂದು ಬೋಧೆಯಾಗುತಲಿದ್ದಿತು. ಕೆಲವು ಹೆಂಗುಸರು ಗುಸಗುಸನೆ ಮಾತನಾಡಿದರು, ಮತ್ತೆ ಕೆಲವರು ಅಲ್ಲಿಂದಿಲ್ಲಿಗೆ ಇಲ್ಲಿಂದಲ್ಲಿಗೆ ತಿರುಗಾಡಿದರು, ಇನ್ನೂ ಕಲವರು ಸರಳಕುಮಾರಿಯ ಬಳಿ ಕುಳಿತುಕೊಂಡು ಹಾಸ್ಯ ಪರಿಹಾಸ್ಯ ಮಾಡಿದರು ಸಣ್ಣ ಸಣ್ಣ ಹುಡುಗರು ವಿನಯನನ್ನು ನೋಡಲೋಸುಗ ಅತನ ಹತ್ತಿರಕ್ಕೆ ಓಡಿಬರುತ್ತಿದ್ದರು. ಅವರ ಹಿಂದೆ ಹಿಂದೆಯೇ ಒಬ್ಬ ಹುಡುಗಿಯೂ ಬಂದು ನಿಂತುಕೊಂಡಳು. ಅಕೆಯೇ ಸರಳಕುಮಾರಿ. ಸರಳಕುಮಾರಿಗ ಹನ್ನೆರಡನೆಯ ವರ್ಷವು ತುಂಬಿ ಹದಿಮೂರನೆಯ ವರ್ಷವು ನಡೆಯುತಲಿದ್ದಿತು ಆ ಬಾಲೆಯು ವಿನಯನನ್ನು ನೋಡುವುದಕ್ಕೆ ಬಂದ ಕಾಲದಲ್ಲಿ ಹಸದಿಯ ಪತ್ತಳವನ್ನುಟ್ಟು, ಕಂಠದಲ್ಲಿ ಅಮೂಲ್ಯವಾದ ಮುತ್ತಿನ ಹಾರವನ್ನೂ, ಇತರವಾದ ಅಂಗಾಂಗಗಳಲ್ಲಿ ಬಗೆಬಗೆಯ ಸುವರ್ಣಾಲಂಕಾರಗಳನ್ನೂ ಧರಿಸಿದ್ದಳು. ತಲೆಯಲ್ಲಿ ಕೃಷ್ಣಸರ್ಪವನ್ನು ಹೋಲುವ ಆಯತವಾದ ಜಡೆಯು ಆಗುಲ್ಫಲಂಬಿಯಾಗಿ ಹರಿದಾಡುತ್ತಿತ್ತು. ಈ ವರ್ಣನಾಸಮಯದಲ್ಲಿ ಸರಳಕುಮಾರಿಯು ಅಸ್ಫುಟವಾದ ಉದ್ಯಾನ ಕುಸುಮದಂತೆ ಕಂಗೊಳಿಸುತ್ತಿದ್ದಳು ನವ ವಸಂತಸಮಾಗಮದಲ್ಲಿ ಹಾಸ್ಯಮಯವಾದ ಪ್ರೇಮರೂಪವಾದ ನೀಹಾರ ಬಿಂದುವು ಈ ಕುಸುಮ ಕೋರಕವನ್ನು ಇನ್ನೂ ಸ್ಪರ್ಶಮಾಡಿರಲಿಲ್ಲ; ಆದರೆ ಪುಷ್ಪವಿಕಸನದ ಕಾಲವು ದೂರವಾಗಿರಲಿಲ್ಲವೆಂದು ಮಟ್ಟಿಗೆ ಹೇಳಬಹುದಾಗಿದ್ದಿತು.

ಇಂತಹ ಸರಳಕುಮಾರಿಯು ವಿನಯಕುಮಾರನನ್ನು ನೋಡಿದ ಕೂಡಲೆ ಮೆಲ್ಲಮೆಲ್ಲನೆ—"ನೀನಾದರೋ ಬಲು ಕಠಿನ ಹೃದಯನು. ನೀನು ಬಂದು ಎಷ್ಟೋ ಹೊತ್ತಾದರೂ, ಒಳಗೆ ಬಂದು ನಮ್ಮನ್ನು ನೋಡಿಕೊಂಡು ಹೋಗಬೇಕೆಂಬ ಆಸೆಯೇ ನಿನಗಿಲ್ಲ. ದಾಸಿಯೊಡನೆ ಹೇಳಿ ಕಳುಹದಿದ್ದರೆ, ನೀನು ಇಷ್ಟುಮಟ್ಟಿಗಾದರೂ ಒಳಗೆ ಬರುತ್ತಲೇ ಇರಲಿಲ್ಲವೆಂದು ತೋರುವುದು," ಎಂದು ಹೇಳಿದ ಮಾತನ್ನು ಕೇಳಿ ವಿನಯನು ಅದಕ್ಕೆ ಉತ್ತರವಾಗಿ ನಿಟ್ಟುಸಿರನ್ನು ಬಿಟ್ಟನು. ಇದನ್ನು ನೋಡಿ ಸರಳೆಯು ಭಯದಿಂದ ಓಡಿಬಂದು ವಿನಯನನ್ನು ಹಿಡಿದುಕೊಂಡು—"ನಿನಗಾಗಿರುವುದೇನು, ಹೇಳು," ಎಂದು ಕೇಳಿದಳು.

ವಿನಯ—(ಸಾತ್ತ್ವಿಕಭಾವವನ್ನು ತೋರ್ಪಡಿಸುತ್ತ) ಸರಳಾ ! ಇದೇಕೆ ಹೀಗೆ ಮಾಡುವೆ ?

ಸರಳೆ—(ವಿನಯನನ್ನು ಬಿಟ್ಟು) ನೀನೇತಕ್ಕೆ ನಿಟ್ಟುಸಿರ ಬಿಟ್ಟುದು, ಹೇಳು?

ವಿನಯ—ಏನೋ ಜ್ಞಾಪಕಕ್ಕೆ ಬಂದಿತು. ಅದರಿಂದಲೇ ನಿಟ್ಟುಸಿರ ಬಿಟ್ಟೆನು.

ಸರಳೆ—ನನಗೂ ಗೊತ್ತಾಯಿತು. ನಾನು ನಿನ್ನನ್ನು ನಿಷ್ಠುರನೆಂದು ಹೇಳಿದುದಕ್ಕೆ ನಿನಗ ಸಂಕಟವುಂಟಾಗಿ ಹೀಗೆ ಮಾಡಿರುವೆ.

ವಿನಯ—ಅದೆಂದಿಗೂ ಅಲ್ಲ, ಸರಳೆ !

ಸರಳೆ—ಹಾಗಾದರ ಅದೇನು ಹೇಳು.

ವಿನಯ—ನಿನ್ನನ್ನು ನಾನು ಮುಂದೆ ನೋಡುವುದಕ್ಕೆ ಆಗುವುದೋ ಇಲ್ಲವೋ ಎಂಬ ಚಿಂತೆಯುಂಟಾಯಿತು.

ಸರಳೆ—ಅದೇನು! ಅಷ್ಟರಲ್ಲಿ ನಾನು ಸತ್ತುಹೋಗುವೆನೇ?

ವಿನಯ—ಶಿವಶಿವಾ!

ಸರಳೆ—ಹಾಗಾದರೆ ಮತ್ತೇನು ಹೇಳು?

ವಿನಯ—ನಾನು ಪರದೇಶಕ್ಕೆ ಹೋಗಬೇಕಾಗಿರುವುದು. ಅಲ್ಲಿಂದ ನಾನು ಬಂದ ಮೇಲೆ ನಿನ್ನನ್ನು ನೋಡುವುದಕ್ಕೆ ಆಗಲಾರದು.

ಸರಳೆ—ಹಾಗೆಂದರೇನು ? ನೀನು ಬಂದಾಗ ನಾನು ಎಲ್ಲಿಯಾದರೂ ಅಡಗಿಕೊಂಡಿರುವೆನೇ ?

ವಿನಯ—ಹಾಗಲ್ಲ, ಸರಳಾ! ಹಾಗಲ್ಲ. ನಿನಗೆ ದೊಡ್ಡಕಡ ವಿವಾಹ

ವಾದರೆ, ನಾನು ನಿನ್ನನ್ನು ಬಂದು ನೋಡುವುದಕ್ಕೆ ಸಾಧ್ಯವೇ? ಒಂದು ವೇಳೆ ನೋಡಿದರೂ, ಮಾತನಾಡಿಸುವುದು ಹೇಗೆ?

ಸರಳೆ—ಹಾಗಾದರೆ ನಾನು ಮದುವೆಮಾಡಿಕೊಳ್ಳುವುದೇ ಇಲ್ಲ.

ವಿನಯ—ನಿಮ್ಮ ತಂದೆಯು ಮಾಡುವುದಾದರೆ—

ಸರಳೆ—ತಂದೆ ಹೇಗೆ ಮಾಡುವನು?

ವಿನಯ—ಹಾಗಾದರೆ ನೀನು ಮದುವೆ ಮಾಡಿಕೊಳ್ಳುವುದೇ ಇಲ್ಲವೆ?

ಸರಳೆ—ಅದು ನನಗೇನು ಗೊತ್ತು! ಈ ಮಾತು ಹಾಗಿರಲಿ. ಈಗ ನೀನೆಲ್ಲಿಗೆ ಹೊರಡುವೆ?

ವಿನಯ—ಈಗ ನಾನು ಎಲ್ಲಿಗೆ ಹೊರಡಬೇಕೋ ಅದು ನನಗೆ ತಿಳಿಯದು. ನಿಮ್ಮ ಮನೆಗೆ ಅದೋ ದೊಡ್ಡ ಮನುಷ್ಯರು ಬಂದಿರುವರಂತೆ. ನಾನು ಅವರ ಜತೆಯಲ್ಲಿ ಹೊರಡಬೇಕಂತೆ ಅವರು ನನಗೆ ಒಂದು ಚಾಕರಿಯನ್ನು ಸಂಪಾದಿಸಿಕೊಡುತ್ತಾರಂತೆ ಒಂದುವೇಳೆ ನನಗೆ ಕೆಲಸ ಸಿಕ್ಕುವುದಾದರೆ, ನಾನು ಇಲ್ಲಿರುವುದಕ್ಕಾಗುವುದಿಲ್ಲ ಕೊಂಚಕಾಲವಾದ ಬಳಿಕ ನಾನು ಬರುವುದಾದರೂ, ಆಗ ನಿನ್ನೊಡನೆ ಮಾತನಾಡುವುದಕ್ಕೂ ಅವಕಾಶವಾಗಲಾರದೆಂದು ತೋರುತ್ತಿರುವುದು

ಸರಳೆ—ಮಾತನಾಡುವುದಕ್ಕೆ ಅವಕಾಶವಿಲ್ಲವೇಕೆ?

ವಿನಯ—ನಿನಗೆ ಬೇರೆಯ ಕಡೆ ವಿವಾಹವಾಗುವುದಾದರೆ,

ಸರಳೆ—ಮದುವೆಯ ಮಾತು ಹಾಗಿರಲಿ.

ವಿನಯ—ಅದೇಕೆ?

ಸರಳೆ—ಈಗ ನನಗೆ ಆ ಮಾತು ಹಿತವಿಲ್ಲ. ನಾವಿಬ್ಬರೂ ಮಹಡಿಯ ಮೇಲೆ ಹೋಗಿ ಮಾತನಾಡುವ. ನಿನ್ನೊಡನೆ ನಾನು ಬಲು ಮಾತನಾಡಬೇಕಾಗಿರುವುದು, ನನ್ನೊಡನೆ ಬಾ.

ಸರಳಕುಮಾರಿಯು ಈ ಮಾತನಾಡುವಷ್ಟರಲ್ಲಿಯೇ ಪರಿಚಾರಕನೊಬ್ಬನು ಬಂದು ವಿನಯನಿಗಿಂತೆಂದನು —

"ವಿನಯ ಮಹಾಶಯ! ತಾವು ಬೇಗನೆ ಬರೋಣವಾಗಲಿ. ತಾವು ಅರೊಡನೆ ಹೊರಡಬೇಕೆಂದು ನಿಶ್ಚಯವಾಗಿದ್ದಿತೋ, ಆ ಮಹನೀಯರು ಹಡಗಿನ ಹತ್ತಿರಕ್ಕೆ ಹೋಗಿರುವರು. ಮನೆಯ ಯಜಮಾನರೂ ಅವರ ಜತೆಯಲ್ಲಿಯೇ ಇರುವರು. ಈಗಳೇ ತಮ್ಮನ್ನು ಅಲ್ಲಿಗೆ ಕರೆದುಕೊಂಡು ಬರು

ವಂತೆ ನನಗೆ ಅಪ್ಪಣೆಯಾಗಿರುವುದು. ಸಾವಕಾಶವಾಗುವುದಾದರೆ, ಹಡಗು ಹೊರಟುಹೋಗುವುದೆಂದು ತಮಗೆ ತಿಳಿಸಲೋಸುಗ ನಾನು ಇಲ್ಲಿಗೆ ಬಂದಿರುವೆನು. ತಾವು ತಡಮಾಡದೆ ನನ್ನ ಜತೆಯಲ್ಲಿಯೇ ಬರೋಣವಾಗಲಿ."

ಇದನ್ನು ಕೇಳಿ ವಿನಯನು—"ನಡೆ, ಹೊರಡೋಣ." ಎಂದು ಹೇಳಿದ ಕೂಡಲೆ ಹೊರಡಲು ಸಿದ್ಧನಾದನು

ಸರಳಕುಮಾರಿಯು ಇದನ್ನು ನೋಡಿ ಎದೆಯೊಡೆದವಳಾಗಿ—"ವಿನಯ, ಈಗಳೇ ಹೊರಡಬೇಕೇನು ? ಬೆಳಕು ಹರಿದೊಡನೆಯೇ ಹೊರಡಲಾಗಲಾರದೇ ?" ಎಂದು ಕೇಳಿದಳು

ವಿನಯ—ನಾನೇನ ಮಾಡಲಿ, ಸರಳಾ !

ಸರಳೆ—ಹಾಗಾದರೆ ಮೇಲಕ್ಕೆ ಬರುವುದಿಲ್ಲವಷ್ಟೇ ?

ವಿನಯ—(ಗದ್ಗದ ಸ್ವರದಿಂದ) ನಾನು ಹೇಗೆ ಬರಲಿ ?

ಸರಳೆ—ಚಾಕರಿಗಾಗಿ ಪರಸ್ಥಳ ಹೊರಡಬೇಕೇ ?

ವಿನಯ—ಹೊರಡಲೇ ಬೇಕಾಗಿ ಬಂದು ಸೇರಿದೆ.

ಸರಳಕುಮಾರಿಯ ಬಾಯಲ್ಲಿ ಮುಂದೆ ಮಾತೇ ಹೊರಡಲಿಲ್ಲ. ತಂತಿಯು ಕಿತ್ತುಹೋದ ಮೇಲೆ, ವೀಣೆಯು ಹೇಗೆ ದನಿಗೆಯ್ಯುವುದಿಲ್ಲವೋ, ಹಾಗೆಯೇ ಸರಳೆಯ ಕಂಠಸ್ವರವೂ ನಿಂತುಹೋಯಿತು ಅವಳ ಪ್ರಶಾಂತವಾದ ನೀಲೋತ್ಪಲ ಸಮಾನ ಕಾಂತಿಯುಳ್ಳ ಕಣ್ಣುಗಳಿಂದ ಮೊದಮೊದಲು ಒಂದೆರಡು ತೊಟ್ಟು ಕಣ್ಣೀರು ಸುರಿಯುತ್ತಿದ್ದುದು ಕ್ರಮಕ್ರಮವಾಗಿ ಪ್ರಬಲಿಸಿ ದರದರನೆ ಪ್ರವಾಹದಂತೆ ಹರಿಯಲಾರಂಭಿಸಿ ಸರಳೆಯ ವಕ್ಷವನ್ನು ನನೆಯಿಸಿಬಿಟ್ಟಿತು. ವಿನಯಕುಮಾರನು ಸರಳೆಯ ಮನದ ಆವೇಗವನ್ನು ನೋಡಿ ಸಂಕಟವನ್ನು ತಡೆಯಲಾರದೆ ಕುಗ್ಗಿದ ದನಿಯಿಂದ—"ಸರಳೆ ! ಹೊತ್ತಾಯಿತು. ನಾನು ಹೋಗಿ ಬರುವೆನು," ಎಂದನು.

ಸರಳೆಯು ಬಿಕ್ಕಿಬಿಕ್ಕಿ ಅಳುತ್ತಾ—"ಆಗಬಹುದು," ಎಂದುಸುರಿದ ಮಾತನ್ನು ಕೇಳಿ, ವಿನಯನು ಭೃತ್ಯನೊಡನೆ ನದಿಯ ತಡಿಗೈತಂದು ಹಡಗನ್ನೇರಿ ಭೃತ್ಯನನ್ನು ಕುರಿತು—"ಜಾನಕೀನಾಥನು ಮನೆಗೆ ಬಂದಾಗ, ಆತನಿಗೆ ನನ್ನ ಸಂಗತಿಯನ್ನರುಹಿ, ನಾನು ಶೀಘ್ರದಲ್ಲಿಯೇ ಬರುವೆನೆಂದು ತಿಳಿಸು," ಎಂದು ಹೇಳಿ ಸುಮ್ಮನಾದನು. ಭೃತ್ಯನು ನಮಸ್ಕರಿಸಿ ಹೊರಟುಹೋ

ಭ್ಯಿರವಿಯ ನೀರನ್ನು ಭೇದಿಸಿಕೊಂಡು ಕಲಕಲ ಶಬ್ದದೊಡನೆ ಪೂರ್ವಾಭಿಮುಖವಾಗಿ ವಾಯುವೇಗದಿಂದ ಹೊರಟೇ ಹೊರಟಿತು.

ಪಾಠಕ ಮಹಾಶಯ ! ಈ ಮಧ್ಯದಲ್ಲಿ ಒಂದು ಸಂಗತಿಯನ್ನು ತಿಳಿಸಬೇಕೆಂದು ಯತ್ನಿಸಿರುವೆವು. ಅದು ಕಾಲೋಚಿತವಲ್ಲದಿದ್ದರೂ, ಅದನ್ನು ನಿಮ್ಮ ಅವಗಾಹನೆಯಲ್ಲಿ ತಂದುಕೊಳ್ಳತಕ್ಕುದಿದೆ. ಅದರಿಂದ ಪ್ರಯೋಜನವಿದೆಯೋ ಪ್ರಯೋಜನವಿಲ್ಲವೋ ನಮಗೆ ತಿಳಿಯದು. ಕಥೆಯ ಸಂದರ್ಭಗಳಲ್ಲಿ ಎಲ್ಲವೂ ಪ್ರಯೋಜನಕಾರಿಯಾಗಿರಬೇಕೆಂಬ ನಿಯಮವೇನೂ ಕಂಡು ಬರುವುದಿಲ್ಲ. ಎಲ್ಲವೂ ರಸವೇ ಆದರೆ, ರಸಕ್ಕೆ ಪುಷ್ಟಿಯೆಲ್ಲಿಯದು ? ಅಲ್ಲಲ್ಲಿ ನೀರಸವಾದ ವಿಷಯಗಳೂ ಅಡಗಿರಬೇಕು. ಪ್ರಕೃತದಲ್ಲಿ ತಿಳಿಸಬೇಕೆಂದಿರುವ ಅಪ್ರಕೃತವಾದ ವಿಷಯವು ನೀರಸ ಪ್ರಕರಣದಲ್ಲಿ ಒಂದಾದರೂ ಪಾಠಕಮಹಾಶಯರು ತಮ್ಮ ಉದಾರ ಹೃದಯದಲ್ಲಿ ಇದನ್ನೊಂದು ಕಡೆಯಾದರೂ ಧಾರಣಮಾಡಿರಬೇಕೆಂಬುದೇ ಗ್ರಂಥಕಾರರ ಆಶಯವು.

ಜಾನಕೀನಾಥನ ಹೆಸರನ್ನು ನಾವು ಎರಡು ಮೂರು ಕಡೆಗಳಲ್ಲಿ ಎತ್ತಿ ಬರೆದಿರುವೆವು ಆತನ ಪರಿಚಯವನ್ನುಂಟುಮಾಡಿಕೊಡದಿದ್ದಲ್ಲಿ, ನಾವು ಹಳೆಯ ಕಾಲದ ಮನುಷ್ಯರೆಂದೂ, ನವನಾಗರಿಕರಲ್ಲವೆಂದೂ ಅನೇಕರು ಅಭಿಪ್ರಾಯ ಪಡುವುದುಂಟು. ಈ ಬಗೆಯ ಅಪವಾದವನ್ನು ತಪ್ಪಿಸಿಕೊಳ್ಳುವುದಕ್ಕಾದರೂ ನಾವು ಜಾನಕೀನಾಥನ ಪರಿಚಯವನ್ನುಂಟುಮಾಡಿಕೊಡುವೆವು. ಜಾನಕೀನಾಥನು ಜೋಡೀದಾರನ ದೊಡ್ಡ ಮಗನು. ಅವನಿಗೆ ೨೫ ವರ್ಷ ವಯಸ್ಸು. ಜಾನಕೀನಾಥನು ವಿನಯನಂತೆಯೇ ಸುಂದರನೂ ಸುಶಿಕ್ಷಿತನೂ ಸಚ್ಚರಿತ್ರ ಸಂಪನ್ನನಾದ ಯುವಕನೂ ಆಗಿದ್ದನು. ಜಾನಕೀನಾಥನ ಚರಿತ್ರೆಯ ವಿಷಯದಲ್ಲಿ ತಂದೆಯಾದ ಅಚ್ಯುತಾನಂತ ಗೋವಿಂದನಿಗೆ ಅಷ್ಟಾಗಿ ತೃಪ್ತಿಯಿರಲಿಲ್ಲ. ಯಜಮಾನನು ಮಗನನ್ನು ಅಡಿಗಡಿಗೆ ನಿಂದಿಸುತ್ತಾ ತನ್ನ ಅಭಿಪ್ರಾಯವನ್ನೂ ತಿಳಿಸಿದ್ದನು. ಆದುದರಿಂದ ತಂದೆಯ ಸಂಸಾರಕ್ಕೆ ಸಂಬಂಧಪಟ್ಟ ಆವ ವಿಷಯದಲ್ಲಿಯೂ ಮಗನನ್ನು ಸಲಹೆ ಕೇಳುತ್ತಿರಲಿಲ್ಲ. ಇದನ್ನು ಮಗನೂ ಚೆನ್ನಾಗಿ ಅರಿತವನಾಗಿಯೇ ಇದ್ದನು. ಮಗನಾದ ಜಾನಕೀನಾಥನು ತಂದೆಗೆ ವಿರೋಧವಾದ ಒಂದು ಗುರುತರವಾದ ತಪ್ಪನ್ನು ಮಾಡಿದ್ದುದರಿಂದ ಬಲ್ಲಿದನಾದ ತಂದೆಯು ಮಗನ ವಿಷಯದಲ್ಲಿ ಅಪರಾಗ ತೋರಿಸಿದುದೇನೂ ಅತಿಶಯವಲ್ಲ. ಆ ತಪ್ಪಾದರೋ ಈ ಬಗೆಯಾಗಿದ್ದಿತೆಂದು ಬಲ್ಲವರು ಆಡಿಕೊಳ್ಳುತ್ತಿದ್ದರು:—

ಜಾನಕೀನಾಥನಿಗೆ ಧನ, ಮಾನ, ವಿದ್ಯಾ, ಬುದ್ಧಿ, ತಾಯಿ, ತಂದೆ, ಬಂಧು, ಬಾಂಧವರು ಎಲ್ಲರೂ ಇರುವರು. ಆತನಿಗೆ ಆವುದರಲ್ಲಿಯೂ ಆವ ಕೊರತೆಯೂ ಇರಲಿಲ್ಲ. ಹೀಗಿದ್ದರೂ ಜಾನಕೀನಾಥನು ತನಗೆ ಧರ್ಮದಿಂದ ವಿವಾಹಿತಳಾದ ಸರೋಜಿನೀ ಎಂಬುವಳ ಸ್ವಾರ್ಥವನ್ನರಿಯದ ಪ್ರಣಯದ ಪಾಪದಲ್ಲಿ ಸಿಲುಕಿ ಪರಾಧೀನನಾಗಿ ಬಿಟ್ಟಿದ್ದನು. ಇದರಿಂದ ಸರ್ವನಾಶವುಂಟೆಂದು ತಿಳಿದ ಜೋಡೀದಾರನ ಆಗ್ರಹಕ್ಕೆ ಪಾತ್ರವಾಗಿ, ಜಾನಕೀನಾಥನು ಒಂದೊಂದು ವೇಳೆ ವ್ಯಸನ ಪಡುತ್ತಿದ್ದರೂ, ಸರೋಜಿನಿಯ ಅವ್ಯಾಜ ಮಧುರವಾದ ಸಹವಾಸದಲ್ಲಿ ಸ್ವರ್ಗಸುಖವನ್ನೇ ಅನುಭವಿಸುತ್ತಿದ್ದನು. ಸರೋಜಿನಿಯು ೨೦ ವರ್ಷ ವಯಸ್ಸಿನ ಪೂರ್ಣಯೌವನೆ. ಶ್ರಾವಣಮಾಸದ ಗಂಗೆಯಂತೆ, ಶರತ್ಕಾಲದ ಹುಣ್ಣಿಮೆಯ ರಾತ್ರಿಯಲ್ಲಿನ ಬೆಳ್ದಿಂಗಳಂತೆ, ಆಕೆಯ ಯೌವನವು ಅಂಗಾಂಗಗಳಲ್ಲಿಯೂ ವ್ಯಾಪಿಸಿ ನಲಿದಾಡುತ್ತಿದ್ದಿತು. ಸರೋಜಿನಿಯಾದರೋ ಆವಾಗಲೂ ಪತಿಪ್ರೇಮ ಪರಾಯಣೆ; ಗುಣರೂಪಗಳಲ್ಲಿ ಕಾಮಿನಿಯ ಕುಲಕ್ಕೆ ಆದರ್ಶಸ್ವರೂಪಿಣಿ.



# ನಾಲ್ಕನೆಯ ಲಂಬಕ.



## ಅ ದ ರ್ಶ ನ ಯಾ ತ ನೆ.

ಪ್ರೇಮವೆಂಬುದು ಅದರ್ಶನದಲ್ಲಿ ಎಂತಹ ಕಷ್ಟದಾಯಕವು! ವಿಯೋಗದಲ್ಲಿ ಒಂದು ದಿನವೂ ಒಂದು ಯುಗವಾಗಿ ಪರಿಣಮಿಸುವುದು. ವಿನಯಕುಮಾರನು ಹೊರಟು ಹೋಗಿ ಇನ್ನೂ ಒಂದು ದಿನವಾಗಲಿಲ್ಲ, ಆದರೂ ಸರಳೆಗೆ ಎಷ್ಟೋ ಯುಗಗಳಾದಂತೆ ತೋರಲಾರಂಭಿಸಿತು. ಇದೇನಚ್ಚರಿ! ನಿತ್ಯವೂ ಸರಳೆಯು ವಿನಯನನ್ನು ಕಣ್ಣಿದಿರಿನಲ್ಲಿ ಕೂಡಿಸಿ ಕೊಂಡಿರುತ್ತಿದ್ದಳೇ? ಇಲ್ಲ; ಹಾಗಾದರೆ ಈಗ ಬಂದುದೇನು? ಇದಕ್ಕೆ ಕಾರಣವುಂಟು. ಸಮೀಪದಲ್ಲಿದ್ದರೆ, ಇಷ್ಟ ಬಂದಾಗೆಲ್ಲಾ ನೋಡಬಹುದು, ಮಾತನಾಡಬಹುದು; ಆಗಿಂದಾಗ ಯೋಗಕ್ಷೇಮವನ್ನೂ ವಿಚಾರಿಸಿಕೊಳ್ಳುತ್ತಿರಬಹುದು. ಈಗಳಾದರೋ "ವಿನಯನು ಎಲ್ಲಿಗೆ ಹೋಗುವನೋ? ಆವ ಅವಸ್ಥೆಯಲ್ಲಿರುವನೋ? ಜೀವಿಕೆಗಾಗಿ ಎಂತಹ ಪಡಬಾರದ ಕಷ್ಟಗಳನ್ನನುಭವಿ

ಸುವನೋ ? ದೇಹಾಲಸ್ಯವುಂಟಾದರೆ, ಸೇವೆ ಮಾಡುವವರಾರು ? ಹೊತ್ತು ಹೊತ್ತಿಗೆ ಭೋಜನೋಪಚಾರಗಳೇನಾಗುವುವೋ ?" ಎಂದು ಮುಂತಾಗಿ ಬಲವತ್ತರವಾದ ಆಲೋಚನೆಯು ಸರಳೆಯ ಸರಳವಾದ ಹೃದಯವನ್ನು ತರಳಮಾಡಿತು.

ಸರಳಕುಮಾರಿಯು ತನ್ನ ಕೋಣೆಯಲ್ಲಿ ಕುಳಿತಿರುವಳು. ಘನ ಕೃಷ್ಣ ವಾದ ಕೇಶಜಾಲವು ಮುಖದ ಮೇಲೆಲ್ಲಾ ಬಿದ್ದು ಒದ್ದಾಡುತ್ತಿರುವುದು. ಕಪೋಲಯುಗಳದಲ್ಲಿ ಸ್ವೇದಬಿಂದುಗಳು ಮುತ್ತಿನಂತೆ ಕಾಣಿಸಿಕೊಳ್ಳುತ್ತಿ ಘುವುವು. ಆಕರ್ಣ ವಿಶ್ರಾಂತವಾದ ನಯನೇಂದೀವರದ್ವಯವು ಅರೆವಾಸಿ ಮುಚ್ಚಲ್ಪಟ್ಟಿರುವುದು. ಮೈಮೇಲಣ ಸೆರಗು ಜಾರುತಲಿರುವುದು. ಚಿಂತಾ ಸಾಗರದ ಅಲೆಗಳಿಗೆ ಸಿಲುಕಿ ತೇಲಿ ಮುಳುಗುತಿದ್ದ ಸರಳಕುಮಾರಿಗೆ ಇದಾ ವುದೂ ಗೊತ್ತಾಗಲೇ ಇಲ್ಲ. ಬಾಯಲ್ಲಿ ಮಟ್ಟಿಗೆ—"ಹಾ, ದೈವವೆ ! ನನ್ನ ಪ್ರಾಣವಾದರೂ ಹೋಗಬಾರದೇತಕೆ?" ಎಂಬ ಅಸ್ಫುಟವಾದ ಮಾತು ತನ್ನ ಷ್ಟಕ್ಕೆ ತಾನೇ ಹೊರಬೀಳುತಲಿದ್ದಿತು.

ಬಾಲಿಕೆಯ ಈ ಸಣ್ಣ ವಯಸ್ಸಿನಲ್ಲಿ—ಅದರಲ್ಲಿಯೂ ಈ ಕೋಮ ಲವಾದ ಸಣ್ಣ ಹೃದಯದ ಮಧ್ಯದಲ್ಲಿ—ಇಷ್ಟು ದುರಂತವಾದ ಚಿಂತೆಗೆ ಕಾರಣವೇನು ? ಪ್ರಕೃತಾವಸ್ಥೆಯಲ್ಲಿ ಸರಳೆಯ ರಾಹುಗ್ರಸ್ತವಾದ ಮುಖ ಚಂದ್ರನನ್ನು ನೋಡಿದರೆ, ಈ ಹಾಳು ಸಂಸಾರದಲ್ಲಿಯೇ ಸುಖವಿಲ್ಲವೆಂದು ತೋರಿಬರುವುದು, ಹಾಗೂ ಅವಳ ಸ್ವಾರ್ಥತೆಯನ್ನರಿಯದ ಪ್ರೇಮಪೂರಿತ ವಾದ ಹೃದಯಾಂತರಾಳವನ್ನು ಪರಿಕಿಸಿ ನೋಡಿದರೆ, ಈ ಸಂಸಾರವು ಆನಂ ದದ ಮೇಲೆ ಆನಂದದ ಅಪಾರ ಪಾರಾವಾರವೆಂದು ತೋರಿಬರುವುದು. ಇದರ ತತ್ತ್ವವನ್ನು ವಿಚಾರಿಸಲಾಗಿ, ಈ ಲೋಕದಲ್ಲಿ ಸಂಪೂರ್ಣ ಸುಖವೂ ಸಂಪೂರ್ಣ ದುಃಖವೂ ಇಲ್ಲವೆಂದು ತೋರುವುದು. ಎಲ್ಲದರಲ್ಲಿಯೂ ಸುಖ ವಿರುವುದು, ಎಲ್ಲದರಲ್ಲಿಯೂ ದುಃಖವಿರುವುದು; ಸುಖದಲ್ಲಿ ದುಃಖವೂ, ದುಃಖದಲ್ಲಿ ಸುಖವೂ ಸೇರಿಕೊಂಡೇ ಇರುವುದು. ಪೂರ್ಣಚಂದ್ರನಿಗೆ ರಾಹು ಗ್ರಾಸವುಂಟು. ಸೂರ್ಯನಿಗೆ ದುರ್ಲಕ್ಷ್ಯವಾದ ತೇಜಸ್ಸಿರುವುದು. ನಕ್ಷತ್ರ ಗಳು ಅಗಮ್ಯವಾದುವು. ಪ್ರಣಯವು ವಿಯೋಗಕ್ಕೆ ಹೆದರುವುದು. ಸ್ನೇಹವು ಶಂಕೆಯಿಂದೊಡಗೂಡಿದುದು. ವಿದ್ಯೆಯಲ್ಲಿ ಸಂಶಯ ವುಂಟಾಗುವುದು. ಮೃತ್ಯುವು ನಮ್ಮಧೀನವಲ್ಲ. ಫಲದಲ್ಲಿ ವಿಷವು ಕಾಣಬರುವುದು. ಪುಷ್ಪದಲ್ಲಿ

ಕೀಟವಿದೆ. ಸಂಸಾರದಲ್ಲಿ ಪಾಪದ ಭೀತಿಯು ಅಡಿಗಡಿಗೆ ತಲೆದೋರುವುದು. ನಾರಿಯರ ಕೋಮಲವಾದ ಹೃದಯದಲ್ಲಿ ಶಾಠ್ಯವು ತೋರಿಬರುವುದು. ಹೀಗಿರುವುದಾದರೂ, ಸಮುದ್ರದಲ್ಲಿ ದ್ವೀಪಗಳುಂಟು. ಆಕಾಶದಲ್ಲಿ ಚಂದ್ರನಿರುವನು. ಮೇಘದಲ್ಲಿ ಮಿಂಚು ಮಿಂಚುವುದು. ಅರಣ್ಯದಲ್ಲಿ ಸುವಾಸನೆಯ ಹೂ ಅರಳುವುದು. ಶಿಶಿರಾನಂತರದಲ್ಲಿ ವಸಂತವು ತಲೆದೋರುವುದು. ಕಾಲದಲ್ಲಿ ಕೋಗಿಲೆಯು ಮಧುರವಾಗಿ ಗಾನಮಾಡುವುದು. ಸಂಸಾರದಲ್ಲಿ ಪ್ರಣಯವಿರುವುದು. ಮಾನವನ ಜೀವನ ಚರಿತ್ರೆಯಲ್ಲಿ ವಿವಾಹವೆಂಬುದುಂಟು. ಮೂರ್ಖತೆಯು ಶಾಂತಿಪ್ರದವು. ದಾರಿದ್ರ್ಯವು ರೋಗವನ್ನು ದೂರಮಾಡುವುದು. ವಿಯೋಗದಲ್ಲಿ ಔತ್ಸುಕ್ಯವಿದೆ. ಆದುದರಿಂದ ಇಹಲೋಕದಲ್ಲಿ ಸುಖದುಃಖಗಳೆರಡೂ ಒಂದಕ್ಕೊಂದು ಸೇರಿಕೊಂಡಿರುವುವು. ಆಶೆಯು ಹತಾಶೆಯಿಂದ ಸೇರಿರುವುದು. ಆಶೆಯಲ್ಲಿ ಚಿಂತೆ, ಹತಾಶೆಯಲ್ಲಿ ಪೀಡೆ. ಯಾರಿಗೆ ಆಸೆಯುಂಟೋ ಅವರ ಹೃದಯದಲ್ಲಿ ಚಿಂತೆಯು ಏಕಾಧಿಪತ್ಯಮಾಡುವುದು ಸಹಜವಾಗಿಯೇ ಇರುವುದು.

ಸರಳಕುಮಾರಿಗೆ ಆಸೆಯಿರುವುದು. ಆದುದರಿಂದಲೇ ಅವಳಿಗೆ ಇಷ್ಟು ಚಿಂತೆ—ಹಗಲಿನಲ್ಲಿಯೂ ರಾತ್ರಿಯಲ್ಲಿಯೂ ಒಂದೇ ಬಗೆಯ ಚಿಂತೆ. ಈ ಚಿಂತೆಯನ್ನು ನೋಡಲಾರದೆಯೇ ಸೂರ್ಯದೇವನು ಪಶ್ಚಿಮಸಾಗರದಲ್ಲಿ ಮುಳುಗಿ ಬಿಡೋಣವೆಂದು ತೆರಳಿದನು ಪಕ್ಷಿಗಳು ರಾತ್ರಿಯ ಆಗಮನವನ್ನು ಸಣ್ಣ ದನಿಯಿಂದ ಲೋಕಕ್ಕೆಲ್ಲಾ ತಿಳಿಸುತ್ತೆ, ತಮ್ಮತಮ್ಮ ಗೂಡುಗಳನ್ನು ಕುರಿತು ತೆರಳಿದುವು ವಾಯುವು ಅರ್ಧವಿಕಸಿತವಾದ ಕುಸುಮರಾಶಿಯಿಂದ ಪರಿಮಳವನ್ನು ಅಪಹರಿಸಿಕೊಂಡು ಎಲ್ಲಿಯೋ ಓಡಿಹೋಗುತಲಿದ್ದಿತು. ದನಕಾಯುವವರು ದನ ಕರುಗಳನ್ನು ಅಟ್ಟಿಕೊಂಡು ಮನೆಯ ಕಡೆಗೆ ಹೊರಟುಬರುತ್ತಿದ್ದರು. ಹೊಲವುಳುವವರು ತಮ್ಮ ನೇಗಿಲುಗಳನ್ನು ಹೆಗಲಮೇಲೇರಿಸಿಕೊಂಡು ಸರಸರನೆ ಮನೆಗೆ ಬಂದು ಸೇರುತ್ತಿದ್ದರು. ಗಿಡು ಮರಗಳ ಕೊಂಬೆಗಳ ಮಧ್ಯದಲ್ಲಿ ಒಂದೊಂದು ಕೋಗಿಲೆಯು ಕುಳಿತುಕೊಂಡು— "ಪಿವೂ, ಪಿವೂ" ಎಂದು ಗಾನಮಾಡುತ್ತಿದ್ದುವು. ಸರಳಕುಮಾರಿಯೂ ತನ್ನ ಕೋಣೆಯಲ್ಲಿ ಕುಳಿತುಕೊಂಡು ಏನೇನೋ ಚಿಂತಿಸುತ್ತಿದ್ದಳು. ಈ ಸಮಯದಲ್ಲಿ ಸರೋಜಿನಿಯು ನಗುತೆ ನಗುತೆ ಸರಳಕುಮಾರಿಯಿದ್ದಲ್ಲಿಗೆ ಬಂದು ನೋಡಿದಳು. ಅಲ್ಲಿ ಸರಳೆಯು ಪ್ರಗಾಢವಾದ ಚಿಂತಾಸಾಗರದಲ್ಲಿ ಮುಳು

ಗಿದ್ದುದನ್ನು ಕಂಡು ಸರೋಜಿನಿಯು ಹೆದರಿದವಳಾಗಿ—"ಮಗು ! ಅದೇಕೆ ವ್ಯಸನದಲ್ಲಿರುವೆ ? ಪ್ರಾಣಧನವನ್ನು ಕಳೆದುಕೊಂಡು ಸಂಕಟಪಡುವವರಂತೆ ನೀನು ಕಾಣಿಸಿಕೊಳ್ಳುವುದಕ್ಕೆ ಕಾರಣವೇನು ?" ಎಂದು ಕೇಳಿದಳು. ಕೂಡಲೆಯೇ ಸರಳೆಗೆ ಜ್ಞಾನೋದಯವಾಯಿತು. ಬಳಿಕ ಆಕೆಯು ನಾಚುಗೆಯಿಂದ ತಲೆವಾಗಿದವಳಾಗಿ ಸುಮ್ಮನಿದ್ದುಬಿಟ್ಟಳೇ ಹೊರತು ಅತ್ತಿಗೆಯ ಮಾತಿಗೆ ಏನೊಂದುತ್ತರವನ್ನೂ ಕೊಡಲಿಲ್ಲ. ಸರಳೆಯ ಈ ಭಾವವನ್ನು ನೋಡಿ ಸರೋಜಿನಿಯು—"ಸರಳೆ! ಆರನ್ನು ಸ್ಮರಿಸಿಕೊಂಡು ವ್ಯಸನಪಡುತ್ತಿರುವೆ?" ಎಂದು ಮತ್ತೆ ಕೇಳಿದಳು. ಸರಳೆಯು ಅತ್ತಿಗೆಯನ್ನು ದುರದುರನೆ ನೋಡಿದಳು. ಆದರೆ ಅವಳ ಬಾಯಿಂದ ಆವ ಮಾತೂ ಹೊರಡಲಿಲ್ಲ. ಇದನ್ನು ನೋಡಿ ಸರೋಜಿನಿಯು ಚಕಿತಳಾಗಿ—"ಸುಸ್ಥಳಾಗಿರುವೆಯಷ್ಟೆ?" ಎಂದು ಪ್ರಶ್ನೆಮಾಡಿದಳು.

ಸರಳೆ—ಇಲ್ಲದೇ ಏನು !

ಸರೋಜಿನಿ—ಹಾಗಾದರೆ ನೀನು ಚಿಂತಿಸುವುದೇತಕೆ ? ಸರಿ ಸರಿ, ಗೊತ್ತಾಯಿತು. ವಿನಯನು ಹೊರಟು ಹೋದುದಕ್ಕಾಗಿ ನೀನು ಚಿಂತಿಸುತ್ತಿರುವೆ. ಆರೂ ಪರಸ್ಥಳಕ್ಕೆ ಹೋಗುವುದೇ ಇಲ್ಲವೆ ? ವಿನಯನು ಇಷ್ಟರಲ್ಲಿಯೇ ಬರಬಹುದು ಬಳಿಕ ನೀನು ಏನಮಾಡುವೆಯೋ ನೋಡುವೆನು.

ಸರಳೆ—ಇಲ್ಲದುದನ್ನು ಹೇಳಬೇಡ. ವಿನಯನು ಹೊರಟುಹೋದುದಕ್ಕಾಗಿ ಆರು ಚಿಂತಿಸುವರು ?

ಸರೋಜಿನಿ—ಹಾಗಾದರೆ ನೀನು ಆಲೋಚಿಸುತ್ತಿರುವುದೇನು? ಅದನ್ನಾದರೂ ತಿಳಿಸು.

ಸರಳಕುಮಾರಿಯು ಯತ್ನವಿಲ್ಲದೆ ಅತ್ತಿಗೆಯ ನಿರ್ಬಂಧಕ್ಕೆ ಸಿಕ್ಕಿಬಿದ್ದವಳಾಗಿ ಇದ್ದ ಸಂಗತಿಯನ್ನು ಇದ್ದಹಾಗೆಯೇ ಹೇಳಬೇಕಾಗಿ ಬಂದು ಸೇರಿತು. ಸರಳೆಯು ಹೇಳಿದುದೇನೆಂದರೆ —

ಅತ್ತಿಗೆ! ವಿನಯಕುಮಾರನು ಹೊರಟು ಹೋಗುವಾಗ—"ಸರಳೆ ! ನಾನೇನೋ ಪರದೇಶಕ್ಕೆ ಹೊರಟು ಹೋಗುವೆನು. ಸ್ವಲ್ಪದಿನಗಳಾದಮೇಲೆ ನಾನು ಬಂದರೂ ಬರಬಹುದು. ಆಗ ಮಟ್ಟಿಗೆ ನಾನು ನಿನ್ನನ್ನು ನೋಡಲು ಆಗುವುದೋ, ಇಲ್ಲವೋ; ಬಹುತರವಾಗಿ ಆಗಲಾರದು," ಎಂದು ಹೇಳಿದುದನ್ನು ಕೇಳಿ, ನಾನು—"ಅದೇಕೆ ?" ಎಂದೆನು. ಅದಕ್ಕೆ ಅವನು—"ನಾನು

ಹೊರಟುಹೋದ ಕೂಡಲೆ ನಿನಗೆ ದೊಡ್ಡ ಕಡೆಯಲ್ಲಿ ವಿವಾಹವಾಗುವುದು. ತರುವಾಯ ನಾನು ಬಂದರೂ, ನಿನ್ನನ್ನು ನೋಡಿ ಮಾತನಾಡಿಸುವುದಕ್ಕಾಗಲಾರದು. ದೊಡ್ಡಪದವಿಯಲ್ಲಿರಶಕ್ಕವರು ಸರ್ವಪ್ರಕಾರದಿಂದಲೂ ಬಡವರ ಸಹವಾಸವನ್ನು ದೂರಮಾಡುತ್ತಿರುವರು. ನಾನಾದರೋ ಕೂಳಿಗಿಲ್ಲದ ಬಡವನೇ ಅಹುದು," ಎಂದು ಹೇಳುತ್ತಾ ಹೊರಟುಹೋದನು.

ಅತ್ತಿಗೆ! ಇದರ ಅರ್ಥವೇನಿರಬಹುದು? ನಾನು ಬಡವನೆಂದೂ, ಭಾಗ್ಯವಂತರ ಸಹವಾಸವು ನನಗೆ ದೊರೆವುದು ಅಸಾಧ್ಯವೆಂದೂ, ಮತ್ತು ಏನೇನೋ ಅಭಿಪ್ರಾಯವನ್ನು ಮನದಲ್ಲಿಟ್ಟುಕೊಂಡು ಆ ಮಾತ ಹೇಳಿದ ಹಾಗಿದೆಯಲ್ಲವೇ? ಎಂದು ಸರಳೆಯು ಕೇಳಿದಳು

ಸರೋಜಿನಿಯು ಈ ಮಾತನ್ನು ಕೇಳಿ ನಕ್ಕುಬಿಟ್ಟಳು ಸರಳೆಯಾದರೋ ನಾಚುಗೆಯಿಂದ ತಲೆಯನ್ನು ತಗ್ಗಿಸಿಕೊಂಡಳು ಬಳಿಕ ಸರೋಜಿನಿಯು ತನ್ನ ಹಾಸ್ಯದ ಮಾತನ್ನು ನಿಲ್ಲಿಸಿ ನಾದಿನಿಯನ್ನು ಕುರಿತು,—"ಸರಿ, ಆಮೇಲೆ?" ಎಂದು ಮಿದುನುಡಿಯನ್ನಾಡಿದಳು.

ಅತ್ತಿಗೆಯು ಪರಿಹಾಸ್ಯ ಮಾಡುವಳೆಂದು ತಿಳಿದು ಕೋಪಗೊಂಡವಳಾಗಿ ಸರಳೆಯು—"ಹಾಗಾದರೆ ನಾನು ಏನನ್ನೂ ಹೇಳುವುದಿಲ್ಲ," ಎಂದುತ್ತರವಿತ್ತಳು

ಸರೋಜಿನಿ— (ಸರಳೆಯ ಕೈಗಳನ್ನು ಹಿಡಿದುಕೊಂಡು) ನೀನು ಹೇಳದೇ ಹೋದರೆ, ನನ್ನ ಮೇಲಣ ಆಶೆಯಿರುವುದು

ಸರಳೆ—ಕೇಳು, ಅತ್ತಿಗೆ! ನನ್ನನ್ನು ದೊಡ್ಡ ಸ್ಥಳದಲ್ಲಿ ಕೊಟ್ಟು, ನನ್ನ ತಂದೆಯು ಮದುವೆ ಮಾಡುವಹಂತೆ ನಾನಾದರೋ ಒಬ್ಬ ದರಿದ್ರನ ಹೊಟ್ಟೆಯಲ್ಲಿ ಹುಟ್ಟಿದ್ದರೆ ಚೆನ್ನಾಗಿರುತ್ತಿದ್ದಿತಲ್ಲವೇ?

ಸರೋಜಿನಿ—ಅದು ಹೇಗೆ?

ಸರಳೆ—ಅದು ಹೇಗೂ ಅಲ್ಲ. ನಮ್ಮ ತಂದೆಯು ಮನೆಗೆ ಆವಾಗ ಬರುವನು?

ಸರೋಜಿನಿ—ನಿಮ್ಮ ತಂದೆಯು ಮನೆಗೆ ಬಂದ ಮೇಲೆ ನೀನೇನ ಮಾಡುವೆ?

ಸರಳೆ—ಅದು ನನಗೆ ಗೊತ್ತಿಲ್ಲ

ಸರೋಜಿನಿ—ನೀನು ಹೇಳದಿದ್ದರೂ ನನಗೆ ಗೊತ್ತಾಯಿತು. ನಿನ್ನ

ನ್ನು ವಿನಯನಿಗೇನೇ ಕೊಟ್ಟು ಮದುವೆ ಮಾಡಬೇಕೆಂದು ತಂದೆಯನ್ನು ಕೇಳಿಕೊಳ್ಳುವುದಕ್ಕಾಗಿ ನೀನು ಹೀಗೆ ಕೇಳಿದುದು

ಸರಳೆ—ಅದಲ್ಲ

ಸರೋಜಿನಿ—ಹಾಗಾದರೆ ?

ಸರಳೆ—ನಿನ್ನ ಗಂಡನಿಗೆ ಹೇಳಿ ನಿನ್ನನ್ನು ಹೊಡೆಯಿಸಬೇಕೆಂದು ನಾನು ತಂದೆಯನ್ನು ಕೇಳಿಕೊಳ್ಳುವೆನು

ಸರೋಜಿನಿ—ಅದರಿಂದ ನಿನಗೆ ಬಂದ ಭಾಗ್ಯವೇನು ?

ಸರಳೆ—ಅದರಿಂದ ಫಲವುಂಟು.

ಸರೋಜಿನಿ—ಫಲವಿರುವುದಾದರೆ, ಅದನ್ನು ನೀನೊಬ್ಬಳೇ ಅನುಭವಿಸುವುದು ಸರಿಯಲ್ಲ. ವಿನಯನೂ ಬರಲಿ. ಆಮೇಲೆ ನೀವಿಬ್ಬರೂ ಸೇರಿಕೊಂಡು ಆ ಫಲವನ್ನು ಮನಬಂದಷ್ಟು ಅನುಭವಿಸಿರಿ.

ಸರಳೆ—ದುರುಳೇ ! ದೂರ ಹೋಗು.

ಸರೋಜಿನಿ—ನಾನೇಕೆ ಹೋಗಲಿ ? ಅರು ದೂರ ಹೋದವರ ವಿಷಯವಾಗಿ ಚಿಂತಿಸುತ್ತಿರುವರೋ, ಅವರೇ ಹೋಗಬೇಕು

ಸರಳೆ—ನಾನು ಚಿಂತಿಸುತ್ತಿರುವ ಬಗೆ ಬೇರೆ ನಾನು ಏನನ್ನು ಚಿಂತಿಸುತ್ತಿರುವೆನೋ, ಏತಕ್ಕೆ ಚಿಂತಿಸುತ್ತಿರುವೆನೋ, ಅದು ನನಗೆ ತಿಳಿಯದು. ನನಗಾದರೋ ಈ ಭೂಮಿಯಲ್ಲಿ ವಿನಯನೇ ಎಲ್ಲಾ ದೊಡ್ಡವರಿಗಿಂತಲೂ ದೊಡ್ಡವನು ಆತನೇ ಎಲ್ಲಾ ಬಂಧುಗಳಿಗಿಂತಲೂ ಹತ್ತಿರದ ಬಂಧುವು. ನಾನು ಅದೇತಕ್ಕೆ ಹೀಗೆ ಭಾಪಿಸುವೆನೋ, ಅದು ಮಟ್ಟಿಗೆ ನನಗೆ ಗೊತ್ತಿಲ್ಲ. ನಾನು ವಿನಯಕುಮಾರನನ್ನು ಕಂಡೆನೆಂದರೆ, ಅನಿರ್ವಚನೀಯವಾದುದೊಂದು ಸಂತೋಷವು ನನ್ನ ಹೃದಯದಲ್ಲಿ ಅಂಕುರಿತವಾಗುವುದು. ಆತನ ಮಾತನ್ನು ಕೇಳುವುದಕ್ಕ ನನ್ನ ಹೃದಯವು ಆವಾಗಲೂ ತತ್ತರಗುಟ್ಟುತ್ತಿರುವುದು ಆತನನ್ನು ಒಂದು ಕ್ಷಣಕಾಲವಾದರೂ ನೋಡದಿದ್ದಲ್ಲಿ, ನನ್ನ ಹೃದಯದಲ್ಲಿ ಹೇಳಲಸದಳವಾದ ಸಂಕಟವುಂಟಾಗಿ ಪ್ರಾಣವೇ ನನಗೆ ಭಾರವಾಗುವುದು. ಅತ್ತಿಗೆ ! ನೀನು ಹೇಳು, ಹೀಗೆಲ್ಲಾ ಆಗುವುದೇತಕ್ಕೆ ?

ಸರೋಜಿನಿಯು ಒಂದೇ ಮನಸ್ಸಿನಿಂದ ಸರಳೆಯ ಮಾತ ಕೇಳಿ ಕೊಂಚಹೊತ್ತು ಹಾಗೆಯೇ ತನ್ನಲ್ಲಿ ತಾನೇ ಆಲೋಚಿಸಿದಳು:—"ನಿರ್ಮಲವಾದ ಕನ್ನಡಿಯಲಿ ಪ್ರತಿಬಿಂಬವು ಹೇಗೋ, ನದಿಯ ವಕ್ರೋದ್ದೇಶದಲಿ ಪ್ರತಿ

ಫಲಿಸಿದ ಶರತ್ಕಾಲದ ಹುಣ್ಣಿಮೆಯ ಬೆಳ್ದಿಂಗಳು ಹೇಗೋ, ಹಾಗೆಯೇ ವಿನಯನ ಪ್ರೇಮವು ಸರಳೆಯ ಮನದಲ್ಲಿ ಪ್ರತಿಬಿಂಬಿತವಾಗಿರುವುದು. ಸರಳೆಯು ವಿನಯನನ್ನು ಹೊರತು ಮತ್ತಾರನ್ನೂ ಪ್ರೀತಿಸಳು, ವಿನಯನೂ ಸರಳೆಯನ್ನೇ ಪ್ರೀತಿಸುತ್ತಿರುವನು. ಈ ಲೋಕದಲ್ಲಿ ಇವರಿಬ್ಬರೇ ಪರಸ್ಪರ ಬಂಧುಗಳು."

ಸರಳಕುಮಾರಿಯು ತನ್ನ ಮಾತಿಗ ಉತ್ತರವಿಲ್ಲದಿರುವುದನ್ನು ನೋಡಿ—"ಅದೇಕತ್ತಿಗೆ! ನನ್ನ ಮಾತಿಗೆ ಉತ್ತರವೇ ಕೊಡುವುದಿಲ್ಲ" ಎಂದಳು.

ಸರೋಜಿನಿ—ಉತ್ತರ ಕೊಡುವೆನು.

ಸರಳೆ—ತಡವೇಕೆ?

ಸರೋಜಿನಿ—ಆರು ಆರನ್ನು ಪ್ರೀತಿಸುವರೋ, ಅವರು ಅವರ ವಿಷಯದಲ್ಲಿ ನಿನ್ನಂತೆಯೇ ಮಾಡುವರು ಇದು ಪ್ರಕೃತಿಯ ನಿಯಮವೇ ಆಗಿರುವುದು ಇದಕ್ಕೆ ಪ್ರಣಯ, ಪ್ರೇಮ, ಸ್ನೇಹ, ಪ್ರೀತಿ, ಅನುರಾಗ ಎಂದು ಹೇಳುವರು. ಸರಳೆ! ಏಳು, ಹೊತ್ತಾಯಿತು ನಾವು ತೋಟಕ್ಕೆ ಹೋಗಿ, ಅಲ್ಲಿ ನಾವು ಬೆಳೆಯಿಸಿದ ಲತೆಗಳಲ್ಲಿ ಹೂ ಬಿಟ್ಟಿರುವುದಾದರೆ, ಅದನ್ನು ಕೊಯ್ದು ಹಾರವನ್ನು ಕಟ್ಟುವ, ನಡೆ

ಸರಳೆ—ಆಗಬಹುದು

ಎಂದು ಇಬ್ಬರೂ ಹೂದೋಟಕ್ಕೆ ಹೋದರು. ಅಲ್ಲಿ ಸರಳೆಯು ಸರೋಜಿನಿಯನ್ನು ಕುರಿತು—"ಅತ್ತಿಗೆ, ನೋಡಿದೆಯ? ವಿಶ್ವನಿಧಾತನ ಚಾತುರ್ಯವೆಂತಹುದು! ಕೋರಕಾವಸ್ಥೆಯಲ್ಲಿದ್ದ ಕುಸುಮವು ಕಾಲಕ್ರಮದಲ್ಲಿ ವಿಕಸಿತವಾಗಿ ಸುಮಧುರವಾದ ಪರಿಮಳವನ್ನು ಬೀರುವುದು," ಎಂದಳು

ಸರೋಜಿನಿ—ಎಂತಹ ಆಶ್ಚರ್ಯವನ್ನು ಹೇಳಿದೆ! ಇದು ಪ್ರಕೃತಿಯ ನಿಯಮವೇ ಆಗಿರುವುದು ಇದರ ತತ್ತ್ವವನ್ನು ಹೇಳುವೆನು ಕೇಳು:—ಮಂದಮಾರುತನೆಂಬ ಪ್ರಾಣಕಾಂತನು ತನ್ನ ಪ್ರೇಮಪೂರಿತವಾದ ಸ್ಪರ್ಶದಿಂದ ಕುಸುಮ ಕಾಮಿನಿಯನ್ನು ಸಂತೈಸಲು, ಆ ಕುಸುಮ ಕಾಮಿನಿಯು ಆನಂದದಿಂದ ಹಿಗ್ಗುವುದೇ ಪುಷ್ಪವು ಅರಳುವುದೆಂದರ್ಥವು.

ಸರಳೆ—(ನಾಚುಗೆಯಿಂದ ಮುಗುಳುನಗೆಯನ್ನು ನಕ್ಕು) ಅತ್ತಿಗೆ, ನೀನು ಬಲು ಕೆಟ್ಟವಳೇ! ದೂರ ಹೋಗು ನಿನ್ನ ಹನೆಯ ಬರಹವು ಎಂದಿಗೂ ಹಾಸ್ಯಮಾಡುವುದೇ ಆಯಿತು.

ಸರೋಜಿನಿ—ನಾನೇನು ಸುಮ್ಮನೆ ಹಾಸ್ಯಮಾಡುವೆನೇ ? ಇಲ್ಲದುದನ್ನು ಹೇಳುವುದಕ್ಕೆ ನನಗೆ ನಿನ್ನಂತೆಯೇ ಹುಚ್ಚು ಹಿಡಿದಿದೆಯೇನು? ನಿನ್ನ ಹಾಗೆ ನಾನು ಉಸ್ ಎಂದು ಅಂಗಯ್ಯಲ್ಲಿ ಮುಖವನ್ನು ಇಟ್ಟುಕೊಂಡು ಹಗಲಿರುಳೂ ಭೂಮ್ಯಾಕಾಶಗಳನ್ನು ಚಿಂತಿಸಬೇಕಾಗಿದೆಯೇ ? ಹೇಳು, ನೋಡುವ !

ಈ ರೀತಿಯಾಗಿ ಅತ್ತಿಗೆ ನಾದಿನಿಯರು ಸರಸ ಸಲ್ಲಾಪಗಳನ್ನು ಮಾಡುತ್ತಾ, ಅಲ್ಲಿಂದ ಮನೆಯೊಳಗೆ ಹೊರಟು ಹೋದರು.



# ಐದನೆಯ ಲಂಬಕ.



## ಅ ತ್ಯಾ ಚಾ ರ

ಇತ್ತ ಕಡೆ ವಿನಯಕುಮಾರನು ಹಡಗನ್ನೇರಿ ತೆರಳಿದುದು ನಮ್ಮ ವಾಚಕ ಮಹಾಶಯರಿಗೆ ಜ್ಞಾಪಕದಲ್ಲಿರಬಹುದು ವಿನಯನು ಪಯಣಮಾಡುತ್ತಾ ದಿನಗಳ ಮೇಲೆ ದಿನಗಳನ್ನು ಕಳೆಯಲಾರಂಭಿಸಿದನು ಇಪ್ಪತ್ತು ದಿನಗಳ ವರೆಗೂ ನದಿಯ ಮೇಲೆ ಪಯಣಮಾಡಿದುದಾಯಿತು ಆದರೂ ಸೇರಬೇಕಾದ ಸ್ಥಳವು ಇನ್ನೂ ಸಮೀಪಿಸಲಿಲ್ಲ. ದಿನದಿನವೂ ವಿನಯನು ಬೇಸರವಾದಾಗಲೆಲ್ಲಾ ಹಡಗಿನ ಮೇಲ್ಗಡೆಯಲ್ಲಿ ಬಂದು ನಿಂತುಕೊಂಡು ನದಿಯ ಪ್ರವಾಹದ ಮಧುರವಾದ ದನಿಯನ್ನು ಕೇಳುತ್ತಲೂ, ಅಲ್ಲಲ್ಲಿ ಜಲಪಕ್ಷಿಗಳು ವಿಹರಿಸುತ್ತಿರುವುದನ್ನು ನೋಡುತ್ತಲೂ, ಕೆಲವೆಡೆಗಳಲ್ಲಿ ಗ್ರಾಮನಿವಾಸಿಗಳು ನದಿಯಲ್ಲಿ ಮಿಂದು ತಮ್ಮ ತಮ್ಮ ನಿತ್ಯನೈಮಿತ್ತಿಕ ಕರ್ಮಗಳನ್ನು ಮಾಡಿಕೊಳ್ಳುತ್ತಿರುವುದನ್ನು ನೋಡಿ ಬಗೆಬಗೆಯ ಭಾವಗಳನ್ನು ತಾಳುತ್ತಲೂ ಕಾಲವನ್ನು ಕಳಯಲಾರಂಭಿಸಿದನು. ಒಂದೊಂದು ವೇಳೆ ಇದಾವುದೂ ರುಚಿಸದೇ ಹೋದಲ್ಲಿ, ವಿನಯನು ತನ್ನ ಕೋಣೆಯಲ್ಲಿ ಒಬ್ಬನೇ ಕುಳಿತುಕೊಂಡು ಸರಳೆಯ ವಿಷಯವಾಗಿ ಆಲೋಚಿಸುವನು. ವಿನಯನ ಚಿಂತಾಪರಂಪರೆಯಲ್ಲಿ ಹಗಲು ಕಳೆದು ಮಧ್ಯಾಹ್ನವಾಗುವುದು, ಮಧ್ಯಾಹ್ನ ಕಳೆದು ಸಂಜೆಯಾಗುವುದು. ಎಷ್ಟೋ ರಾತ್ರಿಗಳು ಆತನ ಗೋಚರಕ್ಕೆ ಬರದೆಯೇ ಕಳೆದುಹೋಗಿಬಿಡುತ್ತಿದ್ದುವು. ಆವುದು ಕಳದುಹೋಗುತ್ತಿದ್ದರೂ,

ವಿನಯನ ಚಿಂತೆ ಮಟ್ಟಿಗೆ ಬಗೆ ಹರಿಯುವ ಹಾಗಿರಲಿಲ್ಲ. ಆತನ ಚಿಂತೆಯಾದರೋ, ಆತನು ಕುಳಿತಿದ್ದ ಹಡಗಿನಂತೆಯೇ ದಿಕ್ಕು ಕಾಣದೆ ಎಲ್ಲಿಯೋ ತೇಲಿ ಹೋಗುತಲಿದ್ದಿತು.

ವಿರಾಮವಿಲ್ಲದೆ ತೇಲಿ ಹೋಗುತ್ತಿದ್ದ ಹಡಗು ಇಪ್ಪತ್ತೊಂದನೆಯ ದಿನ ನದಿಯನ್ನು ಬಿಟ್ಟು ಪೂರ್ವ ಸಮುದ್ರವನ್ನು ಸೇರಿತು ಸಮುದ್ರದಲ್ಲಿಯೂ ಮೊದಲಿನಂತೆಯೇ ಪಯಣವು ಬಳೆಯಿತು. ಎಂದಿನಂತೆಯೇ ಅಂದೂ ಸೂರ್ಯನು ಪಶ್ಚಿಮಸಮುದ್ರವನ್ನವಲಂಬಿಸಿದನು. ಕ್ರಮಕ್ರಮವಾಗಿ ರಾತ್ರಿಯಾಯಿತು. ಚಂದ್ರನೂ ಉದಯಿಸಿದನು. ಸಮುದ್ರದ ತಡಿಯಲ್ಲಿದ್ದ ಗ್ರಾಮಗಳಲ್ಲಿ ದೀಪಗಳು ಕಾಣಿಸಿಕೊಂಡುವು. ಜಗತ್ತೆಲ್ಲವೂ ವಿಶ್ರಾಂತಿ ಸುಖವನ್ನನುಭವಿಸುವುದಕ್ಕೋಸ್ಕರ ಸಿದ್ಧವಾದುವು. ಆದರೆ ಈ ಹಡಗಿಗೆ ಮಟ್ಟಿಗೆ ವಿರಾಮವಿರಲಿಲ್ಲ; ವಿನಯನ ಆಲೋಚನೆಗೂ ತುದಿ ಮೊದಲಿರಲಿಲ್ಲ. ಚಂದ್ರನುದಯಿಸಿದ ಕೊಂಚ ಹೊತ್ತಿನ ಮೇಲೆ ಒಬ್ಬ ನಾವಿಕನು ವಿನಯಕುಮಾರನ ಬಳಿಗೆ ಬಂದು—"ಬುದ್ಧೀ! ಕೊಂಬಿನ ಕೂಗಿನಲ್ಲಿ ಒಂದು ತಂಗುವ ತಳ ಐತೆ. ಅದು ಬಿಟ್ರೆ ಹತ್ರದಾಗೆ ಯಾವ ತಳವೂ ಸಿಕ್ಕೋಕಿಲ್ಲ. ಅಪ್ಪಣೆಯಾದರೆ ಹಡಗನ್ನು ನಿಲ್ಲಿಸುವ ಯತ್ನ ಮಾಡೇವು," ಎಂದು ನುಡಿದನು.

ಇದನ್ನು ಕೇಳಿ ವಿನಯನು—"ಹಾಗೆಯೇ ಆಗಬಹುದು" ಎನ್ನಲು, ಅವನ ಬಳಿಯಲ್ಲಿಯೇ ಕುಳಿತಿದ್ದ ಗೌರೀಶಂಕರರಾಯನು ಗಂಭೀರಭಾವದಿಂದ—"ಕೂಡದು," ಎಂದನು.

ವಿನಯ—ಅದೇಕೆ?

ಗೌರೀಶಂಕರ—ನಾವು ಊರು ಬಿಟ್ಟು ಎಷ್ಟೋ ದಿನಗಳಾದುವು. ನಾವು ಆಗಿಂದಾಗ ಅಲ್ಲಲ್ಲಿ ನಿಂತು ನಿಂತು ತೆರಳುವುದಾದರೆ, ನಾವು ನಮ್ಮೂರನ್ನು ಸೇರುವುದೆಂದಿಗೆ? ಬೇಗನೆ ಊರ ಸೇರಿಕೊಳ್ಳುವ ಯತ್ನ ಮಾಡುವುದು ಒಳ್ಳೆಯದಲ್ಲವೇ?

ವಿನಯ—ಮುಂದೆ ಹತ್ತಿರದಲ್ಲಿ ಆವ ತಂಗುವ ಸ್ಥಳವೂ ಇಲ್ಲವೆಂದು ನಾವಿಕರು ಹೇಳುವರಲ್ಲಾ!

ಗೌರೀಶಂಕರ—ನಿನಗೆ ಕೆಲಸದ ಮೇಲೆ ಇಷ್ಟವಿದ್ದಂತೆ ತೋರುವುದಿಲ್ಲ. ನಾವು ಹೊರಟ ಉದ್ದೇಶವೇನು, ಈಗ ನಾವು ಮಾಡುವುದೇನು?

ವಿನಯ—ಹಾಗಾದರೆ ಹೊರಡಬಹುದು. ನನ್ನ ಅಡ್ಡಿಯೇನೂ ಇರುವುದಿಲ್ಲ. ನನಗೂ ಕುಳಿತು ಕುಳಿತು ಸಾಕಾಗಿ ಹೋಗಿರುವುದು. ಊರ ಕಂಡರೆ ಸಾಕಾಗಿದೆ. ವ್ಯರ್ಥವಾಗಿ ಕಾಲ ಕಳೆವುದೂ ನನ್ನ ಇಷ್ಟವಲ್ಲ.

ಗೌರೀಶಂಕರ—(ನಾವಿಕರನ್ನು ಕುರಿತು) ಸದ್ಯದಲ್ಲಿ ಹಡಗನ್ನು ನಿಲ್ಲಿಸಬೇಕಾದ ಕಾರಣವೇನೂ ಇಲ್ಲ. ಹಡಗು ಮುಂದೆ ಮುಂದೆ ಸಾಗಲಿ.

ನಾವಿಕರು ಗೌರೀಶಂಕರನ ಅಪ್ಪಣೆಯಂತೆಯೇ ಹಡಗನ್ನು ಮುಂದಕ್ಕೆ ನಡೆಯಲಾರಂಭಿಸಿದರು. ಹಡಗು ಎಂದಿನಂತೆ ಹೊರಟೇ ಹೊರಟಿತು, ವಿನಯಕುಮಾರನು ಎಂದಿನಂತೆ ಚಿಂತಿಸಿಯೇ ಚಿಂತಿಸಿದನು, ನಾವಿಕರು ಬೇಸತ್ತಾಗಲಿಲ್ಲಾ ಹಾಡಿಯೇ ಹಾಡಿದರು, ಹಡಗಿನ ಹುಟ್ಟುಗಳು ಮೇಲೆ ಮೇಲೆ "ಛಪ್ ಛಪ್" ಎಂದು ಶಬ್ದವನ್ನು ಮಾಡಿಯೇ ಮಾಡಿದುವು. ಹೀಗಾಗುತ್ತಿರುವಷ್ಟರಲ್ಲಿ ಚಂದ್ರನು ಗಗನಮಂಡಲದಿಂದ ಸರಿದುಬಿಟ್ಟನು ಪ್ರಪಂಚದಲ್ಲಿ ಆವುದು ತಾನೇ ಸ್ಥಿರವು? ಎಲ್ಲವೂ ಎಂದಾದರೊಂದುದಿನ ಕಳೆದೇ ಹೋಗುವುವು ರಾತ್ರಿಯಲ್ಲಿ ಮೂರು ಜಾವಗಳೂ ಕಳೆದು ಕೊನೆಯ ಜಾವವೂ ಬಂದಿತು ಇಷ್ಟು ಹೊತ್ತಾಗಿದ್ದರೂ ವಿನಯನ ಕಣ್ಣಿಗೆ ನಿದ್ದೆ ಹತ್ತಿರಲಿಲ್ಲ ಚಿಂತೆಯಿದ್ದರ ನಿದ್ರೆಯೇ ಬರುವುದಿಲ್ಲವೆಂಬುದು ಎಲ್ಲರಿಗೂ ತಿಳಿದ ವಿಷಯವೇ ಆಗಿರುವುದು ಅದರಲ್ಲಿಯೂ ಚಂಚಲ ಸ್ವಭಾವದವರಿಗೆ ಹೇಳಲೇ ಕೆಲಸವಿಲ್ಲ. ವಿನಯನು ಈಯವಸ್ಥೆಯಲ್ಲಿರುತಿದ್ದರೂ, ಗೌರೀಶಂಕರನು ಮಟ್ಟಿಗೆ ಸುಖವಾಗಿ ನಿದ್ದೆ ಮಾಡಿದನು ಆತನು ನಿದ್ದೆ ಮಾಡಿದ ಬಳಿಕ ತಟ್ಟನೆ ಎಚ್ಚೆತ್ತು—"ಈಗ ಎಷ್ಟು ಹೊತ್ತಾಯಿತು?" ಎಂದು ಕೇಳಿದನು. ಚಿಂತೆಯಲ್ಲಿ ಮಗ್ನನಾಗಿದ್ದ ವಿನಯನಿಗೆ ಈ ಮಾತು ಕೇಳಿಸಲಿಲ್ಲ. ಹತ್ತಿರದಲ್ಲಿದ್ದ ನಾವಿಕನೊಬ್ಬನು—"ರಾತ್ರಿಯು ಕಳೆಯುತ ಬಂದಿತು," ಎಂದು ಉತ್ತರವಿತ್ತನು.

ಗೌರೀಶಂಕರ—ಹತ್ತಿರದಲ್ಲಿ ದ್ವೀಪಗೀಪ ವನಾದರೂ ಸಿಕ್ಕುವ ಸಂಭವವುಂಟೇನು?

ನಾವಿಕ—ಉಂಟು. ಏನಾಗಬೇಕು?

ಗೌರೀ—ಅಲ್ಲಿ ಹಡಗನ್ನು ನಿಲ್ಲಿಸಬೇಕಾದೀತು.

ನಾವಿಕ—ಇಗೋ! ಇದೇ ದ್ವೀಪವು.

ಗೌರೀ—ಹಾಗಾದರೆ ಹಡಗನ್ನು ನಿಲ್ಲಿಸು.

ನಾವಿಕರು ದ್ವೀಪದ ಬಳಿ ಹಡಗನ್ನು ನಿಲ್ಲಿಸಿದರು. ಗೌರೀಶಂಕರನು ಹಡಗಿನ ಬೇರೊಂದು ಕಡೆಗೆ ಹೋಗಿ ನಾವಿಕರೊಡನೆ ಪಿಸಪಿಸನೆ ಆವುದೋ ಗುಟ್ಟಿನ ಮಾತನ್ನಾಡಿಕೊಂಡು ಬಂದು ವಿನಯನನ್ನು ಕೂಗಿದನು. ಅದಕ್ಕೆ ವಿನಯನು—"ಮಹಾಶಯ! ರಾತ್ರಿಯೆಲ್ಲವೂ ಕಳೆದುಹೋಯಿತು, ಕೊಂಚ ಹೊತ್ತಿಗೋಸ್ಕರ ದ್ವೀಪದಲ್ಲಿ ಏತಕ್ಕೆ ತಂಗಬೇಕು. ಇಲ್ಲಿಯೇ ಇದ್ದು ರಾತ್ರಿಯನ್ನು ಕಳೆಯೋಣ ಬೆಳಗಾಗುತ್ತಲೇ ಹೇಗೆ ಬೇಕಾದರೂ ಮಾಡಬಹುದು," ಎಂದನು.

ಗೌರೀ—ನಾನು ಹೇಳಿದಂತೆಯೇ ನೀನು ಕೇಳಬೇಕು. ನೀನು ಈಗಳೇ ಇಷ್ಟು ಸ್ವಾತಂತ್ರ್ಯವನ್ನು ವಹಿಸಿದರೆ ಚೆನ್ನಾಗಿರದು.

ವಿನಯ—ತಮ್ಮ ಇಷ್ಟವಿದ್ದಂತಾಗಲಿ ನಾನು ಸ್ವಾಭಿಪ್ರಾಯವನ್ನು ತಿಳಿಸಿದುದಕ್ಕಾಗಿ ತಾವು ಕ್ಷಮಿಸತಕ್ಕುದಿದೆ

ವಿನಯನು ಮುಂದೆ ಮತ್ತೇನನ್ನೂ ಹೇಳದೆ ಬಾಯಿ ಮುಚ್ಚಿಕೊಂಡು ಹಡಗನ್ನಿಳಿದನು ಭೋಜನ ಸಾಮಗ್ರಿಯ ಪೆಟ್ಟಿಗೆಯನ್ನು ತಂದುಕೊಡುವಂತೆ ಪರಿಚಾರಕನೊಬ್ಬನಿಗೆ ಅಪ್ಪಣೆಮಾಡಿ, ಗೌರೀಶಂಕರನೂ ಇಳಿದನು. ಅವನ ಹಿಂದೆ ಹಿಂದೆಯೇ ಆಹಾರದ ಪೆಟ್ಟಿಗೆಯೂ ಬಂದಿತು. ಬಳಿಕ ಗೌರೀಶಂಕರ ವಿನಯಕುಮಾರರಿಬ್ಬರೂ ಆಹಾರಮಾಡಿದರು. ಊಟವಾದ ಮೇಲೆ, ಗೌರೀಶಂಕರನು ವಿನಯನನ್ನು ಕುರಿತು—"ವಿನಯ! ಈ ದ್ವೀಪವು ಪರಿಷ್ಕಾರವಾದುದು. ಇಲ್ಲಿಯೇ ಬಿಸಿಲು ಹರಿಯುವ ವರೆಗೂ ನಿದ್ರೆಮಾಡುತ್ತಿದ್ದು ಬೆಳಗಾದ ಮೇಲೆ ಮುಂದಕ್ಕೆ ತೆರಳೋಣ. ನಮ್ಮ ಊರು ಸಮೀಪಿಸುತ್ತಾ ಬಂದಿರುವುದು," ಎಂದನು. ವಿನಯನು ತನ್ನ ಆವ ಮಾತೂ ಸಾಗದೆಂದು ತಿಳಿದು ಯತ್ನವಿಲ್ಲದೆಯೇ ಒಪ್ಪಿಕೊಂಡನು ತರುವಾಯ ಗೌರೀಶಂಕರನು ಮರಳಿನ ರಾಶಿಯ ಮೇಲೆ ಒಂದು ಕಂಬಳಿಯನ್ನು ಹಾಸಿ ಮಲಗಿಕೊಂಡು, ತನ್ನ ಪಕ್ಕದಲ್ಲಿಯೇ ಮಲಗಿಕೊಳ್ಳುವಂತೆ ವಿನಯನಿಗೆ ಹೇಳಿದನು. ರಾತ್ರಿಯೆಲ್ಲಾ ನಿದ್ರೆಯಿಲ್ಲದೆ ಕಂಗೆಟ್ಟಿದ್ದ ವಿನಯನು ಆ ಮಾತನ್ನು ಕೇಳಿದ ಕೂಡಲೆ ಮಲಗಿದನು ಎಂದೂ ಇಲ್ಲದ ನಿದ್ರೆಯು ವಿನಯನನ್ನು ಆವರಿಸಿಬಿಟ್ಟಿತು. ಕೃತ್ರಿಮವನ್ನರಿಯದ ವಿನಯನು ಮಲಗಿದ ಕೂಡಲೆ ಮೈಮರೆತು ನಿದ್ರಿಸಿದನೆಂದು ತಿಳಿಸಬೇಕಾದುದೇನೂ ಇರುವುದಿಲ್ಲ. ರಾತ್ರಿಯಲ್ಲಿ ನಿದ್ರೆ ಇರಲಿ,

ಇಲ್ಲದಿರಲಿ, ಬೆಳಗಿನ ಜಾವದಲ್ಲಿ ಮಟ್ಟಿಗೆ ಅಗತ್ಯವಾಗಿಯೂ ನಿದ್ರೆ ಬ ವುದು. ಇದು ಪ್ರಕೃತಿಯ ನಿಯಮವೇ ಆಗಿರುವುದು.

ವಿನಯನು ನಿದ್ರೆಯಲ್ಲಿ ಮೈಮರೆತನೇ ಹೊರತು, ಗೌರೀಶಂಕರನು ತನ ದುರಾಲೋಚನೆಯನ್ನು ನೆರವೇರಿಸಲೋಸುಗ ನಿದ್ರೆ ಮಾಡಲಿಲ್ಲ. ವಿನಯನ ಗಾಢನಿದ್ರೆಯಲ್ಲಿರುವುದನ್ನು ಕಂಡು ಗೌರೀಶಂಕರನು ಅಲ್ಲಿಂದೆದ್ದು ನಾವಿ ರಿಗೆ ಹಿಂದಕ್ಕೆ ಹೊರಡಲು ಸನ್ನೆ ಮಾಡಿದನು. ನಾವಿಕರು ಸಿದ್ಧರಾದರು ಗೌರೀಶಂಕರನೂ ಮೆಲ್ಲಮೆಲ್ಲನೆ ಹಡಗಿನಲ್ಲಿ ಬಂದು ಸೇರಿಕೊಂಡನು. ಅಂಬಿ ವೇಗದಲ್ಲಿ ಹಡಗನ್ನು ನಡೆಯಿಸುವಂತೆ ಗೌರೀಶಂಕರನು ನಾವಿಕರಿಗೆ ಅಪ್ಪ ಮಾಡಲು, ಅವರು ತಮ್ಮ ಶಕ್ತಿ ಮೀರಿ ಸಾಹಸಪಟ್ಟರು. ಈ ಸಮಯಕ ಸರಿಯಾಗಿ ಅನುಕೂಲ ವಾಯುವೂ ಎದ್ದು ಹಡಗನ್ನು ಬಿರಬಿರನೆ ತಳ್ಳಿಕೊ ಡು ಹೊರಟಿತು. ಕೆಲವು ಸಂದರ್ಭಗಳಲ್ಲಿ ದೈವವೂ ನೀಚಾಶಯರಿಗೆ ಸಹ ಯವೆಂಬುದು ಇದರಿಂದ ಸೂಚಿಸಬೇಕಾಗಿದೆ. ಹತಭಾಗ್ಯನಾದ ವಿನಯನ ಆ ಜಲವೇಷ್ಟಿತವಾದ, ಜನಶೂನ್ಯವಾದ, ಶಂಕಾಸ್ಪದವಾದ ಸ್ಥಾನದ ನಿರಾತಂಕವಾಗಿ ನಿದ್ರಿತನಾಗಿರುವನು. ಹಾ ವಿಧಿಯೇ! ನಿನ್ನ ಅಗಾಧವಾ ಹೃದಯ ಕೂಪದಲ್ಲಿ ಎಷ್ಟು ಪಾಪ, ಎಷ್ಟು ಕಾಠಿಣ್ಯ, ಎಷ್ಟು ಸ್ವಾರ್ಥತ ಎಷ್ಟು ತಂತ್ರ, ಎಷ್ಟು ಮೋಸ ಅಡಗಿಕೊಂಡಿರುವುದೋ ಆರು ಬಲ್ಲರು ?

ಸರಳಮತಿಯಾದ ವಿನಯಕುಮಾರನಲ್ಲಿ ಘಾತುಕನಾದ ಗೌರೀಶಂ ರನು ನಡೆಯಿಸಿದ ಅತ್ಯಾಚಾರವನ್ನು ನೋಡಿ ಸಹಿಸಲಾರದವಳಂತೆ ಪ್ರಕೃ ದೇವಿಯು ಖಿನ್ನಳಾದಳು. ಪರದುಃಖದುಃಖಿತೆಯರಾದ ಸ್ತ್ರೀಯರು ಇತರ ಕಷ್ಟವನ್ನು ನೋಡಿ ಸಹಿಸಲಾರದೆ ಗಳಗಳನೆ ಅಳುವಂತೆ, ಪ್ರಕೃತಿಯು ಅಳತೊಡಗಿದಳು. ಅಂತರಿಕ್ಷದಲ್ಲಿ ಚೆದರಿದ್ದ ಮೇಘಗಳೆಲ್ಲವೂ ಒಟ್ಟಿಗೆ ಸೇ ಮಳೆಯು ಧಾರಾಕಾರವಾಗಿ ಸುರಿಯಲಾರಂಭವಾಯ್ತು. ವಾಯು ತಾನ ನೀಚರಿಗೆ ಸಹಾಯನಾದುದು ತಪ್ಪೆಂದು ತಿಳಿದು ರೇಗಿದುದಾಗಿ ಭೀಮನಾ ದೊಡನೆ ಸಮುದ್ರವನ್ನೂ ಭೂಮಿಯನ್ನೂ ಏಕಾಕಾರಮಾಡಿಬಿಡುವಂ ಪ್ರಚಂಡವಾಗಿ ಬೀಸಲಾರಂಭಿಸಿತು. ಸಮುದ್ರವು ಕನಿಕರದಿಂದಲೋ ಎಂಬಂತೆ ತನ್ನ ಅಲೆಗಳೆಂಬ ಕೈಗಳಿಂದ ಮಲಗಿದ್ದ ವಿನಯನನ್ನು ಎತ್ತಿಕೊ ಡಿತು. ಇಷ್ಟೆನ್ನುವುದರೊಳಗಾಗಿ ವಿನಯನು ನಿದ್ರೆಯಿಂದ ಎಚ್ಚೆತ್ತು ಬೆಚ್ಚಿ ದವನಾಗಿ ನಿಂತುಕೊಂಡು ಸುತ್ತಲೂ ನೋಡಿದನು. ಎಲ್ಲವೂ ಜಲಮಯ

ವಾಗಿದ್ದಿತು. ಸಮೀಪದಲ್ಲಿ ಗೌರೀಶಂಕರನಿಲ್ಲ, ಸಮುದ್ರದಲ್ಲಿ ಹಡಗಿಲ್ಲ, ಮಳೆಯಾದರೋ ಒಂದೇ ಉಸಿರಿನಲ್ಲಿ ಸುರಿಯುತ್ತಿರುವುದು. ವಿನಯನು ಇಂತಹ ವಿಪತ್ತಿನಲ್ಲಿ ಏನ ಮಾಡಬೇಕು ? ಗಿಡು ಮರಗಳ ಬುಡದಲ್ಲಾದರೂ ನಿಂತು ಕೊಂಡು ಕೊಂಚ ಹೊತ್ತು ವಿಶ್ರಮಿಸಿಕೊಳ್ಳೋಣವೆಂದರೆ, ಆ ಹಾಳು ದ್ವೀಪದಲ್ಲಿ ಒಂದು ಗಿಡುವಾದರೂ ಇರಲಿಲ್ಲ. ವಿನಯನು ದಿಕ್ಕು ತೋಚದೆ ಅಲ್ಲಿಯೇ ಕುಳಿತುಕೊಂಡು ತನ್ನ ಮೊಳಕಾಲುಗಳ ಮಧ್ಯದಲ್ಲಿ ತಲೆಯನ್ನಿಟ್ಟು ಗೋಳೋ ಎಂದು ಅಳ ತೊಡಗಿದನು. ಅವನ ಬಾಯಲ್ಲಿ ಏನೇನೋ ಹೊರಡುತಲಿದ್ದುವು. ಅವುಗಳಲ್ಲಿ ನಮಗೆ ತಿಳಿದುಬಂದುದು:—

"ಅಮ್ಮ! ಹತಭಾಗ್ಯನಾದ ನಿನಗಿದ್ದ ಮಗನೊಬ್ಬನೂ ಇಂದು ಪ್ರಾಣವನ್ನು ಕಳೆದುಕೊಂಡುಬಿಟ್ಟನು. ಇನ್ನುಮೇಲೆ ನಿನ್ನನ್ನು "ಅಮ್ಮ, ಅಮ್ಮ" ಎಂದು ಕರೆಯುವ ಮಗನು ಇಲ್ಲದಂತಾಯಿತು. ತಂದೆ! ನನ್ನ ಕೊನೆಯ ಕಾಲದಲ್ಲಿ ಒಂದುಸಲವಾದರೂ ನಿನ್ನನ್ನು ನೋಡಬೇಕೆಂಬ ಆಸೆಯಿತ್ತು. ಅದೂ ನನ್ನ ಹಣೆಯಲ್ಲಿ ಬರೆಯದೇ ಹೋಯಿತಲ್ಲಾ! ಅಕಟಕಟ! ಇನ್ನು ಮೇಲಾದರೂ, ಇರುವನೊಬ್ಬ ಮಗನೂ ಮುದಿತನದಲ್ಲಿ ನಿನ್ನನ್ನು ಕಾಪಿಡುವನೆಂಬ ಭರವಸೆಯನ್ನು ಹೃದಯದಿಂದ ದೂರಮಾಡಿಬಿಡು. ನಾನಿನ್ನು ಮನೆಗೆ ಹಿಂದಿರುಗಿ ಬರುವ ಸಂಭವವಿಲ್ಲ. ವೃದ್ಧನಾದ ನಿನ್ನ ಅವಸ್ಥೆಯು ಮುಂದೆ ಏನಾಗುವುದೋ ಎಂಬುದು ನನಗೆ ಗೊತ್ತಾಗಲು ಅನುಕೂಲಿಸದೇ ಹೋಯಿತು.

"ಸರಳೆ! ನಾನು ಸತ್ತೆನು. ನಾನು ಸತ್ತೇಹೋದೆನು. ಇನ್ನು ನೀನಾದರೂ ಸುಖವಾಗಿರು. ಧರ್ಮವಿರುವುದಾದರೂ, ಪುನರ್ಜನ್ಮವಿರುವುದಾದರೂ, ಪರಲೋಕವಿರುವುದಾದರೂ, ನಾನು ನಿನ್ನನ್ನು ಮತ್ತೊಂದು ಸಲ ನೋಡಬಲ್ಲೆನು.

"ಶಿವಶಿವ! ಮಳೆಯ ಪೆಟ್ಟನ್ನು ಸಹಿಸುವುದಕ್ಕಾಗುವುದಿಲ್ಲ. ಬಲು ಚಳಿಯಾಗುತ್ತಿರುವುದು. ಮೈಯಲ್ಲಾ ಗಡಗಡನೆ ನಡುಗುವುದು. ಈಗ ಪ್ರಾಣ ಹೋದಲ್ಲದೆ ಸುಖವುಂಟಾಗಲಾರದು."

ವಿನಯನು ವಿಪರೀತವಾದ ಶೀತದಿಂದಲೂ, ಮಳೆಯಿಂದಲೂ, ಗಾಳಿಯಿಂದಲೂ, ವ್ಯಸನದಿಂದಲೂ, ಸಂಕಟದಿಂದಲೂ ಜ್ಞಾನತಪ್ಪಿದವನಾಗಿ ಕುಳಿತಿದ್ದ ಹಾಗೆಯೇ ನೆಲದ ಮೇಲೆ ಬಿದ್ದುಬಿಟ್ಟನು. ಸನ್ನಿಪಾತಜ್ವರಬಂದ

ವನು ಹುಚ್ಚು ಹುಚ್ಚಾಗಿ ಮಾತನಾಡಿಕೊಳ್ಳುವಂತೆ, ವಿನಯನೂ ಪ್ರಲಾಪ ಮಾಡತೊಡಗಿದನು:—

"ಸರಳೆ ! ಅಳಬೇಡ, ಅಳಬೇಡ, ನನಗೇನೂ ಕಷ್ಟವಿಲ್ಲ. ಏನೂ ಇಲ್ಲ. ನೀನು ಮಟ್ಟಿಗೆ ಅಳಬೇಡ, ಕಂಡೆಯಾ ? ನೀನು. ಅತ್ತರೆ ಅಮ್ಮನೂ ಅಳು ವಳು. ನಾನಲ್ಲ, ನನಗೆ ಈ ಲೋಕದಲ್ಲಿ ಆವುದೂ ಇಲ್ಲ. ನೀನಿದ್ದೀಯೆ, ತಾಯಿತಂದೆಗಳೂ ಇರುವರು. ಇನ್ನೊಬ್ಬಳೂ ಇರುವಳು. ಅವಳಿಲ್ಲದೇ ಏನು ? ಅವಳೂ ಇರುವಳು. ಅನಾಥೆಯಾದ ನನ್ನ ತಂಗೆ ಇರುವಳು. ಸ್ವರ್ಣ ! ಗಂಡನಿದ್ದರೂ ನಿನಗೆ ಸುಖವಿಲ್ಲವೇ ! ನಿನ್ನ ಗಂಡನಿಗೆ ನೀನು ಬೇಡ. ತಂಗೆಗೆ ಅಣ್ಣಬೇಡವೇ ? ನಾನು ನಿನ್ನನ್ನು ಕಾಪಿಡುವೆನು. ನಾನು ಎರಡು ಹೊತ್ತೂ ಅನ್ನ ಹಾಕುವೆನು ಹುಟ್ಟಿಸಿದ ದೇವರೂ ನಿನ್ನನು ಕಾಪಿ ಡುವನು."

"ಸರಳೆ! ನಿನ್ನ ವಿಷಯವೇನು? ಅಳಬೇಡ, ಅಳಬೇಡ, ನನ್ನ ಹೃದಯಾ ಧಿಷ್ಠಾನದೇವತೆಯಾದ ಸರಳೆ ! ಅಳಬೇಡ, ನಿನ್ನನ್ನೂ ದೇವರು ಕಾಪಿಡು ವನು. ಜಗದೀಶ ! ನೀನಲ್ಲದೇ ಮತ್ತಾರಿರುವರು? ಸರಳೆ ! ನಿನೇಕೆ ಹೆದರ ಬೇಕು? ಹೆದರಬೇಡ, ಕಂಡೆಯಾ? ನಿನಗೆ ಆರ ಭಯ? ಸಮಾಜದ ಭಯವೇ? ಈಗ ಆ ಭಯವೂ ಹೋಯಿತು. ಭಾರತನಿವಾಸಿಗಳು ಈಗೀಗ ತಮ್ಮ ತಮ್ಮ ಹೃದಯದ ಕಾಠಿನ್ಯವನ್ನು ತ್ಯಾಗ ಮಾಡುತ್ತಿರುವರು ಅಲ್ಲಿ ನೋಡು, ಸರಳೆ! ಭಾರತೀಯರು ಅಮ್ಲಾನ ಮಾಲಿಕೆಯನ್ನು ಕೈಯಲ್ಲಿ ಧಾರಣಮಾಡಿರುವರು. ನನ್ನ ಹೃದಯದ ಮಾಣಿಕ್ಯವೇ ! ಬಾ, ಬಾ, ಬಾ, ಬಾ, ನನ್ನ ಹೃದಯವು ತಪಿಸಿ ತಪಿಸಿ ಒಡೆದು ಹೋಗುತ್ತಿರುವುದು, ಬಾ, ಬಾ, ಬಾ, ಬಾ, ಭಯ ಪಡಬೇಡ. ಭಾರತವರ್ಷದ ಹಿಮಗಾಲವು ಹೊರಟು ಹೋಯಿತು, ಕಂಪವೂ ದೂರ ಸರಿದು ಹೋಯಿತು ಕೋಗಿಲೆಯು ಗಾನಮಾಡುತ್ತಿರುವುದು. ಜಾತಿ, ಸಂಪಿಗೆ, ಮಲ್ಲಿಕಾ, ಯೂಥಿಕಾ ಮೊದಲಾದ ಕುಸುಮಗಳು ಘಮ ಘಮಿಸುತ್ತಿರುವುವು. ಜನರು ಇತರರ ದುಃಖದಲ್ಲಿ ದುಃಖಿತರಾಗುವುದನ್ನು ಅಭ್ಯಾಸಮಾಡುತ್ತಿರುವರು ದರಿದ್ರನಾದ ನನಗೆ ನಿಧಿಸ್ವರೂಪಿಣಿಯಾದ ಸರಳೆ ! ಭಾರತ ಭೂಮಿಯಲ್ಲಿ ಇನ್ನು ಭಯವೆಂಬುದಿಲ್ಲ ಭರತಖಂಡದಲ್ಲಿ ಇನ್ನು ವೈಷಮ್ಯವಿಲ್ಲ. ಬಾ, ಬಾ ಭಾರತ ಭೂಮಿಯು ಈಗ ಸ್ವರ್ಗದ ಒಂದು ಖಂಡವಾಗಿರುವುದು ಸ್ವರ್ಗದಲ್ಲಿ ದುಃಖವುಂಟೇ? ಬಾ, ಬಾ ತಡ ಮಾಡಬೇಡ."

ಇದೇ ಮೊದಲಾದ ಬಗೆಬಗೆಯ ಪ್ರಲಾಪವು ತಾನೇ ತಾನಾಗಿ ವಿನಯನ ಬಾಯಿಂದ ಹೊರಟಿತು.

ಕ್ರಮವಾಗಿ ಮಳೆಯು ಕಡಮೆಯಾಗುತ ಬಂದಿತು. ಪ್ರಕೃತಿಯು ಪೂರ್ವದಂತೆ ಶಾಂತಿಮಯಿಯಾದ ಮೂರ್ತಿಯನ್ನು ತಾಳಿತು. ವಾಯುವು ಮಂದಮಂದವಾಗಿ ಬೀಸಲಾರಂಭಿಸಿತು. ಸಮುದ್ರವು ಕಲಮಧುರವಾದ ಸಂಗೀತವನ್ನು ಹಾಡತೊಡಗಿತು ಈಗ ಎಲ್ಲವೂ ಶಾಂತಿಮಯವು, ಎಲ್ಲೆಲ್ಲಿಯೂ ಶಾಂತಿರಸವು ತುಂಬಿ ತುಳುಕಾಡುತ್ತಿರುವುದು ರಾತ್ರಿಯು ಕಳೆದು ಬೆಳಗಾಯ್ತು. ಅರುಣಕಿರಣನ ತರುಣಕಿರಣಗಳು ಪ್ರಪಂಚವನ್ನು ಸಂತೋಷಪಡಿಸಿದುವು. ಸೂರ್ಯನ ತೇಜಸ್ಸು ವಿನಯನ ಲಲಾಟದ ಮೇಲೆ ಬೀಳಲು, ಅವನಿಗೆ ಮೋಹಭಂಗವುಂಟಾಯ್ತು ವಿನಯನು ಎದ್ದು ನಾಲ್ಕು ಕಡೆಗಳಲ್ಲಿಯೂ ನೋಡಿದನು. ಎತ್ತ ಕಡೆ ನೋಡಿದರೂ, ಸೂರ್ಯನ ಕಿರಣಗಳು ಮರಳ ರಾಶಿಯ ಮೇಲೆ ಕ್ರೀಡಿಸುತ್ತಿದ್ದುವು ಇದನ್ನು ನೋಡಿ, ವಿನಯನಿಗೆ ಜೀವನದಲ್ಲಿ ಆಶಾಸಂಚಾರವಾಯ್ತು, ಆದರೆ ದ್ವೀಪದಿಂದ ಪಾರಾಗುವ ಬಗೆ ಹೇಗೆ? ಈ ಕಷ್ಟದಿಂದ ಉದ್ಧಾರನಾಗುವುದು ಸಾಧ್ಯವೇ? ಪಯಣ ಮಾಡುವ ಕಾಲದಲ್ಲಿ "ಭಗವಂತನ ನಾಮ ಸ್ಮರಣೆಯು ಸಂಕಟಕ್ಕೀಡಾದವನನ್ನು ಎಂತಹ ವಿಪತ್ತಿನಿಂದಾದರೂ ಉದ್ಧಾರ ಮಾಡುವುದು," ಎಂದು ತಾಯಿಯು ಹಿಂದೆ ಹೇಳಿದ ಮಾತು ಜ್ಞಾಪಕಕ್ಕೆ ಬಂದಿತು ವಿನಯಕುಮಾರನು ಭಗವಂತನನ್ನು ಒಂದೇ ಮನಸ್ಸಿನಿಂದ ಧ್ಯಾನಮಾಡಿದನು —

"ಹರೇ ಮುರಾರೇ! ದಯಾಮಯಹರೇ! ವಿಪತ್ತಿನ ಮೇಲೆ ವಿಪತ್ತು, ಹರೇ! ನನ್ನನ್ನು ಉದ್ಧಾರಮಾಡು, ಹರೇ!"



# ಆರನೆಯ ಲಂಬಕ.



## ಕೀರ್ತಿಕಥಾ.

ಗೌರೀಶಂಕರನು ವಿನಯನನ್ನು ದ್ವೀಪದಲ್ಲಿ ಬಿಟ್ಟು ಹಡಗನ್ನೇರಿ ಹೊರಟನು. ಹಡಗು ಗೃಹಾಭಿಮುಖವಾಗಿ ತೆರಳುತ್ತಿತ್ತು. ದಾರಿಯಲ್ಲಿ ವಿಶೇಷಸಂಗತಿಗಳಾವುವೂ ನಡೆಯುವುದಕ್ಕೆ ಅವಕಾಶವು ಒದಗಿಬರಲಿಲ್ಲ.

ದೀರ್ಘವಾಗಿಯೂ, ಶೂನ್ಯವಾಗಿಯೂ ಇರುವ ದಾರಿಯನ್ನು ಬಾಯಿ ಮುಚ್ಚಿಕೊಂಡು ಕಳೆವುದು ಆರಿಗಾದರೂ ಬೇಸರವನ್ನುಂಟುಮಾಡದಿರದು. ಗೌರೀಶಂಕರನು ಕೃತಕೃತ್ಯನಾಗಿ ಹಿಂದಿರುಗಿ ಮನೆಯ ಕಡೆಗೆ ತೆರಳುತ್ತಿರುವಾಗ, ಮತ್ತೇನು ತಾನೇ ಕತೆಯನ್ನು ಕಲ್ಪಿಸಿಕೊಂಡು ಹೇಳುವುದಕ್ಕಾದೀತು? ಹಡಗು ಮನೆಯ ಕಡೆಗೆ ತೆರಳುತ್ತಿರಲಿ. ನಾವು ಗೌರೀಶಂಕರನ ವಿಷಯದಲ್ಲಿ ಕಂಡು ಕೇಳಿದುದನ್ನು ಪ್ರಿಯ ಪಾಠಕ ಮಹಾಶಯರಿಗೆ ತಿಳಿಯಪಡಿಸುವೆವು. ಇದರಿಂದಲಾದರೂ ದಾರಿಯು ಸುಮುಖವಾಗಿ ಕಳೆಯುವ ಸಂಭವವುಂಟು.

ಗೌರೀಶಂಕರನು ನಾಗಪಟ್ಟಣದ ಜಿಲ್ಲೆಗೆ ಸೇರಿದ ಅಮರಪುರವೆಂಬ ಒಂದು ಸಣ್ಣ ಗ್ರಾಮದಲ್ಲಿ ವಾಸವಾಗಿದ್ದ ವೈದ್ಯ ಸಂತತಿಗೆ ಸೇರಿದವನಾಗಿದ್ದನು. ಬಾಲ್ಯದ ಮೊದಲು ಗೌರೀಶಂಕರನ ಚರಿತ್ರೆಯು ವಿಲಕ್ಷಣವಾದುದು. ಗೌರೀಶಂಕರನಿಗೆ ಹನ್ನೆರಡನೆಯ ವಯಸ್ಸು ನಡೆಯುತ್ತಿರುವಾಗ, ತಂದೆಯು ಇವನನ್ನು ವಿದ್ಯಾಭ್ಯಾಸಂಗಕ್ಕೆಂದು ಒಂದು ಪಾಠಶಾಲೆಗೆ ಸೇರಿಸಿದನು. ಇವನಿಗಂತ ಈ ವಿದ್ಯೆಯಲ್ಲಿ ಅಭಿರುಚಿಯೇ ಇರಲಿಲ್ಲ, ಆದರೂ ಈತನು ಕಾಲಕ್ಕೆ ಸರಿಯಾಗಿ ಮನೆಯಿಂದ ಪಾಠಶಾಲೆಗೆ ಹೊರಡುತ್ತಿದ್ದನು. ಪಾಠಶಾಲೆಗೆ ತಲುಪುತ್ತಿದ್ದನೋ ಇಲ್ಲವೋ ಅದು ಬೇರೆಯ ವಿಷಯವು. ಗುರುಮಹಾಶಯನು ಪಾಠಶಾಲೆಗೆ ಬಂದುದನ್ನು ತಿಳಿದು, ಈ ಶಿಷ್ಯನು ಗುರುವಿನ ಮನೆಗೆ ತೆರಳುವನು ಅಲ್ಲಿ ಗುರುಪತ್ನಿಯು ಗೃಹ ಕಾರ್ಯದಲ್ಲಿ ನಿರತೆಯಾಗಿರುತ್ತಿದ್ದುದನ್ನು ಕಂಡುಕೊಂಡು, ಗೌರೀಶಂಕರನು ಕಳ್ಳತನದಿಂದ ಮನೆಯೊಳಗೆ ಪ್ರವೇಶಮಾಡಿ ಕೈಗೆ ಸಿಕ್ಕಿದುದನ್ನು ಅಪಹರಿಸಿಕೊಂಡು ಬಂದು ಬಿಡುತ್ತಿದ್ದನು ಹೀಗೆಯೇ ಗುರುವಿನ ಮನೆಯಲ್ಲಿ ಪ್ರತಿದಿನವೂ ಏನಾದರೊಂದು ಪದಾರ್ಥವು ಕಳೆದುಹೋಗುತ್ತಿದ್ದಿತು. ಅಲ್ಪವೇತನಕ್ಕೆ ಈ ಗುರುಕಾರ್ಯವನ್ನು ಸ್ವೀಕರಿಸಿ ಬಹು ಪ್ರಯಾಸದಿಂದ ಕೂಡಿಟ್ಟ ವಸ್ತುಗಳು ದಿನಕ್ಕೊಂದರಂತೆ ಕೈತಪ್ಪುವುದಾದರೆ, ಬಡವನಾದ ಗುರುವಿನ ಗತಿಯೇನು? ಮತ್ತೆ ಸಂಪಾದಿಸುವ ಮಾರ್ಗವೇನಿರುವುದು? ಗುರುವಿಗೆ ಇದರ ತತ್ತ್ವವಾವುದೂ ಗೊತ್ತಾಗಲಿಲ್ಲ.

ಒಂದು ದಿನ ಗೌರೀಶಂಕರನ ತಂದೆಯು ಪಾಠಶಾಲೆಗೆ ಬಂದು, ತನ್ನ ಮಗನು ಎಷ್ಟರ ಮಟ್ಟಿಗೆ ವೃದ್ಧಿಯಾಗುತ್ತಿರುವನೆಂದು ಗುರುವನ್ನು ಕೇಳಿದನು. ಅದಕ್ಕೆ ಉತ್ತರವಾಗಿ ಗುರುವು—ಮಹಾಶಯ! ಪಾಠಶಾಲೆಗೆ

ಸೇರಿದ ದಿನ ಗೌರೀಶಂಕರನ ಮುಖವನ್ನು ನೋಡಿದುದೇ ಹೊರತು, ಇಂದಿನ ವರೆಗೂ ಆತನಾರೆಂಬುದೇ ಗೊತ್ತಿಲ್ಲ. ಬಹುಕಾಲ ಆತನ ಸುಳಿವೇ ಇಲ್ಲದು ದರಿಂದ, ಆತನು ಪಾಠಶಾಲೆಯನ್ನು ಬಿಟ್ಟುಬಿಟ್ಟನೆಂದು ತಿಳಿದು, ಅವನ ಹೆಸರನ್ನು ವಿದ್ಯಾರ್ಥಿಗಳ ಸಮೂಹದಿಂದ ತೆಗೆದುಬಿಟ್ಟೆನು," ಎಂದು ಹೇಳಲಾಗಿ, ಇದನ್ನು ಕೇಳಿ ತಂದೆಗೆ ಆಶ್ಚರ್ಯವೂ, ವ್ಯಸನವೂ ಏಕಕಾಲ ದಲ್ಲಿಯೇ ಉಂಟಾಯಿತು. ಸ್ವಭಾವದಿಂದಲೇ ಅವಿಧೇಯನಾದ ಮಗನನ್ನು ತಂದೆಯಾದವನು ಏನ ಮಾಡುವುದಕ್ಕಾದೀತು ? ತಂದೆಯು ಹಡದ ತಪ್ಪಿ ಗಾಗಿ ಮನೆಯಲ್ಲಿ ಮಗನಿಗೆ ಎಷ್ಟೋ ಬುದ್ಧಿಗಲಿಸಿದನು. ಆ ಕಾಲದಲ್ಲಿ ಮಟ್ಟಿಗೆ ತಂದೆಗೆ ಹೆದರಿದಂತೆ ನಟಿಸಿದ ಗೌರೀಶಂಕರನು ಎಂದಿನಂತೆಯೇ ಗುರುವಿನ ಮನೆಗೆ ಕನ್ನ ಹಾಕುತ್ತಿದ್ದನು. ಗ್ರಹಚಾರವಶದಿಂದ ಗುರುವು ಒಂದಾನೊಂದು ದಿನ ಗೌರೀಶಂಕರನ ಹಾವಳಿಯನ್ನು ತನ್ನ ಕಣ್ಣಿನಿಂದಲೇ ನೋಡಿ ಬಲು ವ್ಯಸನಪಟ್ಟವನಾಗಿ, ಗೌರೀಶಂಕರನನ್ನು ಬಲವಾಗಿ ಹೊಡೆ ದನು. ಇದಾದ ಬಳಿಕ ಗೌರೀಶಂಕರನು ಗುರುವಿಗೆ ತಕ್ಕ ಪ್ರತೀಕಾರವನ್ನು ಮಾಡಬೇಕೆಂದು ಸಂಕಲ್ಪಮಾಡಿಕೊಂಡು, ಒಂದಾನೊಂದು ದಿನ ರಾತ್ರಿಯ ಕಾಲದಲ್ಲಿ ಗುರುವೂ ಅತನ ಪತ್ನಿಯೂ ಹಾಸುಗೆಯಲ್ಲಿ ಮಲಗಿ ನಿದ್ರಿಸುತ್ತಿ ರುವಾಗ, ಅವರ ಮನೆಗೆ ಬೆಂಕಿಯನ್ನು ಕಚ್ಚಿಸಿದನು ಆಯುಶ್ಶೇಷವಿದ್ದು ದರಿಂದ ಪ್ರಾಣದಿಂದುಳಿದು ಗುರುವೂ ಗುರುಪತ್ನಿಯೂ ಅಂದು ಮೊದ ಲ್ಗೊಂಡು ಆ ಗ್ರಾಮವನ್ನೇ ತ್ಯಾಗಮಾಡಿಬಿಟ್ಟರು.

ಗೌರೀಶಂಕರನು ಈ ರೀತಿಯಲ್ಲಿ ವಿದ್ಯಾವ್ಯಾಸಂಗ ಮಾಡಿದ ಅನಂತರ ದಲ್ಲಿ, ನಿತ್ಯವೂ ಕಂಡಕಂಡವರ ಮನೆಗೆ ಕನ್ನಹಾಕುತ್ತಲೂ, ಸಿಕ್ಕಿಬಿದ್ದರೆ ಶಿಕ್ಷೆಯನ್ನು ಅನುಭವಿಸುತ್ತಲೂ, ಸಮಯ ಬಂದಾಗಲೆಲ್ಲಾ ಶಿಕ್ಷೆಗೆ ಗುರಿ ಮಾಡಿದವರ ಮೇಲೆ ಹೊಟ್ಟೆಯ ಕಿಚ್ಚನ್ನು ತೀರಿಸಿಕೊಳ್ಳುತ್ತಲೂ ತನ್ನ ಬಾಲ್ಯಕಾಲವನ್ನು ಕಳೆದನು ಕೊಂಚ ಕಾಲದಲ್ಲಿಯೇ ಅವನ ತಾಯಿತಂದೆ ಗಳು ವ್ಯಸನದಿಂದ ಪರಲೋಕಯಾತ್ರೆ ಮಾಡಿದರು. ಬಳಿಕ ಆ ಗ್ರಾಮನಿ ವಾಸಿಯೊಬ್ಬನು ಗೌರೀಶಂಕರನ ದುರವಸ್ಥೆಯನ್ನು ನೋಡಿ ಕನಿಕರಗೊಂಡು ಅವನಿಗೆ ಒಂದು ನೌಕರಿಯನ್ನು ಮಾಡಿಸಿಕೊಟ್ಟನು. ನಿರ್ಭಾಗ್ಯನಾದ ಗೌರೀಶಂಕರನು ಕೆಲಸವನ್ನು ಉಳಿಸಿಕೊಳ್ಳುವುದಕ್ಕೆ ಯೋಗ್ಯತೆಯಿಲ್ಲದೆ ಒಂ ದೆರಡು ತಿಂಗಳೊಳಗಾಗಿಯೇ ಕೆಲಸದಿಂದ ನಿವೃತ್ತನಾದನು ಅನಂತರದಲ್ಲಿ

ತಿನ್ನುವುದಕ್ಕೆ ಮಾರ್ಗವಿಲ್ಲದೆ, ಗೌರೀಶಂಕರನು ಒಂದು ಹೊತ್ತು ಸೋದರತ್ತೆಯ ಮನೆಯಲ್ಲಿಯೂ, ಒಂದು ಹೊತ್ತು ಚಿಕ್ಕಮ್ಮನ ಮನೆಯಲ್ಲಿಯೂ, ಒಂದು ಹೊತ್ತು ಬಾವಮೈದುನನ ಮನೆಯಲ್ಲಿಯೂ, ಮತ್ತೊಂದು ಹೊತ್ತು ತಾಯಿಯ ತಮ್ಮನ ಮಾವನ ಮನೆಯಲ್ಲಿಯೂ, ಮಗದೊಂದು ಹೊತ್ತು ತಂಗಿಯ ಗಂಡನ ಸೋದರತ್ತೆಯ ಮಗನ ಹೆಂಡಿತಿಯ ಚಿಕ್ಕಪ್ಪನ ಅಳಿಯನ ಮನೆಯಲ್ಲಿಯೂ ಭಕ್ತಿಯಿಲ್ಲದ ಪಿಂಡವನ್ನು ತಿನ್ನುತ್ತಾ ದಿನಗಳನ್ನು ಕಳೆಯುತ್ತಿದ್ದನು.

ಈ ತೆರನಾಗಿಯೇ ಗೌರೀಶಂಕರನಿಗೆ ನಲವತ್ತು ವರ್ಷಗಳು ಕಳೆದು ಹೋದುವು. ಗೌರೀಶಂಕರನಿಗೆ ಮದುವೆಯಾಗಿರಲಿಲ್ಲ, ಆಗುವ ಹಾಗೂ ಇರಲಿಲ್ಲ. ನಲವತ್ತು ವರ್ಷಗಳಾದ ಮೇಲೆ ಅವನಿಗೆ ಕೊಂಚ ಬುದ್ಧಿ ಬಂದು, ಎಲ್ಲಿಗಾದರೂ ಹೋಗಿ ಜೀವಿಕೆಯನ್ನು ಸಂಪಾದಿಸಬೇಕೆಂದು ನಿರ್ಧರಮಾಡಿಕೊಂಡು ಶಿವರಾಮಪುರಕ್ಕೆ ಬಂದು ಜೋಡೀದಾರನಾದ ಅಚ್ಯುತಾನಂತ ಗೋವಿಂದ ವರ್ಮನನ್ನು ಕಂಡು ಮಾತನಾಡಿದನು. ಇವನು ಬಂದುದೇ ವಿನಾಯಸಿಗೆ ಮೃತ್ಯುವು ರೂಪವನ್ನು ತಾಳಿ ಬಂದಂತಾಯಿತು. ದುರ್ದಾಂತನಾದ ಜೋಡೀದಾರನು, ತನ್ನ ಅತ್ಯಾಚಾರಕ್ಕೆ ಸರಿಯಾದ ಪಾತ್ರವು ದೊರೆಯದೇ ಬಲು ತೊಂದರೆಯಾಗಿದ್ದುದರಿಂದ, ಗೌರೀಶಂಕರನು ಬಂದೊಡನೆಯೇ ತನ್ನ ಕೆಲಸಕ್ಕೆ ತಕ್ಕುದಾದ ಆಯುಧವು ದೊರೆಯಿತೆಂದು ತುಂಬಾ ಸಂತೋಷಪಟ್ಟವನಾಗಿ, ಆತನಿಗೆ ತನ್ನಲ್ಲಿ ಆಶ್ರಯವನ್ನು ಕೊಟ್ಟನು. ಅದು ಮೊದಲು ಗೌರೀಶಂಕರನು ಜೋಡೀದಾರನ ವಿಶೇಷ ಪ್ರೀತಿಗೆ ಪಾತ್ರವಾಗಿ ನಿಂತನು.

ಗೌರೀಶಂಕರನ ವೃತ್ತಾಂತವು ಹೇಗಾದರೂ ಇರಲಿ, ದುಷ್ಟ ಜನರ ಯೋಗಕ್ಷೇಮವನ್ನು ಹಚ್ಚಿಕೊಳ್ಳುವುದು ಸುಖಕ್ಕೆ ಬಂದುದಲ್ಲ. ಭೂಷಿಸಿದರೂ ದೂಷಿಸಿದರೂ, ದುಷ್ಟನು ತನ್ನ ದುಷ್ಟಬುದ್ಧಿಯನ್ನೂ ಹಿಂಸಮಾಡುವುದನ್ನೂ ಬಿಡನು. ಸಲ್ಲದ ಹಿಂಸಗೆ ಗುರಿಯಾಗಿ ಪಡಬಾರದ ಕಷ್ಟನಷ್ಟಗಳನ್ನನುಭವಿಸುವುದಕ್ಕೆ ಆರು ತಾನೇ ಸಿದ್ಧರಾಗಿರುವರು? ದುರ್ಜನರ ಸಹವಾಸದಿಂದ ದೂರವಾಗಿರುವುದೇ ಸರ್ವೋತ್ತಮವಾಗಿರುವುದರಿಂದ, ನಾವು ಗೌರೀಶಂಕರನ ವೃತ್ತಾಂತವನ್ನು ಕಟ್ಟಿಕೊಂಡು ಏತಕ್ಕೆ ವ್ಯಸನಪಡಬೇಕು? ದುರ್ಜನರ ಸ್ವಭಾವವಾದರೋ ಕೊಂಚಮಟ್ಟಿಗೆ ತಿಳಿಯಬೇಕಾದುದೂ

ಅತ್ಯಾವಶ್ಯಕವು. ಅಷ್ಟಿಲ್ಲದಿದ್ದರೆ ಲೋಕದಲ್ಲಿ ಸಜ್ಜನ ದುರ್ಜನರೆಂಬ ವಿವೇಚನೆಯೇ ಇಲ್ಲದೆ ಅವ್ಯವಸ್ಥೆಯುಂಟಾಗುವುದು. ಆದಕಾರಣ ಗೌರೀಶಂಕರನ ವಿಷಯವನ್ನು ಹತ್ತು ಪಾಲಿನಲ್ಲಿ ಒಂದು ಪಾಲಿನಷ್ಟು ಸೂಚಿಸಿರುವೆವು. ವಿವೇಕಿಗಳು ಇಷ್ಟರಿಂದಲೇ ಎಲ್ಲವನ್ನೂ ತಿಳಿದು ಯುಕ್ತಾಯುಕ್ತವನ್ನು ತಿಳಿದುಕೊಳ್ಳಬಹುದು.

ಹತ್ತು ಹದಿನೈದು ದಿನಗಳೆನ್ನುವುದರೊಳಗಾಗಿಯೇ ಗೌರೀಶಂಕರನ ಹಡಗು ಭ್ಮರವೀನದಿಯಲ್ಲಿ ಬಲು ದೂರದವರೆಗೂ ಬಂದುಬಿಟ್ಟಿತು ಒಂದೆರಡು ದಿನಗಳೊಳಗಾಗಿಯೇ ಶಿವರಾಮಪುರವು ತಲಪುವುದಕ್ಕೆ ಸಾಕಾದಷ್ಟು ದಾರಿಯು ಮಾತ್ರವೇ ಉಳಿದಿದ್ದಿತು ಹಡಗಿನಲ್ಲಿಯೇ ಹೊರಟು ಬರುವುದಾದರೆ, ಎರಡು ದಿನಗಳ ವರೆಗೂ ಪಯಣ ಬಳೆಯಿಸಬೇಕು, ನೆಲದ ಮೇಲೆ ಹೊರಟು ಬರುವ ಹಾಗಿದ್ದರೆ, ಒಂದು ದಿನದೊಳಗಾಗಿಯೇ ಶಿವರಾಮಪುರವನ್ನು ಸೇರಬಹುದು. ಇದನ್ನು ತಿಳಿದು ಗೌರೀಶಂಕರನು ಹಡಗನ್ನು ನಿಲ್ಲಿಸಿದನು. ಅಲ್ಲಿ ನಂದಿಗ್ರಾಮವೆಂಬದೊಂದು ಕುಗ್ರಾಮವಿದ್ದಿತು ಇದು ಅಚ್ಯುತ ಮಹಾಶಯನ ಜೋಡಿಗೆ ಸೇರಿದ್ದುದರಿಂದ, ಇಲ್ಲಿಯೂ ಒಂದು ಚಾವಡಿಯು ಇದ್ದಿತು ಚಾವಡಿಯಲ್ಲಿ ಒಬ್ಬ ಗುಮಾಸ್ತನೂ, ಒಬ್ಬ ಗ್ರಾಮಾಧಿಕಾರಿಯೂ, ಇಬ್ಬರು ಗ್ರಾಮಸೇವಕರೂ ಕುಳಿತುಕೊಂಡು ಜೋಡೀದಾರನ ಕೆಲಸಗಳನ್ನು ನೆರವೇರಿಸುತ್ತಿರುವರು ಗೌರೀಶಂಕರನು ಹಡಗನ್ನಿಳಿದು ನಾವಿಕರಿಗೆ ಮುಂದ ತೆರಳುವಂತೆ ಹೇಳಿ ಚಾವಡಿಗೆ ಬಂದನು ಬಂದವನು ಗುಮಾಸ್ತನನ್ನು ಕುರಿತು—"ಮಹಾಶಯ ! ತಮ್ಮ ಕುದುರೆಯನ್ನು ಕೊಡೋಣವಾಗಲಿ ನನ್ನ ಕೆಲಸವಾದರೋ ಮಹತ್ತರವಾಗಿರುವುದರಿಂದ, ನಾನು ಈಗಳೇ ಶಿವರಾಮಪುರಕ್ಕೆ ತೆರಳಬೇಕಾಗಿರುವುದು," ಎಂದು ಬಿರುನುಡಿ ನುಡಿದನು ಗುಮಾಸ್ತನಿಗೆ ತನ್ನ ಕುದುರೆಯಲ್ಲಿ ಬಲು ಪ್ರೇಮವಿದ್ದಿತು ಅದು ನಡದರೆ "ಎಲ್ಲಿ ಸವೆದು ಹೋಗುವುದೋ" ಎಂದು ತಿಳಿದು ಬಲು ಎಚ್ಚರಿಕೆಯಿಂದ ಅದನ್ನು ರಕ್ಷಿಸಿಕೊಂಡು ಬರುತ್ತಿದ್ದನು ಸಮಯ ಬಂದಾಗ ತಾನೊಬ್ಬನೇ ಅದರ ಮೇಲೆ ಕುಳಿತುಕೊಳ್ಳುವುದೇ ಹೊರತು ಮತ್ತಾರೂ ಕುಳಿತುಕೊಳ್ಳುವುದಕ್ಕೆ ಆಸ್ಪದ ಕೊಡುತ್ತಿರಲಿಲ್ಲ ಹೀಗಿರುವಲ್ಲಿ ತನ್ನ ಕುದುರೆಯನ್ನು ಮತ್ತೊಬ್ಬರಿಗೆ ಕೊಡುವುದೆಂದರೇನು? ಆದರೆ ಗುಮಾಸ್ತನು ಒಂದಾನೊಂದು ದಿನ ಶಿವರಾಮಪುರದಲ್ಲಿ ಗೌರೀಶಂಕರನನ್ನು ನೋಡಿ

ಧ್ದನು. ಆಗ ಆತನು ಯಜಮಾನನಿಗೆ ವಿಶೇಷಪ್ರೀತಿಪಾತ್ರವೆಂಬುದು ಗೊತ್ತಾಯಿತು. ಇಂತಹವನಿಗೆ ಕುದುರೆಯನ್ನು ಕೊಡದಿದ್ದರೆ, ತನ್ನ ಜೀವನದ ಬಾಯಿಗೇ ಮಣ್ಣು ಬಿದ್ದುಹೋಗುವುದೆಂಬ ಭಯದಿಂದ ಅತ್ಯಂತ ದುಃಖಗೊಂಡವನಾಗಿ ತನ್ನ ಕುದುರೆಯನ್ನು ಉಪಯೋಗಿಸಿಕೊಳ್ಳುವುದಕ್ಕೆ ಸಮ್ಮತಿಸಿದನು. ಕುದುರೆಯೂ ಸಿದ್ಧವಾದುದು. ಗೌರೀಶಂಕರನು ಮಟ ಮಟ ಮಧ್ಯಾಹ್ನದ ಎರಡು ಗಂಟೆಯ ಸಮಯದಲ್ಲಿ ಕುದುರೆಯನ್ನೇರಿ ಶಿವರಾಮ ಪುರಕ್ಕೆ ಅಭಿಮುಖವಾಗಿ ತೆರಳಿದನು. ನಂದಿಗ್ರಾಮದಿಂದ ಶಿವರಾಮ ಪುರಕ್ಕೆ ಸಂಪೂರ್ಣವಾಗಿ ಒಂದು ದಿನದ ದಾರಿಯಿದ್ದರೂ, ನಿರ್ದಯನಾದ ಗೌರೀಶಂಕರನು ಕುದುರೆಯನ್ನು ಹೊಡೆದು ಹೊಡೆದು ಎರಡು ಗಂಟೆಗಳೊಳಗಾಗಿಯೇ ಯಜಮಾನನ ಬಳಿಗೈತಂದನು.

ಗೌರೀಶಂಕರನು ಶಿವರಾಮಪುರಕ್ಕೆ ಬಂದಾಗ ನಾಲ್ಕು ಗಂಟೆಯ ಹೊತ್ತಾಗಿದ್ದಿತು. ಬಿಸಿಲಿನ ತಾಪದಿಂದ ಲೋಕವು ಸೊಕ್ಕಿ ಸೊರಗಿಹೋಗಿದ್ದಿತು. ಬಿಸಲಿನ ಬೇಗೆಯಲ್ಲಿ ಬೆಂದು ಬೆಂಡಾದ ಪಕ್ಷಿಗಳು ಗಿಡುಮರಗಳ ದಟ್ಟವಾದ ನೆಳಲಿನಲ್ಲಿ ವಿಶ್ರಾಂತಿ ಸುಖವನ್ನು ಪಡೆದುಕೊಳ್ಳುತ್ತಿದ್ದುವು. ದನಕರುಗಳು ಕುಡಿಯುವುದಕ್ಕೆ ನೀರನ್ನು ಬಯಸಿ ಎಲ್ಲಿಯೋ ಓಡಿಹೋಗುತ್ತಿದ್ದುವು. ಎಮ್ಮೆ ಕೋಣಗಳು ಕೊಚ್ಚೆ ಗುಂಡಿಗಳಲ್ಲಿ'ಹೊರಳಾಡುತ್ತೆ ಬ್ರಹ್ಮಾನಂದಪರವಶಗಳಾಗಿರುತ್ತಿದ್ದುವು. ಇಂತಹ ಸಮಯದಲ್ಲಿ ಗೌರೀಶಂಕರನು ತನ್ನ ಕುದುರೆಯನ್ನು ಲಾಯದಲ್ಲಿ ಕಟ್ಟಿ ಯಜಮಾನನ ಮನೆಯೊಳಗೆ ಪ್ರವೇಶಮಾಡಿದನು. ಅಧಿಕಾರ ಮಂದಿರದಲ್ಲಿ ಇನ್ನೂ ಯಾರೂ ಬಂದು ಸೇರುವ ಹೊತ್ತಾಗಿರಲಿಲ್ಲ. ಬಾಗಿಲಲ್ಲಿ ಮಟ್ಟಿಗೆ ಒಬ್ಬಿಬ್ಬರು ಸೇವಕರು ಕುಳಿತುಕೊಂಡು ನಿದ್ದೆಯಿಂದ ತಲೆಯನ್ನು ತೂಗಾಡಿಸುತ್ತಿದ್ದರು. ಮತ್ತೊಂದು ಕೋಣೆಯಲ್ಲಿ ಭೃತ್ಯನೊಬ್ಬನು ಮತ್ತೊಬ್ಬನೊಡನೆ ತನ್ನ ಮನೆಯ ವೃತ್ತಾಂತವನ್ನೂ, ಯಜಮಾನನ ಮನೆಯ ವೃತ್ತಾಂತವನ್ನೂ, ದಾಸಿಯರು ಮಾಡುವ ಅತ್ಯಾಚಾರದ ವಿಷಯಗಳನ್ನೂ, ತನ್ನ ಪ್ರತಾಪವನ್ನೂ ಚಿತ್ರವಿಚಿತ್ರವಾಗಿ ಅಂಗಭಂಗಿಯಿಂದ ವರ್ಣನೆ ಮಾಡುತ್ತಾ ಕುಳಿತಿದ್ದನು. ಮತ್ತೊಬ್ಬನು ಇದನ್ನು ಬಲು ಆದರದಿಂದ ಕೇಳುತ್ತಿದ್ದನು. ಗೌರೀಶಂಕರನು ಇವರಲ್ಲಿ ಒಬ್ಬನನ್ನು ಸಂಬೋಧಿಸಿ,-"ಎಲಾ ! ಯಜಮಾನರೆಲ್ಲಿ?" ಎಂದು ಕೇಳಿದನು.

ಭೃತ್ಯ—ಮಹಡಿಯ ಮೇಲಿರುವರು.

ಗೌರೀ—ಅವರಿಗೆ ನಾನು ಬಂದಿರುವುದನ್ನು ತಿಳಿಸು.

ಭೃತ್ಯ—ಆಗಲಾರದು.

ಗೌರೀ— ಹಾಗೆಂದರೇನು ?

ಭೃತ್ಯ—ಯಜಮಾನರನ್ನು ಎಬ್ಬಿಸುವವರಾರು ?

ಗೌರೀ—ಹಾಗೆಂದರೇನು ?

ಭೃತ್ಯ—ಅವರನ್ನು ಎಬ್ಬಿಸಲು ನಮಗೆ ಅಪ್ಪಣೆಯಿಲ್ಲ.

ಗೌರೀ—ನೀವು ಮಾಡುವದೇನು ?

ಭೃತ್ಯ—ನಾವೇನು ಮಾಡಬೇಕು ?

ಗೌರೀ—ಊಟ ! ಮತ್ತೇನು ನಿಮ್ಮಿಂದಾಗಬಹುದು ?

ಭೃತ್ಯ—ಈ ದಿನದಲ್ಲಿ ಅಂತಹ ಊಟವೇನೂ ಇಲ್ಲ. ಮೂರು ಸಾವಿನಷ್ಟು ಅಕ್ಕಿಹಾಕಿ ಅನ್ನ, ಅದಕ್ಕೆ ತಕ್ಕ ಮೇಲೋಗರ. ಚಟ್ಟಣಿಗಾಗಿ ಎರಡು ತೆಂಗಿನ ಕಾಯಿಗಳನ್ನು ಮಾತ್ರವೇ ಒಡೆದಿದ್ದೆನು.

ಗೌರೀಶಂಕರನು ಇದನ್ನು ಕೇಳಿ—"ನಿನ್ನನ್ನು ಹೊಟ್ಟೆಬಾಕರ ಕೊನೆಯ ದರ್ಜೆಗೆ ಸೇರಿಸಬಹುದು," ಎಂದು ಹೇಳುತ್ತಾ, ಜೋಡೀದಾರನು ಹಗೆಲಲ್ಲಿ ವಿಶ್ರಾಂತಿ ಸುಖವನ್ನನುಭವಿಸುತ್ತಿರುವ ಕಿರುಮನೆಯ ಕಡೆಗೆ ತೆರಳಿದನು. ಯಜಮಾನನು ಆಗತಾನೆ ಎಚ್ಚೆತ್ತು ಸರ್ವಾಧಿಕಾರಿಗೆ ಹೇಳಿ ಕಳುಹಿಸಿ ಆತನು ಬರುವುದನ್ನೇ ನಿರೀಕ್ಷಿಸಿಕೊಂಡಿದ್ದನು ಈ ಸಮಯಕ್ಕೆ ಸರಿಯಾಗಿ ಸೂರ್ಯನ ಪ್ರಚಂಡಾತಪದಿಂದ ತಪಿಸುತ್ತಿರುವ ಗಗನಮಂಡಲದಲ್ಲಿ ಮೇಘೋದಯವಾದಂತೆ, ವ್ಯಾಧಿಪೀಡಿತನಾದ ರೋಗಿಯ ಪಕ್ಕದಲ್ಲಿ ವೈದ್ಯನು ಬಂದು ನಿಂತಂತೆ, ರಾತ್ರಿಯ ಕಾಲದಲ್ಲಿ ಸಂಚರಿಸುವ ಪಥಿಕರಿಗೆ ಚಂದ್ರನು ಕಾಣಿಸಿಕೊಂಡಂತೆ, ಜಯಾಪಜಯಗಳನ್ನು ಸ್ಥಿರಪಡಿಸಲಸಮರ್ಥನಾದ ರಾಜನಿದಿರಿಗೆ ಗಾಯವಡೆದ ಸೇನಾಪತಿಯು ಜಯಪತಾಕೆಯನ್ನೇರಿಸಿ ತಟ್ಟನೆ ಗೋಚರಿಸಿದಂತೆ, ಗೌರೀಶಂಕರನು ಅಚ್ಯುತಾನಂತಗೋವಿಂದನ ಇದಿರಿನಲ್ಲಿ ಕಾಣಿಸಿಕೊಂಡನು ಈತನನ್ನು ಕಂಡಕೂಡಲೇ ಯಜಮಾನನು ಪರಮಾನಂದಭರಿತನಾಗಿ—"ಗೌರೀಮಹಾಶಯ ! ಕ್ಷೇಮವೇ ? ಮತ್ತಾವ ಕುಂದುಕೊರತೆಯೂ ಉಂಟಾಗಲಿಲ್ಲವಷ್ಟೇ ? ಎಂದು ಕೇಳಿದನು.

ಗೌರೀಶಂಕರನು ಯಜಮಾನನ ಸಂತೋಷಸೂಚಕವಾದ ಮಾತನ್ನು ಕೇಳಿ ಹಿಗ್ಗಿದವನಾಗಿ ಸಂತೋಷದಿಂದ ಸಿಟ್ಟುಸಿರನ್ನು ಬಿಟ್ಟು—" ಮಹಾ

ಪ್ರಭೂ! ತಮ್ಮ ಅನ್ನಪ್ರಭಾವದಿಂದ ಎಲ್ಲವೂ ಸುಮುಖವಾಗಿ ನೆರವೇರಿರುವುದು. ತಾವು ಸಾವಧಾನವಾಗಿ ಪರ್ಯಾಲೋಚಿಸಿ ಮಾಡಿದ ಕಾರ್ಯದಲ್ಲಿ ಅದಾವ ಅಡ್ಡಿ ತಾನೇ ಬಂದೀತು? ಗೌರೀಶಂಕರನಾದರೋ ಹಿಡಿದ ಆವ ಕೆಲಸವನ್ನೂ ನೆರವೇರಿಸದೆಯೇ ಹಿಂದಿರುಗಿ ಬರತಕ್ಕವನಲ್ಲವಷ್ಟೇ? ಎಂದು ಅತಿ ವಿನಯದಿಂದ ಮೃದುಮಧುರವಾಗಿ ಉತ್ತರವಿತ್ತನು.

ಅಚ್ಯುತ—ವಿನಯನನ್ನು ಎಲ್ಲಿ ಬಿಟ್ಟು ಬಂದೆ?

ಗೌರೀ—ನಾನು ಭೈರವೀ ನದಿಯಲ್ಲಿ ಹಡಗನ್ನೇರಿ ಪೂರ್ವಾಭಿಮುಖವಾಗಿ ತೆರಳಿ ಸಮುದ್ರವನ್ನು ಸೇರಿ ಅಲ್ಲಿ ಅನೇಕ ದಿನಗಳ ವರೆಗೂ ಪಯಣ ಬೆಳೆಯಿಸಿದ ಮೇಲೆ ಇಪ್ಪತ್ತೊಂದನೆಯ ದಿವಸದ ರಾತ್ರಿಯ ಕೊನೆಯ ಜಾವದಲ್ಲಿ ಒಂದು ಸಣ್ಣ ದ್ವೀಪವನ್ನು ಕಂಡು ಅಲ್ಲಿ ಅವನನ್ನು ಬಿಟ್ಟು ಹಿಂದಿರುಗಿದೆನು

ಅಚ್ಯುತ—ಸಮುದ್ರದ ಮಧ್ಯದಲ್ಲಿ ದ್ವೀಪಗಳುಂಟೆಂದು ನಾನು ಕೇಳಿರುವೆನು. ದ್ವೀಪಗಳಲ್ಲಿ ಸಣ್ಣವೂ ದೊಡ್ಡವೂ ಇರುವುವು ಕೆಲಕೆಲವು ದ್ವೀಪಗಳಲ್ಲಿ ದುಷ್ಟ ಜಂತುಗಳೂ ಇರುವುದುಂಟು ವಿನಯನಿಗೆ ಇವುಗಳಿಂದ ಪ್ರಾಣಭಯವೇನೂ ಆಗಲಾರದಷ್ಟೆ?

ಗೌರೀ—ವಿನಯನಿರುವ ದ್ವೀಪವು ಅಷ್ಟಾಗಿ ದೊಡ್ಡದಲ್ಲ. ಅದರಲ್ಲಿ ಗಿಡುಮರಗಳಾವುವೂ ಕಂಡು ಬರಲಿಲ್ಲ ಅಲ್ಲಿ ದುಷ್ಟ ಮೃಗಗಳಾವುವೂ ಇದ್ದಿರಲಾರವೆಂದು ನನಗೆ ನಂಬುಗೆ ಬಲು ತೆರನಾಗಿ ವಿನಯನ ಪ್ರಾಣಕ್ಕೇನೂ ಅಪಾಯವಿಲ್ಲವೆಂದು ತೋರುವುದು

ಗೌರೀಶಂಕರನು ಈ ಮಾತನ್ನು ಹೇಳುತ್ತಿರುವಷ್ಟರಲ್ಲಿಯೇ ಸರ್ವಾಧಿಕಾರಿಯೂ ಬಂದು ಸೇರಿದನು. ಸರ್ವಾಧಿಕಾರಿಯು ಗೌರೀಶಂಕರನನ್ನು ನೋಡಿ,—"ಮಹಾಶಯ! ಆವಾಗ ಬರೋಣವಾಯಿತು? ಎಲ್ಲವೂ ಮಂಗಳವಷ್ಟೇ?" ಎಂದು ಕುಶಲ ಪ್ರಶ್ನೆ ಮಾಡಿದನು

ಗೌರೀ—ಈಗತಾನೇ ಬಂದೆನು ಎಲ್ಲವೂ ಮಂಗಳವು.

ಸರ್ವಾ—ಹೋಗಿದ್ದ ಕೆಲಸವೇನಾಯಿತು?

ಗೌರೀ—ಯಜಮಾನರಲ್ಲಿ ಅದನ್ನೇ ಹೇಳುತ್ತಿದ್ದೆನು. ಅಷ್ಟರಲ್ಲಿಯೇ ತಾವೂ ಬಿಜಯಮಾಡಿಸೋಣವಾಯಿತು

ಅಚ್ಯುತ—ಆ ಮಾತು ಹಾಗಿರಲಿ. ದ್ವೀಪದಲ್ಲಿ ಬಿಟ್ಟಾಗ ವಿನಯನು ಏನ ಹೇಳಿದನು?

ಗೌರೀ—ಅವನು ಏನ ಹೇಳಾನು ? ನಾನು ದ್ವೀಪದಲ್ಲಿಳಿದೊಡನೆಯೇ ಮರಳಿನ ರಾಶಿಯ ಮೇಲೆ ಕಂಬಳಿಯನ್ನು ಹಾಸಿ ಮಲಗಿಕೊಂಡು ವಿನಯ ನನ್ನೂ ಮಲಗಿಕೊಳ್ಳುವಂತೆ ಹೇಳಿದೆನು ಅವನಿಗೆ ಇಷ್ಟವಿಲ್ಲದಿದ್ದರೂ, ನನ್ನ ಅಪ್ಪಣೆಗೆ ಹೆದರಿ ಮಲಗಿದನು ಅರುಣೋದಯದ ಮಂದಮಾರುತನು ತಂಪಾಗಿ ಬೀಸುತ್ತಿರಲು, ಅವನಿಗ ಮೈಮರೆತು ನಿದ್ದೆ ಹತ್ತಿತು. ನಾನು ಇದನ್ನು ಕಂಡುಕೊಂಡು ಬೇಗಬೇಗನೆ ಹಡಗನ್ನೇರಿ ಓಂದಿರುಗಿ ಬಂದುಬಿಟ್ಟೆನು. ಮಹಾಪ್ರಭೂ! ನೋಡೋಣವಾಗಲಿ ಸುಂದರವಾದ ಮುಖದಲ್ಲಿ ಅದೆಂತಹ ಮಹಿಮೆಯಿರುವುದೋ ನಾನು ಕಾಣೆನು ಲೋಕದಲ್ಲಿ ಸುಂದರವಾದ ಮುಖವೇ ಎಂದೆಂದಿಗೂ ಜಯಿಸಬಲ್ಲುದು ಅವನ ಸುಂದರವಾದ ಮುಖವನ್ನು ನೋಡಿದೊಡನೆಯೇ ನನ್ನ ಹೃದಯದಲ್ಲಿ ಹೇಳಲಸದಳವಾದ ಕನಿಕರವುಂಟಾಯಿತು ನಿದ್ದೆ ಹೋಗುತ್ತಿದ್ದ ವಿನಯನನ್ನು ನಾನೊಂದು ಸಲ ಗಮನವಿಟ್ಟು ನೋಡಿದನು ಮುಖದಲ್ಲಿ ಅದೆಂತಹ ಸೌಂದರ್ಯ! ಕಾಪಟ್ಯವನ್ನರಿಯದ ಕಣ್ಣುಗಳು ನಿದ್ರೆಯಲ್ಲಿ ಮುಚ್ಚಿಕೊಂಡಿದ್ದರೂ, ನೋಡುವುದಕ್ಕೆ ಎಷ್ಟೋ ರಮ್ಯವಾಗಿದ್ದುವು ಸ್ಮಿತ ಮಧುರವಾದ ತುಟಿಗಳ ಮಧ್ಯದಿಂದ ಕುಂದ ಕುಸುಮದಂತಿರುವ ದಂತಪಙ್ಕ್ತಿಯು ದೇವಲೋಕದ ಶೋಭಾರಾಶಿಯನ್ನು ಬೀರುತ್ತಿದ್ದಿತು ಇಂತಹ ಅನಿಂದಿತವಾದ ಸುಂದರ ಮೂರ್ತಿಯನ್ನು ಜನರಹಿತವಾದ ದ್ವೀಪದಲ್ಲಿ ಏಕಾಕಿಯಾಗಿ ಬಿಟ್ಟು ಬರಬೇಕೆಂದರೆ ಎಂತಹ ಕಟುಕನಿಗಾದರೂ ಎದೆಯು ಪಟಪಟನೆ ಒಡೆದು ಹೋಗದೇ ಇರದು ನನ್ನ ಹೊರತಾಗಿ ಮತ್ತಾರನ್ನು ಕಳುಹಿದ್ದರೂ, ಈ ಮರ್ಮವಿದಾರಿಯಾದ ಕೆಲಸವು ನೆರವೇರತಕ್ಕುದಾಗಿರಲಿಲ್ಲ. ನಾನು ಹೋದುದರಿಂದಲೇ ಈ ಕೆಲಸವು ನಿರಾತಂಕವಾಗಿ ನೆರವೇರಿತು. ನಾನು ಅಹಂಕಾರದಿಂದ ಈ ಮಾತ ಹೇಳುವೆನೆಂದು ಸ್ವಾಮಿಯು ಭಾವಿಸಲಾಗದು.

ಗೌರೀಶಂಕರನ ಕಥೆಯನ್ನು ಒಂದೇ ಮನಸ್ಸಿನಿಂದ ಕೇಳುತ್ತಾ ಕುಳಿತಿದ್ದ ಸರ್ವಾಧಿಕಾರಿಯು ನಿಟ್ಟುಸಿರನ್ನು ಬಿಟ್ಟು ಮೃದುವಾದ ಕಂಠದಿಂದ— "ಕೆಲಸವು ಚೆನ್ನಾಗಿಯೂ ತೃಪ್ತಿಕರವಾಗಿಯೂ ನೆರವೇರಿದಂತೆ ತೋರುವುದಿಲ್ಲ," ಎಂದನು.

ಅಚ್ಯುತ—ಅವನು ಸಾಯಲಿಲ್ಲವಷ್ಟೇ ? ನಮ್ಮಿಷ್ಟವೂ ಅವನನ್ನು ಕೊಲ್ಲಬೇಕೆಂದಲ್ಲ. ನಮ್ಮ ಹುಡುಗಿಗೆ ಮದುವೆಯಾಗುವ ವರೆಗೂ, ಅವನು

ಕಣ್ಮರೆಯಾಗಿರಬೇಕೆಂಬುದೇ ನಮ್ಮ ಉದ್ದೇಶವು. ಅವನು ನಮ್ಮ ದೇಶದಲ್ಲಿಯೇ ಇರುವುದಾಗಿದ್ದರೆ, ನಮ್ಮ ಹುಡುಗಿಯು ಅವನನ್ನು ಬಿಟ್ಟು ಬೇರೊಬ್ಬನನ್ನು ಮದುವೆಯೇ ಆಗುತ್ತಿರಲಿಲ್ಲ. ನಮ್ಮ ಜಾನಕೀನಾಥನಿಗೂ ವಿನಯನನ್ನು ಬಿಟ್ಟು ಬೇರೆಯ ಕಡೆಯಲ್ಲಿ ಹುಡುಗಿಯನ್ನು ಕೊಡುವುದಕ್ಕೆ ಇಷ್ಟವಿಲ್ಲ. ಆದುದರಿಂದ ಈಗ ನಾನು ಆಲೋಚಿಸಿರುವುದೇನೆಂದರೆ—"ವಿನಯನು ಮತಾಂತರವನ್ನು ಅವಲಂಬಿಸಿ ಒಬ್ಬ ವಿಧರ್ಮಿಯ ಜತೆಯಲ್ಲಿ ಸೇರಿಕೊಂಡು ಎಲ್ಲಿಗೋ ಹೊರಟು ಹೋದನೆಂದು ಸುಳ್ಳಿನ ಸುದ್ದಿಯನ್ನು ಹುಟ್ಟಿಸಿ, ನಾನು ನಿಶ್ಚಯ ಮಾಡಿರುವ ನಂದನ ಗ್ರಾಮದ ವರನಿಗೆ ನನ್ನ ಮಗಳನ್ನು ಕೊಟ್ಟು ಮದುವೆ ಮಾಡಿದ ಬಳಿಕ, ವಿನಯನನ್ನು ಹುಡುಕಿಸಿ ಈ ದೇಶಕ್ಕೆ ಕರೆಸಿಕೊಳ್ಳುವೆನು."

ಸರ್ವಾಧಿಕಾರಿ—ವಿನಯನನ್ನು ಅಂತಹ ಭಯಂಕರವಾದ ದ್ವೀಪದಲ್ಲಿ ಬಿಡದೆ, ಜನಗಳಿರುವ ದೂರ ದೇಶದಲ್ಲಿಯಾದರೂ ಬಿಟ್ಟು ಬಂದಿದ್ದರೆ ಚೆನ್ನಾಗಿರುತ್ತಿತ್ತು. ವಿನಯನು ಎಂದಿಗೂ ದೂರದೇಶಕ್ಕೆ ಪ್ರಯಾಣಮಾಡಿದವನಲ್ಲ. ದೂರದೇಶದಲ್ಲಿ ಬಿಟ್ಟಿದ್ದರೂ, ಅವನು ತನ್ನ ಸ್ಥಳವನ್ನು ಹುಡುಕಿಕೊಂಡು ಬರುವಷ್ಟು ಕಾಲದೊಳಗಾಗಿಯೇ ಸರಳಕುಮಾರಿಗೆ ವಿವಾಹವಾಗಿಬಿಡುತ್ತಿದ್ದಿತು. ಈಗ ಅವನಿರುವ ದ್ವೀಪದಲ್ಲಾದರೋ, ಭಯಕ್ಕೆ ಆಸ್ಪದವಿದ್ದೇ ಇರುವುದು. ಅದರಿಂದ ಅವನು ಬದುಕಿ ಬರುವನೆಂಬ ನಂಬುಗೆ ನನಗೆ ಸಾಲದು. ಅವನಿಗೆ ಸಹೋದರರಾರೂ ಇಲ್ಲ, ವೃದ್ಧರಾದ ತಾಯಿ ತಂದೆಗಳೂ ತಂಗಿಯೊಬ್ಬಳೂ ಇರುವರು. ಅಕಟಕಟ! ವಿನಯನು ಪ್ರಾಣಬಿಟ್ಟರೆ, ಇವರುಗಳನ್ನು ಪೋಷಣೆ ಮಾಡುವವರಾರು?

ಅಚ್ಯುತ— ಇಲ್ಲ, ಅವನು ಸಾಯಲಿಕ್ಕಿಲ್ಲ. ಏನು, ಗೌರೀಶಂಕರ?

ಗೌರೀ—ಸಾಯಲಾರನೆಂದು ತೋರುವುದು.

ಸರ್ವಾ—ಒಂದುವೇಳೆ ಜಗದೀಶನ ಕೃಪೆಯಿಂದಲಾದರೂ ಅವನು ಬದುಕಿಕೊಳ್ಳಲಿ, ತನ್ನ ದೇಶಕ್ಕೆ ಹಿಂದಿರುಗಿಯೂ ಬರಲಿ, ಆದರೆ ಅವನು ಮತಾಂತರವನ್ನವಲಂಬಿಸಿ ವಿಧರ್ಮಿಯ ಜತೆಯಲ್ಲಿ ಸೇರಿಕೊಂಡು ಹೊರಟು ಹೋದನೆಂಬ ಸುದ್ದಿಯನ್ನು ಹುಟ್ಟಿಸುವುದು ತರವಲ್ಲ. ಅವನು ಕುಲಚ್ಯುತನೆಂದು ಸುದ್ದಿಯಿದ್ದರೆ, ಲೋಕದಲ್ಲಿ ಅವನನ್ನು ಆರೂ ಹತ್ತಿರದಲ್ಲಿ ಸೇರಿಸರು. ಬಳಿಕ ಅವನಿಗೆ ಮದುವೆಯಾಗುವ ಭರವಸೆಯೇ ತಪ್ಪಿಹೋಗುವುದು.

ಅವನ ಮುಂದಣ ಸುಖದಲ್ಲಿ ಅಡ್ಡಿಯನ್ನು ತಂದು ಒಡ್ಡಿದರೆ ನಮಗೆ ಬಂದ ಭಾಗ್ಯವೇನು ? ಅವನು ನಿಮ್ಮ ಹೆಸರು ಹೇಳಿಕೊಂಡು ಕೊರಗಿ ಕೊರಗಿ ಸತ್ತರೆ, ಈಶ್ವರನು ನಿಮಗೆ ತಾನೇ ಒಳ್ಳೆಯದನ್ನು ಮಾಡಬಲ್ಲನೇ ?

ಅಚ್ಯುತ—ಹಾಗಾದರೆ ನಾವೇನ ಮಾಡಬೇಕು ? ಹೇಳು. ನಾನು ಈ ಸುದ್ದಿಯನ್ನು ಹರಡದಿದ್ದರೆ, ಅವನು ಮತ್ತೆ ಇಲ್ಲಿಗೆ ಬಂದು ಸೇರುವ ಸಂಭವ ವುಂಟು. ಒಂದು ವೇಳೆ ನಮ್ಮ ಹುಡುಗಿಗೆ ಈಗ ಮದುವೆಯಾಗಲು ಅಸು ಕೂಲಿಸದೇ ಹೋದರೂ, ಮತ್ತೊಂದು ವರನನ್ನು ಹುಡುಕುವುದಕ್ಕೆ ನಾವ ಕಾಶವಾಗುವುದಾದರೂ, ವಿನಯನು ಅಷ್ಟರಲ್ಲಿಯೇ ಇಲ್ಲಿಗೆ ಬಂದುಬಿಡುವು ದಾದರೆ, ಸರಳೆಯು ಆತನನ್ನೇ ವರಿಸುವಳು ಇದು ನನ್ನ ಇಷ್ಟಕ್ಕೆ ವಿರೋಧ ವಾದುದು.

ವಿನಯನು ಕುಲಚ್ಯುತನೆಂದು ಪ್ರಚಾರಪಡಿಸಿದ ಮಾತ್ರನೇ ಅವನು ಕುಲಚ್ಯುತನಾದಾನೇ ? ಒಂದುವೇಳೆ ಜನಗಳು ಅವನನ್ನು ಸಮಾಜದಲ್ಲಿ ಸೇರಿಸದಿದ್ದರ, ಅದನ್ನು ಸರಿಪಡಿಸುವುದು ಅಸಾಧ್ಯವಾದುದೇ ? ಪ್ರಾಯ ಶ್ಚಿತ್ತರೂಪದಲ್ಲಿ ಸುವರ್ಣ ಪುಷ್ಪವನ್ನು ಸಮರ್ಪಣ ಮಾಡಿದರೆ, ಪುರೋ ಹಿತರು ತಾವಾಗಿಯೇ ಕುಲದಲ್ಲಿ ಸೇರಿಸಿಕೊಳ್ಳುವರು. ಹಣದಿಂದ ಸಾಧ್ಯವಾ ಗದ ಕೆಲಸವು ಅದಾವದಿರುವುದು? ಎಷ್ಟೋ ಜನರು ಮಾಡಬಾರದ ಅತ್ಯಾ ಚಾರಗಳನ್ನು ಮಾಡಿ ಮತಾಚಾರ್ಯರ ಪಾದಮೂಲದಲ್ಲಿ ಹಣದ ರಾಶಿಯನ್ನು ಸುರಿದು ಕುಲದಲ್ಲಿ ಸೇರಿಕೊಂಡಿಲ್ಲವೇ ? ಇದಕ್ಕಾಗಿ ನೀನೇತಕ್ಕೆ ಇಷ್ಟು ವ್ಯಸನವಡಬೇಕು ? ಅವನಲ್ಲಿ ಹಣವಿಲ್ಲದಿದ್ದರೆ ನಾನೇ ಕೊಡುವೆನು.

ಸರ್ವಾ—ಹಣ ಕೊಟ್ಟ ಮಾತ್ರಕ್ಕೇ ಮಠಾಧಿಕಾರಿಗಳು ಶಾಸ್ತ್ರ ಸಮ್ಮತವಲ್ಲದ ಕೆಲಸವನ್ನು ಮಾಡುವರೇ ?

ಅಚ್ಯುತ—ಮಾಡುವರು, ಏನ ಬೇಕಾದರೂ ಮಾಡುವರು. ಹಣದ ಶಬ್ದವು ಕಿವಿಯಲ್ಲಿ ಬಿದ್ದೊಡನೆಯೇ ಶಾಸ್ತ್ರಕಾರರ ವಚನಗಳು ಬೇರೆಯ ವಿಧವಾಗಿ ಅರ್ಥ ಕೊಡುವುವು. ಶಾಸ್ತ್ರಕಾರರ ವಚನವದಂತಿರಲಿ. ಹತ್ತು ಜನಗಳು ಒಪ್ಪುವುದಾದರ ಕುಲಟೆಯಾದರೂ ಪತಿವ್ರತೆಯಾಗುವಳು. ದ್ರವ್ಯವು, ಹತ್ತರ ಮಾತೇನು! ನೂರು ಜನಗಳನ್ನಾದರೂ ಒಪ್ಪಿಸಬಲ್ಲುದು. ಈ ಮಹಾ ಮಂತ್ರವು ನನ್ನಲ್ಲಿರುವಾಗ, ನಾನು ಆವುದಕ್ಕೆ ತಾನೇ ಭಯಪಡ ಬೇಕು ? ಇದಂತಿರಲಿ. ಮಹಾಶಯ ! ಹೊತ್ತಾಯಿತು. ಹತ್ತಾರು ಜನರು

ಬಂದು ಕಾದಿರುವರು. ಇನ್ನು ಗ್ರಾಮದ ಕೆಲಸಗಳನ್ನು ನೋಡುವುದಕ್ಕೆ ತೆರಳಬಹುದು.

ಸರ್ವಾಧಿಕಾರಿಯು ಯಜಮಾನನ ಅಪ್ಪಣೆಯನ್ನು ಪಡೆದುಕೊಂಡು ಹೊರಟು ಹೋದನು. ಅಧಿಕಾರದ ಮಂದಿರದಲ್ಲಿ ತಾನು ಮಾಡಬೇಕಾದ ಆ ದಿನದ ಕೆಲಸವೆಲ್ಲವನ್ನೂ ಯಥೋಚಿತವಾಗಿ ಸಂಧ್ಯಾಕಾಲದ ವರೆಗೂ ನೆರವೇರಿಸಿ ಬಂದಿದ್ದವರೆಲ್ಲರನ್ನೂ ಕಳುಹಿ ತನ್ನ ಮನೆಗೆ ತೆರಳಿದನು ಸರ್ವಾಧಿಕಾರಿಯ ಹೆಸರು ರಾಮರಾಮಶರ್ಮ ಇವನು ದೂರದೇಶದಿಂದ ಇಲ್ಲಿಗೆ ಬಂದು ಕೆಲಸವನ್ನು ಸಂಪಾದಿಸಿಕೊಂಡು ಶಿವರಾಮಪುರದಲ್ಲಿಯೇ ವಾಸಮಾಡಿಕೊಂಡಿರುತ್ತಿದ್ದನು ಈತನಿಗೆ ೧೮ ವರ್ಷ ವಯಸ್ಸುಳ್ಳ ಮಗನೊಬ್ಬನೂ ಹದಿನಾರು ವರ್ಷ ವಯಸ್ಸುಳ್ಳ ದೊಡ್ಡ ಮಗಳೊಬ್ಬಳೂ, ಏಳುವರ್ಷದ ಮತ್ತೊಬ್ಬ ಮಗಳೂ ಇದ್ದರು ಆತನ ದೊಡ್ಡ ಮಗಳ ಹೆಸರು ಲಲಿತಾಂಗಿ ಈ ಲಲಿತಾಂಗಿಯು ವಿನಯಕುಮಾರನಿಗೆ ಅಚ್ಚುಮೆಚ್ಚಾದ ಗೆಳತಿ ರಾಮರಾಮಶರ್ಮನು ತನ್ನ ಹೆಂಡತಿಯನ್ನು ಅತಿಯಾಗಿ ಪ್ರೀತಿಸುತ್ತಿದ್ದುದರಿಂದ, ಕಂಡು ಕೇಳಿದ ವಿಷಯಗಳೆಲ್ಲವನ್ನೂ ಆಕೆಗೆ ತಿಳಿಸದೇ ಇರುತ್ತಿರಲಿಲ್ಲ ಪುರುಷನಾದವನು ಎಲ್ಲಾ ವಿಷಯಗಳನ್ನೂ ತನ್ನ ಹೆಂಡತಿಗೆ ತಿಳಿಸುವುದು ಯುಕ್ತವೋ ಅಯುಕ್ತವೋ ಅದರ ವಿಚಾರವು ನಮಗೆ ಬೇಡ. ವಿಚಾರಮಾಡಿ ನೋಡಿದರೂ ಸಿದ್ಧಾಂತಪಡಿಸಲಾಗುವುದಿಲ್ಲ ರಾಮರಾಮನು ತನ್ನ ಸ್ವಭಾವಾನುಗುಣವಾಗಿ ವಿನಯಕುಮಾರನ ವೃತ್ತಾಂತವೆಲ್ಲವನ್ನೂ ಒಂದು ಚೂರೂ ಬಿಡದೆ ಹೆಂಡತಿಗೆ ತಿಳಿಯಪಡಿಸಿದನು ಹೆಂಡತಿಯು ಇದನ್ನು ಕೇಳಿ ಲೋಕಾಭಿರಾಮವಾಗಿ ಸ್ತ್ರೀಪುರುಷರ ಸಂಬಂಧವಾದ ಸಮಾಲೋಚನೆಯನ್ನು ಮಾಡತೊಡಗಿದಳು. ಉಪಸಂಹಾರದಲ್ಲಿ ಅವಳ ಕಣ್ಣುಗಳಿಂದ ಒಂದೆರಡು ತೊಟ್ಟು ಕಣ್ಣೀರು ಸ್ವಸ್ಥಾನವನ್ನು ತ್ಯಾಗಮಾಡಿ ಭೂಮಿಯ ಮೇಲೆ ಬಿದ್ದು ಎಲ್ಲಿಯೋ ಮಾಯವಾಗಿ ಹೋಯಿತು.



# ಏಳನೆಯ ಲಂಬಕ.

## ಹೂವಿನಲ್ಲಿ ಸಿಡಿಲಿನ ಸಿಡತ

ಅಚ್ಯುತಾನಂತಗೋವಿಂದನ ಮನೆಯ ಹಿಂಭಾಗದಲ್ಲಿ ಒಂದು ಸಣ್ಣ ಹೂದೋಟವಿರುವುದು ಅದರಲ್ಲಿ ಬಗಬಗೆಯ ಹೂಗಳು ಅರಳಿ ಅಪೂರ್ವ ವಾದದೊಂದು ಶೋಭಾರಾಶಿಯನ್ನು ಬೀರುತಲಿರುವುವು. ಪುಷ್ಪರೇಣುಗಳು ವಾತಪೋತಗಳೊಡನೆ ಸೇರಿಕೊಂಡು ಎಲ್ಲಿಯೋ ವಿಹರಿಸಲು ತೇಲಿಹೋಗು ತ್ತಲಿದ್ದುವು. ಮಂದಮಾರುತಾಂದೋಳಿತವಾದ ಎಲೆಗಳಿಂದ ಹಿಮವು ಕರಗಿ ನೀರಾಗಿ "ತೊಟ್, ತೊಟ್, ತೊಟಾ ತೊಟ್" ಎಂದು ತೊಟ್ಟಿಕ್ಕುತ್ತಿದ್ದಿತು. ಇದನ್ನು ನೋಡಿದರೆ, ನವೀನಕಾಲದ ಕೆಲವು ಯುವಕರು ಸ್ವಧರ್ಮವನ್ನು ತ್ಯಾಗಮಾಡಿಯೂ ಪರಧರ್ಮದ ಮರ್ಮವನ್ನರಿಯದೆಯೂ "ಇತೋ ಭ್ರಷ್ಟಃ ತತೋ ಭ್ರಷ್ಟಃ" ಎಂಬಂತಾಗಿ ದಿಕ್ಕು ತೋರದೆ ಸಂಕಟದಿಂದ ಏಕಾಂತ ದಲ್ಲಿ ಕಣ್ಣೀರು ಸುರಿಸುತ್ತಿರುವುದನ್ನು ನೋಡಿ, ಅವರ ದುಃಖದಲ್ಲಿ ದುಃಖ ಗೊಂಡು ವೃಕ್ಷಗಳೇನಾದರೂ ಅಳುತ್ತಿವೆಯೋ ಎಂಬಂತೆ ನೋಟಕರಿಗೆ ಬೋಧೆಯಾಗುತ್ತಿರುವುದು ಬಾಲಾತಪರಶ್ಮಿಗಳು ನವಕಾಮುಕರಂತೆ ಹೊ ತ್ತುಗೊತ್ತಿಲ್ಲದೆ ಪುಷ್ಪಮಂಜರಿಗಳ ಮೇಲೆ ವಿಹರಿಸುತ್ತಿರುವುವು. ಬೆಳಗಿನ ಹೊತ್ತಿನಲ್ಲಿ ಆರೂ ವ್ಯರ್ಥವಾಗಿ ಕಾಲಹರಣ ಮಾಡದೆ ಆತ್ಮಸುಖಕ್ಕಾಗಿ ಪ್ರಯತ್ನಪಡುತ್ತಿರಬೇಕೆಂಬುದನ್ನು ಬೋಧಿಸುತ್ತವೆಯೋ ಎಂಬಂತೆ ದುಂ ಬಿಗಳು ಹೂವಿನಿಂದ ಹೂವಿಗೆ ಹಾರುತ್ತಲಿರುವುವು. ಪಕ್ಷಿಗಳು ನಿದ್ರೆಯಿಂ ದೆದ್ದು ರೆಕ್ಕೆಗಳನ್ನು ಕೊಡಹಿಕೊಂಡು ಕೂಗುತ್ತಾ ಹಾರುತಲಿದ್ದುವು.

ಈ ತೋಟದಲ್ಲಿ ಹದಿಮೂರು ವರ್ಷದ ಹುಡುಗಿಯೊಬ್ಬಳು ಹೂ ಗಳನ್ನು ಕೊಯ್ಯುವ ನಿಮಿತ್ತಮಾಡಿಕೊಂಡು ಅಲ್ಲಲ್ಲಿ ಸಂಚರಿಸುತ್ತಿರುವಳು, ಆಗಾಗ ಒಂದೊಂದು ಹೂವನ್ನು ಕೊಯ್ಯುವಳು. ಅಡಿಗಡಿಗೆ ಬಲು ಆಯಾ ಸಪಟ್ಟವಳಂತೆ ಅಲ್ಲಲ್ಲಿ ಕುಳಿತುಕೊಳ್ಳುವಳು, ಮತ್ತೆ ಎದ್ದು ಹೂಗಳನ್ನು ಕೊಯ್ಯುವಳು, ಕೊಯ್ದು ಹೂಗಳನ್ನು ಮಾಲೆ ಕಟ್ಟಿ ತನ್ನ ಮುಡಿಯಲ್ಲಿ ಮುಡಿಯುವಳು, ಅದರಿಂದಲೂ ಬೇಸತ್ತು, ಆ ಮಾಲೆಯನ್ನು ಕಿತ್ತು ಬಿಸು ಡುವಳು. ಆ ಬಾಲೆಯು ಹೀಗೆಲ್ಲಾ ಮಾಡಿದ ಬಳಿಕ ತೋಟದ ಒಂದೆಡೆ

ಯಲ್ಲಿ ಬೆಳೆದಿದ್ದ ಗುಲಾಬಿಯ ಹತ್ತಿರಕ್ಕೆ ಹೋಗಿ ಅದನ್ನು ಕೊಯ್ಯಲು ಯತ್ನ ಮಾಡಿದಳು. ಗುಲಾಬಿಯ ಮುಳ್ಳುಗಳು ಆಕೆಯ ಸೀರೆಯ ಸೆರಗನ್ನು ಹಿಡಿದೆಳೆದುವು. ಒಂದು ಕಡೆ ಬಿಡಿಸಿಕೊಳ್ಳುವುದಕ್ಕೆ ಹೋದರೆ, ಮತ್ತೊಂದು ಕಡೆಯ ಮುಳ್ಳುಗಳು ಹಿಡಿದೆಳೆವುವು. ಕ್ರೀಡಾಶೀಲನಾದ ದುಷ್ಟಮಾರುತನು ಇದೇ ಸರಿಯಾದ ಸಮಯವೆಂದರಿತು, ಬಾಲೆಯ ಸೆರಗನ್ನು ಜಾರಿಸುತ್ತಲೂ, ಮುಂಗುರುಳುಗಳನ್ನು ಮುಖದ ಮೇಲೆ ಹರಡುತ್ತಲೂ, ಹುಡುಗಿಗೆ ಸಲ್ಲದ ವೇಧೆಯನ್ನು ಕೊಡುತ್ತಾ ಅಲ್ಲಿ ಬಿದ್ದು ಇಲ್ಲಿ ಬಿದ್ದು ಓಡಿಹೋಗುತ್ತಿದ್ದನು. ಹುಡುಗಿಯು ಈ ಕಿರುಕುಳದಿಂದ ಬೇಸತ್ತವಳಾಗಿ "ಸುಟ್ಟ ಗಾಳಿಗೆ ಏನು ಬಂದಿತು? ನನ್ನನ್ನು ಏಕೆ ಹೀಗೆ ಗೋಳಿಡುವುದು?" ಎಂದು ಗೊಣಗುಟ್ಟುತ್ತಾ ಮುಂದೆ ಹಿಂದೆ ನೋಡಿದಳು.

ಹದಿನಾರು ವರ್ಷದ ಬಾಲೆಯೊಬ್ಬಳು ಹಿಂದೆ ನಿಂತುಕೊಂಡು, ಈ ಮಾರುತನ ವಿಲಾಸವನ್ನು ನೋಡುತ್ತಿದ್ದವಳು,—"ಸರಳೆ! ರಸಿಕನಾದ ಮಾರುತನ ವಿಲಾಸವು ನಾಕಾಯಿತೇ?" ಎಂದು ಕೇಳಿದಳು.

ಸರಳೆ—ಇದೇನು? ಲಲಿತಾ! ಇಷ್ಟು ಹೊತ್ತಿಗೇನೇ ಬಂದು ಬಿಟ್ಟೆ? ಸುಸ್ಥವಾಗಿರುವೆಯಾ?

ಲಲಿತಾಂಗಿ—ಸುಸ್ಥವಾಗಿರುವೆನು. ನೀನು?

ಸರಳೆ—ಇದಿಗೋ! ಹೀಗಿರುವೆನು

ಲಲಿತಾ—"ಹೀಗಿರುವೆನು" ಎಂದರೇನು, ಸರಳೆ!

ಸರಳೆ—ನಾನು ಏನ ಹೇಳಲಿ? ಹೀಗಿರುವೆನೆಂದರೆ, ಹೀಗೆಯೇ ಇರುವೆನು.

ಲಲಿತಾ—ಬಲು ಚೆನ್ನಾಗಿದೆ. ನೀನು ಈ ರೀತಿಯಾಗಿ ಮಾತನಾಡುವುದನ್ನು ಕಲಿತಿರುವುದಕ್ಕಾಗಿಯೇ ರಸಿಕನಾದ ಮಾರುತನು ನಿನ್ನಲ್ಲಿ ಹೀಗೆ ಅತ್ಯಾಚಾರ ಮಾಡಿದುದು ಅಚ್ಚರಿಯೇನೂ ಅಲ್ಲ.

ಸರಳೆ—ನಿನ್ನ ಹಾಸ್ಯವು ಸಾಕು ಈ ಹಾಳು ಮುಳ್ಳುಗಳಿಂದ ನನ್ನನ್ನು ಬಿಡಿಸು.

ಲಲಿತಾಂಗಿಯು ಸರಳೆಯ ಸೀರೆಯಲ್ಲಿ ತಗುಲಿಕೊಂಡಿದ್ದ ಮುಳ್ಳುಗಳನ್ನು ಒಂದೊಂದಾಗಿ ಬಿಡಿಸಿದಳು. ಬಳಿಕ ಸರಳಕುಮಾರಿಯು ಲಲಿತಾಂಗಿಯ ಕಯ್ಯನ್ನು ಹಿಡಿದುಕೊಂಡು ಬೇರೆಯ ಕಡೆಗೆ ಹೋಗುತ್ತಾ ದಾರಿಯಲ್ಲಿ

ಅವಳನ್ನು ಕುರಿತು,—"ಲಲಿತಾ! ನಾನೊಂದು ಮಾತ ಕೇಳುವೆನು. ಅದಕ್ಕೆ ಸರಿಯಾದ ಉತ್ತರ ಕೊಡುವೆಯೋ ಇಲ್ಲವೋ, ಹೇಳು," ಎಂದಳು.

ಲಲಿತಾ—ಸರಳೆ! ನಾನಾವಾಗ ಸರಿಯಾದ ಉತ್ತರ ಕೊಟ್ಟಿಲ್ಲ? ಅದೇನು ಹೇಳು?

ಸರಳೆ—ಈಗ ನಾನು ಕೇಳುವ ಪ್ರಶ್ನೆಯೇ ಬೇರೆ.

ಲಲಿತಾ—ಅದೇನು, ಹೇಳು?

ಸರಳೆ—ಹೇಳುವೆನು.

ಲಲಿತಾ—ಹೇಳು, ಕೇಳುವೆನು.

ಸರಳೆ—ಇಲ್ಲವಮ್ಮ! ನಾನು ಹೇಳುವುದಿಲ್ಲ. ನೀನು ಕೋಪದಿಂದ ಕೆಂಡಗೊಳ್ಳುವುದಾದರೆ ನಾನು ಮಾಡುವುದೇನು?

ಲಲಿತಾ—ಅದನ್ನು ಕಟ್ಟಿಕೊಂಡು ನಿನಗಾಗುವುದೇನು? ನೀನು ಹೇಳಬೇಕೆಂದಿರುವುದನ್ನು ಹೇಳಿಬಿಡು.

ಸರಳೆ—ಅದೆಲ್ಲಾ ಹಾಗಿರಲಿ ಲಲಿತಾ! ನೀನು ನಿನ್ನ ಪತಿಯನ್ನು ಪ್ರೀತಿಸುವುದಿಲ್ಲವೇತಕ್ಕೆ?

ಲಲಿತಾ—ಅವರ ನಡೆನುಡಿಗಳು ನನಗೆ ಸರಿಬೀಳುವುದಿಲ್ಲ. ನನ್ನ ದಾರಿಯೇ ಒಂದು, ಅವರ ದಾರಿಯೇ ಒಂದು.

ಸರಳೆ—ಏನ ಮಾತನಾಡುವೆ? ಸ್ವಾಮಿಯನ್ನು ಪ್ರೀತಿಸುವುದಿಲ್ಲವೆಂದರೇನು? ಎಷ್ಟಾದರೂ ನೀನು ಸ್ವಾಮಿಯ ಕಯ್ಯನ್ನು ಹಿಡಿದವಳಲ್ಲವೇ? ಸ್ವಾಮಿಯಲ್ಲಿ ನೂರು ತಪ್ಪುಗಳೇ ಇರಲಿ, ಅವುಗಳಿಂದ ನಿನಗಾಗುವದೇನು? ಎಲ್ಲಾ ತೆರನಾಗಿಯೂ ಸ್ವಾಮಿಗೆ ಅನುಕೂಲೆಯಾಗಿರುವುದೇ ನಾರಿಯ ಧರ್ಮವಲ್ಲವೆ? ಹೆಂಗುಸಿಗೆ ಪತಿ ಬಿಟ್ಟು ಮತ್ತಾರು ಗತಿ? ಸತಿಗೆ ಪತಿಯೇ ಗುರು, ಪತಿಯೇ ದೇವತೆ, ಪತಿಯೇ ಪರಲೋಕವು, ಹೀಗಿರುವಲ್ಲಿ ಅವರನ್ನು ಕಂಡರೆ ನಿನಗೆ ಆಗುವುದಿಲ್ಲವೆಂದರೇನು?

ಲಲಿತಾ—ನೀನು ಹೇಳುವುದೆಲ್ಲವೂ ಸತ್ಯವಾದುವು. ಪತಿಯನ್ನು ಕಂಡರೆ, ನಾನು ಭಯಭಕ್ತಿಗಳಿಂದ ನಡೆದುಕೊಳ್ಳುವೆನು. ನಿತ್ಯವೂ ಅವರ ಸೇವೆಯನ್ನೂ ಮಾಡುವೆನು. ಆದರೆ—

ಸರಳೆ—ಆದರೆ ನೀನು ಮಟ್ಟಿಗ ಅವರನ್ನು ಪ್ರೀತಿಸುವುದಿಲ್ಲವೇನೋ?

ಲಲಿತಾ—ಅಹುದು

ಸರಳೆ—ಅಹುದೆನ್ನುವುದಾದರೆ ನಿನಗೆ ನರಕವೇ ಸರಿ. ಅಲ್ಲಿ ಯಮ ದೂತರು ನಿನಗ ಚಿತ್ರಹಿಂಸೆ ಮಾಡದೇ ಬಿಡರು.

ಲಲಿತಾ—ನನ್ನ ಯತ್ನವೇನಿದೆ. ಹಿಂಸೆಮಾಡುವುದಾದರೆ ಸಹಿಸಲೇ ಬೇಕು. ಬೇಡವೆಂದರೆ ಕೇಳುವವರಾರು? ನನ್ನ ಮಾತು ಹಾಗಿರಲಿ. ಸರಳೆ ! ನೀನಾದರೋ ಪಕ್ಕದ ಮನೆಯ ಹರಿಯನ್ನು ಅಂತರ್ಯದಲ್ಲಿ ಪ್ರೀತಿಸುತ್ತಿರುವೆ. ಪ್ರೀತಿಸು, ಪ್ರೀತಿಸು ಅವನು ಸುಂದರನಾಗಿಯೂ ವಿದ್ಯಾವಂತನಾಗಿಯೂ ಇರುವನು. ಮೇಲೆ ಮೇಲೆ ವಿನಯನನ್ನೂ ಪ್ರೀತಿಸುತ್ತಿರುವೆ. ಇದನ್ನು ಆರು ಕಾಣರು ?

ಸರಳೆ— (ಕೊಂಚ ದೂರ ಸರಿದು, ಕಣ್ಣುಗಳಿಂದ ಕೆಂಡಗಳನ್ನು ದುರಿಸುತ್ತಾ) ಲಲಿತಾ! ನೀನು ಸಾಯಬಾರದೇನೇ ! ಇದೇನು ! ಸಲ್ಲದ ತಪ್ಪನ್ನು ನನ್ನ ಮೇಲೆ ಒರಗಿಸುವೆ ? ನಿನ್ನ ಹಾಗೆ ನಾನೇನು ಪಾಪೀಯಸಿಯೇ ? ನನ್ನ ಹೃದಯದ ಒಂದೊಂದು ನರದಲ್ಲಿಯೂ, ಒಂದೊಂದು ರಕ್ತಕಣದಲ್ಲಿಯೂ, ಒಂದೊಂದು ಮಾಂಸಖಂಡದಲ್ಲಿಯೂ, ಬಹುಮಾತಿನಿಂದೇನು ? ನನ್ನ ದೇಹದಲ್ಲಿ ಆವಾವ ಭಾಗಗಳಿವೆಯೋ ಅವುಗಳ ಒಂದೊಂದರಲ್ಲಿಯೂ ವಿನಯ ಕುಮಾರನ ಮೂರ್ತಿಯು ಪ್ರಕಾಶಮಾನವಾಗಿರುವುದು ಇಹಲೋಕದಲ್ಲಿ ನಾನು ವಿನಯನ ಹೊರತಾಗಿ ಮತ್ತೊಬ್ಬನನ್ನೂ ಕಾಣೆನು. ಪರಲೋಕದಲ್ಲಿಯೂ ವಿನಯನೇ ನನಗೆ ಆರಾಧ್ಯ ದೇವತೆ. ವಿನಯನೇ ನನಗೆ ಸರ್ವಕಾಲದಲ್ಲಿಯೂ ಸರ್ವಸ್ವ ಸ್ವರೂಪನು ಎಲೆ ಪಾಪಿ! ದೂರ ತೊಲಗು. ನೀನು ಈಗಳೇ ಇಲ್ಲಿಂದ ಹೊರಟು ಹೋಗು ನಿನ್ನ ಸುಟ್ಟ ಮೊಗವನ್ನು ನೋಡಲಾರ.

ಈ ಮಾತನ್ನು ಕೇಳಿದ ಕೂಡಲೆ ಲಲಿತಾಂಗಿಗೆ ಎಷ್ಟೋ ವ್ಯಸನವುಂಟಾಯಿತು, ಆದರೂ ಆಕೆಯು ಅದೆಲ್ಲವನ್ನೂ ತನ್ನಲ್ಲಿಯೇ ಅಡಗಿಸಿಕೊಂಡು, "ಸಖಿ! ಹೀಗೆ ಕೋಪಗೊಳ್ಳುವೆಯೇತಕೆ ? ನಿನ್ನ ಮನವನ್ನು ಅರಿವುದಕ್ಕಾಗಿಯೇ ನಾನು ಹೀಗೆ ಮಾತನಾಡಿದುದು ವಿನಯಕುಮಾರನ ಮೂರ್ತಿಯು ನಿನ್ನ ಹೃದಯದಲ್ಲಿ ಆವ ಬಗೆಯಾಗಿ ಅಂಕಿತವಾಗಿರುವುದೆಂಬುದನ್ನು ಹೊರಪಡಿಸುವುದಕ್ಕಾಗಿ ನಾನು ಸಲ್ಲದ ಮಾತನಾಡಬೇಕಾಯಿತೇ ಹೊರತು, ಮತ್ತಾವ ದುರಭಿಪ್ರಾಯವೂ ಇದರಲ್ಲಿಲ್ಲ ಇದಕ್ಕಾಗಿ ನೀನು ಕೋಪಮಾಡುವುದೆಂದರೇನು ? ಎಂದು ಮುಗುಳುನಗೆಯೊಡನೆ ತಿಳಿಯಪಡಿಸಿದಳು.

ಸರಳೆ—ಲಲಿತಾ! ನೀನು ಹೇಗಾದರೂ ಹೇಳಿಕೊಳ್ಳು. ಅಶ್ಲೀಲವಾದ ಮಾತು ನಿನ್ನ ಬಾಯಲ್ಲಿ ಬಂದುದರಿಂದಲೇ ನೀನು ಪಾಪಕ್ಕೆ ಗುರಿಯಾದೆ.

ಲಲಿತಾ—ಹಾಸ್ಯಕ್ಕಾಗಲಿ, ಪರೀಕ್ಷೆ ಮಾಡುವುದಕ್ಕಾಗಲಿ ನುಡಿದ ನುಡಿಗಳಿಂದ ಪಾಪವುಂಟೇನು ? ಸರಳೆ !

ಸರಳಕುಮಾರಿಯು ಈ ಮಾತಿಗೆ ಆವ ಉತ್ತರವನ್ನೂ ಕೊಡದೆ ಸುಮ್ಮನಿದ್ದು ಬಿಟ್ಟಳು. ಲಲಿತಾಂಗಿ ಸರಳೆಯನ್ನು ಕೊಂಚ ಹೊತ್ತು ರಪ್ಪೆ ಹಾಕದೆ ನೋಡಿದಳು ಆಕೆಯು ನೋಡುತ್ತಿದ್ದ ಹಾಗೆಯೇ ಅವಳ ಕಣ್ಣು ಗಳಿಂದ ನೀರು ದರದರನೆ ಹರಿಯಲಾರಂಭಿಸಿತು ಇದನ್ನು ಸರಳೆಯು ನೋಡಿ,—"ಲಲಿತಾ ! ಇದೇನೇ, ಹೀಗೆ ಅಳುವೆ ?" ಎಂದಳು,

ಲಲಿತಾ—ಅಮ್ಮ ! ನಾನೇನ ಹೇಳಲಿ ? ದೈವವಿಲಾಸವೇ ಹೀಗೆ. ನಾವು ಚಿಂತಿಸುವುದೇ ಒಂದು, ಅದಾಗುವುದೇ ಒಂದು. ಲೋಕದಲ್ಲಿ ನಮ್ಮ ಇಚ್ಛೆಯೆಲ್ಲವೂ ನಡೆವುದಾದರೆ, ನಮ್ಮ ಪುಣ್ಯಕ್ಕೆ ಎಣೆಯುಂಟೆ ?

ಸರಳೆ—ಲಲಿತಾ ! ಹೇಳು, ಅದೇನು, ಹೇಳು ?

ಲಲಿತಾ—(ಕಣ್ಣೀರ ತೊಡೆದುಕೊಳ್ಳುತ್ತಾ) ಹೇಳಲೆ! ಮಾತಿಗಿಂತ ಮೊದಲೇ ಪ್ರಾಣವು ಹೊರಗೆ ಬಂದುಬಿಡುವುದು. ಬಿಡಲೇ ! ಮರಣ ಸಂಕಟವಾಗುವುದು. ನನಗೆ ಈಗ ಏನ ಮಾಡುವುದಕ್ಕೂ ತೋರದಾಗಿದೆ, ಆದರೂ ತಿಳಿಸಿಬಿಡುವೆನು, ಕೇಳು ನಿಮ್ಮ ತಂದೆಯ ಸಾಹಸದಿಂದ ವಿನಯನು ಇಷ್ಟರೊಳಗಾಗಿಯೇ ಇಹ ದೇಹದಿಂದ ಮುಕ್ತನಾಗಿರಬಹುದು.

ಸರಳೆಯು ಈ ಮಾತನ್ನು ಕೇಳಿದ ಕೂಡಲೆ, ಜ್ಞಾನತಪ್ಪಿ ಬಸವಳಿದು ನೆಲದ ಮೇಲೆ ಬಿದ್ದುಬಿಟ್ಟಳು ಆಕೆಯ ಆಗಣ ದುರವಸ್ಥೆಯನ್ನು ನೋಡುವುದಕ್ಕೆ ಅರಿಗೂ ನಾಗದು. ಲಲಿತೆಯು ದಡಬಡನೆ ಶೈತ್ಯೋಪಚಾರ ಮಾಡಲು, ಕೊಂಚ ಹೊತ್ತಿನಲ್ಲಿಯೇ ಸರಳೆಯು ಎಚ್ಚತ್ತು,—"ಅಮ್ಮ ! ಜೀವನಕ್ಕಾಗಿ ಬೇರೆಯ ಕಡೆಗೆ ಹೋಗುವೆನೆಂದು ವಿನಯನು ಹೇಳಿ ಹೋದನಲ್ಲಾ ! ಅವನ ಮಾತೂ ಸುಳ್ಳಾಯಿತೇ! ಹಾ!" ಎಂದು ರೋದನ ಮಾಡಿದಳು.

ಲಲಿತಾ—ಇಲ್ಲ, ಅವನೆಂದಿಗೂ ಕೆಲಸಕ್ಕೆ ಹೋದವನಲ್ಲ ಅವನು ಹೇಳಿದುದೆಲ್ಲವೂ ಸುಳ್ಳು. ನಿಮ್ಮ ತಂದೆಯು ಕೆಲಸ ಮಾಡಿಸಿ ಕೊಡುವೆನೆಂಬ ಆಸೆಯನ್ನು ಹುಟ್ಟಿಸಿ, ಅವನನ್ನು ನಾಯಿ ನರಿ ಪಾಲು ಮಾಡುವುದಕ್ಕಾಗಿ ಎಲ್ಲಿಗೋ ಕಳುಹಿಸಿಬಿಟ್ಟನು. ಆವ ಮನುಷ್ಯನು ವಿನಯನನ್ನು ಕರೆದು ಕೊಂಡು ಹೋಗಿದ್ದನೋ, ಅವನೇ ನಿನ್ನೆಯ ದಿನ ಬಂದನು.

ಸರಳೆ—ಇದು ನಿನಗೆ ಗೊತ್ತಾದುದು ಹೇಗೆ?

ಲಲಿತಾ—ನಿನ್ನೆಯ ರಾತ್ರಿಯಲ್ಲಿ ನಮ್ಮ ತಂದೆಯು ನಮ್ಮ ತಾಯಿಯ ಸಂಗಡ ಮಾತನಾಡುತ್ತಿದ್ದನು ನಾನು ಮರೆಯಲ್ಲಿ ನಿಂತು ಎಲ್ಲವನ್ನೂ ಕೇಳಿದೆನು

ಸರಳೆ—ವಿನಯನನ್ನು ಎಲ್ಲಿಗೆ ಕರೆದುಕೊಂಡು ಹೋದರೆಂಬುದೇನಾದರೂ ಗೊತ್ತುಂಟೇ?

ಲಲಿತಾ—ಅದನ್ನು ತಾಯಿಯೂ ಕೇಳಲಿಲ್ಲ, ತಂದೆಯೂ ಹೇಳಲಿಲ್ಲ. ಅದನ್ನು ಕೇಳುವುದಕ್ಕೂ ಹೇಳುವುದಕ್ಕೂ ಆರಿಗೂ ಧೈರ್ಯವುಂಟಾಗಲಿಲ್ಲ. ವಿನಯನನ್ನು ಬಿಟ್ಟು ಬಂದ ಸ್ಥಳವು ಮಟ್ಟಿಗ ಅತಿಭಯಂಕರವೆಂಬುದು ಗೊತ್ತಾದುದು

ಸರಳೆ—ನಮ್ಮ ತಂದೆಯು ವಿನಯನನ್ನು ಓಡಿಸುವುದಕ್ಕೆ ಕಾರಣ ವೇನಿರಬಹುದು? ಗೊತ್ತಿದ್ದರೆ [illegible]

ಲಲಿತಾ—ವಿನಯನು ಇಲ್ಲಿದ್ದರೆ, ನಿಮ್ಮ ತಂದೆಯು ನಿಶ್ಚಯಿಸಿರುವ ವರನಿಗೆ ನಿನ್ನನ್ನು ಕೊಟ್ಟು ಮದುವೆಯಾಗುವುದು ಅಸಾಧ್ಯವೆಂದು ತಿಳಿದು ಹೀಗೆ ನಡೆಯಿಸಿರುವರು

'ಹಾ, ದೈವವೇ! ನನ್ನ ತಂದೆಯು ಇಷ್ಟು ವಿದ್ಯಾವಂತನಾಗಿದ್ದರೂ ಇಷ್ಟರ ಮಟ್ಟಿಗೆ ತಿಳಿಯಲಿಲ್ಲವೇ! ಪ್ರಿಯನಾದ ವಸ್ತುವು ಚರ್ಮಚಕ್ಷುವಿಗೆ ಮರೆಯಾದ ಮಾತ್ರವೇ ಹೃದಯದಿಂದ ಮರೆಯಾಗುವದೇ! ಭಾರತ ರಮಣಿಯು ಮನಸ್ಸಿನಿಂದ ಒಬ್ಬನನ್ನು ವರಿಸಿದ ಬಳಿಕ, ಜನರ ಬೆದರಿಕೆಗೋಸುಗವಾಗಿಯೇ ಮತ್ತೊಬ್ಬನನ್ನು ವರಿಸಬಲ್ಲಳೇ! ಹೆಂಗುಸಿನ ಹೃದಯವನ್ನರಿಯದ ಗಂಡಸರ ವಿಚಾರಹೀನವಾದ ಕೆಲಸವನ್ನು ನೋಡು ಸಖಿ, ಲಲಿತಾಂಗಿ! ಈ ಸಂಗತಿಯನ್ನು ಮತ್ತಾರಿಗೂ ತಿಳಿಸಬೇಡ, ಕಂಡೆಯಾ? ಈಗ ನೀನು ಹೊರಡು ನಾನು ನಿನ್ನನ್ನು ಮತ್ತೊಂದು ವೇಳೆ ನೋಡಬೇಕಾದೀತು. ಈಗ ಹೊತ್ತಾದುದರಿಂದ ನಾನೂ ತೆರಳುವೆನು," ಎಂದು ಹೇಳಿ ಸರಳಕುಮಾರಿಯು ಅಪರಿಮಿತವಾದ ವ್ಯಸನದ ಭಾರದಿಂದ ಕುಗ್ಗಿದವಳಾಗಿ ಮನೆಯೊಳಗೆ ಪ್ರವೇಶ ಮಾಡಿದಳು. ಲಲಿತಾಂಗಿಯೂ ವ್ಯಸನದಿಂದ ತಲೆವಾಗಿದವಳಾಗಿ ತನ್ನ ಮನೆಯ ಕಡೆಗೆ ತೆರಳಿದಳು.



# ಎಂಟನೆಯ ಲಂಬಕ.

## ನೂತನ ಪ್ರೇಮಪತ್ರ.

ಸರಳಕುಮಾರಿಯು ಮನೆಯೊಳಗೆ ಪ್ರವೇಶಮಾಡಿ ನೋಡಿದಳು. ಅಲ್ಲಿ ಶೇಷವಾದ ಗದ್ದಲವಾಗುತಿದ್ದುದರಿಂದ, ಸರಳೆಯು ಆತಾಣಕ್ಕೆ ತಂದಳು.

ಸೀತಾ, ಭಾಮಾ, ಪದ್ಮಾ, ರಮಾ, ದುರ್ಗಾ, ಅಬಲಾ, ಕಮಲಾ, ಮಲಾ, ಯಶೋದಾ, ಪ್ರಮೋದಾ, ಜ್ಞಾನದಾ, ಸುಖದಾ, ಮೋಕ್ಷದಾ, ರ್ವತೀ, ವಿಲಾಸಿನೀ, ವಿಲಾಸವತೀ, ಕಾದಂಬಿನೀ, ಮನೋಮೋಹಿನೀ, ನಕಾಮಿನೀ, ಮಂದಾಕಿನೀ, ಗಿರಿಬಾಲಾ, 'ಸುರಬಾಲಾ, ಶೈಲಬಾಲಾ,' ನಗ ಾಲಾ, ವ್ರಜಬಾಲಾ, ಕಿರಣಕುಮಾರಿ, ಮದನಕುಮಾರಿ, ಶರತ್ಕುಮಾರಿ, ೀಮಂತಕುಮಾರಿ, ಪ್ರಮೋದಕುಮಾರಿ, ಸುಕುಮಾರಿ, ವಸಂತಕುಮಾರಿ, ಮಕ್ಕ, ಭೀಮಕ್ಕ, ಮಲ್ಲಕ್ಕ, ಬೀರಕ್ಕ, ಹರಿಯ ತಾಯಿ, ರಾಮನ ಅತ್ತೆ, ್ಷ್ಣನ ಅಕ್ಕ, ಗೋವಿಂದನ ಸೊಸ, ಇನ್ನೂ ಆರಾರೋ ಒಬ್ಬ ಮುದು ಯ ಸುತ್ತಲೂ ಕುಳಿತುಕೊಂಡು ಗದ್ದಲವೆಬ್ಬಿಸಿದ್ದರು ಕೆಲವರು ಕಿಲಕಿಲನೆ ಗುತ್ತಿದ್ದರು ಮುದುಕಿಯು ಬಹುಜನರ ಪರಿಹಾಸವನ್ನು ತಡೆಯಲಾರದೆ ಳುವುದಕ್ಕೆ ಮೊದಲು ಮಾಡಿದ್ದಳು ಇದನ್ನು ಕಂಡಕೂಡಲೆ, ಸರಳ ುಮಾರಿಯ ಮನಸ್ಸು ಕರಗಿ ಕರಗಿ ನೀರಾಗಿ ಹರಿದುಹೋಯಿತು. ಆರು ರರ ದುಃಖದಲ್ಲಿ ದುಃಖಪಡುವರೋ, ಆರು ಇತರರ ಕಣ್ಣುಗಳಲ್ಲಿ ನೀರು ಂಬಿದುದನ್ನು ನೋಡಿ ಸಹಿಸಲಾರದೆ ತಾವೇ ಅತ್ತುಬಿಡುವರೋ, ಅಂತಹ ರೇ ಸಹಜವಾಗಿಯೂ, ತಮ್ಮಲ್ಲಿ ಎಷ್ಟು ವ್ಯಸನವಿದ್ದರೂ, ಇತರರ ವ್ಯಸನ ನ್ನು ಹೋಗಲಾಡಿಸುವುದರಲ್ಲಿ ಸಮರ್ಥರು ಸರಳೆಯು ಮುದುಕಿಯ ರವಸ್ಥೆಯನ್ನು ನೋಡಿ ಕೋಪದಿಂದ,—"ಏನರೇ! ನೀವೆಲ್ಲರೂ ಸೇರಿ ಂಡು ಅಲ್ಲೀನ ಮಾಡುವಿರಿ? ಮುದುಕಿಗೆ ನೀವು ಕಿರುಕುಳವನ್ನುಂಟು ಾಡುವುದಕ್ಕೆ, ಆಕೆ ನಿಮಗ ಮಾಡಿದುದು ತಾನೇ ಏನು? ಮುದುಕಿಯನ್ನು ಂಡು ನೀವು ಹಾಸ್ಯಮಾಡುವುದಾದರೆ, ನೀವು ಮುದುಕಿಯರೇ ಆಗುವುದಿ ವೆ, ಹೇಗೆ? ಮನೆಗೆ ಬಂದವರನ್ನು ಹೀಗ ಹೀಯಾಳಿಸುವುದು ನಿಮಗೆ ರವಲ್ಲ," ಎಂದು ಹೇಳಿದುದನ್ನು ಕೇಳಿ, ಮುದುಕಿಯು,—"ನೋಡಮ್ಮ,

ನೀನೇ ನೋಡು. ನಾನು ಮುದುಕಿ, ನನ್ನದೇನು ತಪ್ಪಿರುವುದು? ಕಾರಣವಿಲ್ಲದೆಯೇ ಈ ಬಾಲೆಯರು ನನಗೆ ಸಂಕಟವನ್ನುಂಟುಮಾಡುತ್ತಿರುವರು," ಎಂದು ನುಡಿದಳು.

ವಿಲಾಸಿನೀ—(ಎಲ್ಲರನ್ನೂ ನೋಡಿ) ನಿಮಗೇನರೇ ಗೊತ್ತು! ಸರಳೆಗೂ ಒಳಗೆ ಇಷ್ಟವೇ ಉಂಟು. ಇಷ್ಟವಲ್ಲದೇ ಏನು?

ಭಾಮಾ—ಹಾಗೆ ಹೇಳುವುದಕ್ಕಾಗಲಾರದು. ಇಷ್ಟವಿದ್ದಿದ್ದರೆ, ಹೊಸದಾಗಿ ನಿಶ್ಚಯಿಸಿರುವ ವರನನ್ನೇ ಮದುವೆಯಾಗಿ ಬಿಡುತ್ತಿದ್ದಳು.

ಗಿರಿಬಾಲಾ—ಯಜಮಾನರು ನಿಶ್ಚಯಿಸಿಕೊಂಡು ಬಂದಿರುವ ವರನನ್ನೇ ಮದುವೆಯಾಗುವುದು ಲೇಸು. ವಿನಯನು ದಟ್ಟ ದರಿದ್ರನು. ಈಗಣ ವರನಾದರೋ ಆಗರ್ಭಶ್ರೀಮಂತನು. ಹಣವಿದ್ದರೇ ಎಲ್ಲವೂ ಇದ್ದಂತೆಯೇ.

ಯಶೋದಾ—ಮನಬಂದಂತೆ ಮಾತನಾಡಬೇಡಿರೇ. ಸ್ತ್ರೀಪುರುಷರಿಗೆ ಎಲ್ಲಿ ಪರಸ್ಪರ ಪ್ರೀತಿಯಿರುವುದೋ, ಅಲ್ಲಿ ಸಂಬಂಧ ಬಳೆಯಿಸುವುದೇ ಮೇಲು. ಹಣಕ್ಕಾಗಿ ಪ್ರೀತಿ ಹುಟ್ಟದು. ಪ್ರೀತಿಯಿದ್ದಲ್ಲಿ ಬಡವರಾದರೂ ಗಿಡುಗಳ ಬುಡದಲ್ಲಿಯಾದರೂ ವಾಸಮಾಡಿಕೊಂಡು ಸ್ವರ್ಗ ಸುಖವನ್ನೇ ಅನುಭವಿಸುವರು. ನಮ್ಮ ಸರಳೆಯು ಅವನ್ನು ಮದುವೆಯಾದರೆ ಸುಖವುಂಟೆಂದು ತಿಳಿದಿರುವಳೋ, ಅವನಿಂದಲೇ ಅವಳಿಗೆ ಶಾಶ್ವತವಾದ ಸುಖವುಂಟು. ಆರುತಾನೇ ತಮ್ಮತಮ್ಮ ಸುಖದ ಬಾಯಿಗೆ ಮಣ್ಣನ್ನು ತೂರಿಕೊಳ್ಳುವರು?

ರಾಮಕ್ಕ—ಚನ್ನಾಗಿ ಹೇಳಿದೆ! ಇದಕ್ಕಾಗಿಯೇ ಇಷ್ಟೊಂದು ಪ್ರಯತ್ನ! ಒಡವೆಯ ಪೆಟ್ಟಿಗೆ, ಸೀರೆಯ ಪೆಟ್ಟಿಗೆ ಮುಂದೆ ಬಂದರೆ ಕೆಲಸವೆಲ್ಲವೂ ಆದಂತೆಯೇ ಸರಿ. ಸರಳೆಯೂ ನಮ್ಮಂತೆಯೇ ಹೆಂಗುಸಲ್ಲವೇನು ?

ಈ ರೀತಿಯಲ್ಲಿ ಹೆಂಗುಸರ ವಾಕ್ಪ್ರವಾಹವು ನಿರರ್ಗಳವಾದ ಗಂಗಾಪ್ರವಾಹದಂತೆ ಹರಿದುಹೋಯಿತು. ಸರಳಕುಮಾರಿಯು ಈ ಪ್ರವಾಹದ ಅಲೆಗಳ ಮಧ್ಯದಲ್ಲಿ ಸಿಕ್ಕಿಬಿದ್ದು ಭ್ರಾಂತೆಯಾಗಿ ಎಲ್ಲಿಯೋ ತೇಲಿಕೊಂಡು ಹೊರಟೇಹೋದಳು.

ಕೆಲವು ಸಖಿಯರು—ಅವರ ಹೆಸರು ನಮಗೆ ತಿಳಿಯದು,—ಸರಳಕುಮಾರಿಯನ್ನು ಹಿಡಿದು ತಂದು ನಿಲ್ಲಿಸಿದರು. ಸರಳೆಯೂ ಮರದ ಬೊಂಬೆಯಂತೆ ಬೆರಗಾಗಿ ನಿಂತುಕೊಂಡಳು. ಈ ಸಮಯಕ್ಕೆ ಸರಿಯಾಗಿ ಅಚ್ಯುತಾನಂತ ಗೋವಿಂದ ಮಹಾಶಯನು ಅಲ್ಲಿಗೆ ಬಂದನು. ಹೆಂಗುಸ

ರೆಲ್ಲರೂ ತಮ್ಮ ತಮ್ಮ ಸೆರಗುಗಳನ್ನು ಸರಿಮಾಡಿಕೊಂಡು ಸಡಗರದಿಂದ ಎದ್ದುನಿಂತರು. ಅಚ್ಯುತಮಹಾಶಯನು ಇವರನ್ನು ಕುರಿತು,—"ಏನು ನಿಶ್ಚಯವಾಯಿತು?" ಎಂದು ಕೇಳಲಾಗಿ, ಹೆಂಗುಸರೆಲ್ಲರೂ ಒಂದೇ ಸ್ವರದಿಂದ, "ನಿಶ್ಚಯವೇನು? ಸರಳೆಗಾದರೋ ವಿನಯಕುಮಾರನನ್ನು ಹೊರತು ಮತ್ತೊಬ್ಬನನ್ನು ಮದುವೆಯಾಗುವುದಿಲ್ಲವೆಂಬುದೊಂದೇ ಹರವಿರುವುದು." ಎಂದು ನುಡಿದರು.

ಅಚ್ಯುತ—ಅವಳಿಗೇಕೆ ಇಷ್ಟೊಂದು ಹರ? ಅವಳಿನ್ನೂ ಹುಡುಗಿ. ಮದುವೆಯೆಂದರೆ ಅವಳಿಗೇನು ಗೊತ್ತು? ಜನರು ಏತಕ್ಕೋಸ್ಕರ ಮದುವೆಯಾಗುವರೆಂಬುದನ್ನು ತಿಳಿಯುವಷ್ಟು ವಯಸ್ಸು ಅವಳಿಗಿನ್ನೂ ಬಂದಿಲ್ಲ. ಇದರ ಮೇಲೆ, ನಮ್ಮ ಜಾನಕೀನಾಥನು ಇಷ್ಟೆಲ್ಲಾ ಅನರ್ಥಕ್ಕೆ ಕಾರಣವೂ ಅಹುದು. ವೃದ್ಧಾಚಾರವು ವೃದ್ಧರಿಗಲ್ಲದೆ ನವೀನ ಸ್ತ್ರೀಪುರುಷರಿಗಲ್ಲವೆಂದು ಅವನು ಅಡಿಗಡಿಗೆ ವಾದಿಸುತ್ತಿರುವನು "ಕಾಲಾನುಸಾರವಾಗಿ ಜನರು ಮಾರ್ಪಡುತ್ತಿರುವಲ್ಲಿ, ಆಚಾರ ವ್ಯವಹಾರಗಳೂ ಮಾರ್ಪಾಡಾಗುತ್ತಿರಬೇಕು. ಇಲ್ಲವಾದರೆ, ಜನರು ಅನರ್ಥಪರಂಪರೆಗೆ ಗುರಿಯಾಗಬೇಕು," ಎಂದು ಜಾನಕೀನಾಥನು ತನ್ನ ತಾಯಿಯೊಡನ ಸೂರುಸಲ ಹೇಳಿರುವನು "ಓರಿಯಕ್ಕನ ಚಾಳಿ ಮನೆಗೆಲ್ಲಾ" ಎನ್ನುವಂತೆ ಸರಳೆಯೂ ಅವನಂತೆಯೇ ಆಗಿಬಿಟ್ಟಿರುವಳು. ಜಾನಕೀನಾಥನಾದರೋ ಆಧುನಿಕ ವಿದ್ಯೆಯನ್ನು ಕಲಿತು, ಪೂರ್ವಿಕರನ್ನೂ ಪೂರ್ವಾಚಾರಗಳನ್ನೂ ಧಿಕ್ಕರಿಸಿ ಸಮಯೋಚಿತವಾಗಿ ಆತ್ಮಸುಖವನ್ನು ಬಯಸುವಂತಹ ಅಜ್ಞಾನಿಗಳಲ್ಲಿ ಒಬ್ಬನಾಗಿರುವನು.

ಒಬ್ಬಳು—ಏನು! ಅಜ್ಞಾನಿಯೇ ?

ಅಚ್ಯುತ—ಅಲ್ಲದೇ ಏನು ? ಅಜ್ಞಾನಿಗಳೆಲ್ಲರೂ ಇವನಂತೆಯೇ ವರ್ತಿಸುವರು.

ಮತ್ತೊಬ್ಬಳು—ಹಾಗಾದರೆ ಜಾನಕೀನಾಥನು ಸಿಕ್ಕಿದ ಕಡೆಗಳಲ್ಲಿ ಊಟಮಾಡುವನೇ ?

ಅಚ್ಯುತ—ಇನ್ನೂ ಅಷ್ಟಕ್ಕೆ ಬಂದಿಲ್ಲ, ಆದರೆ, ಊಟಮಾಡುವುದರಿಂದ ಹಾನಿಯೇನೂ ಇಲ್ಲವೆಂದು ಅವನು ದೃಢವಾಗಿಯೂ ನಂಬಿರುವನು.

ಇನ್ನೊಬ್ಬಳು—ಇಷ್ಟು ನಂಬತಕ್ಕವನು ಗುಟ್ಟಿನಲ್ಲಿ ಊಟಮಾಡಿದರೂ ಮಾಡಬಹುದು.

ಅಚ್ಯುತ—ಇಲ್ಲ, ನಿಜವಾಗಿಯೂ ಇಲ್ಲ. ನಾನು ಅದನ್ನು ಪರೀಕ್ಷೆ ಮಾಡಿಯೂ ನೋಡಿರುವೆನು. ಅಲ್ಲದೆಯೂ ನನಗೆ ಬೇಕಾದವರಿಂದ ಪರೀಕ್ಷೆ ಯನ್ನೂ ಮಾಡಿಸಿರುವೆನು. ಜಾನಕೀನಾಥನು ಇನ್ನೂ ಅಷ್ಟು ಹೀನದಶೆಗೆ ಬಂದಂತೆ ಕಂಡುಬರುವುದಿಲ್ಲ. ಒಂದು ದಿನ ಪಕ್ಕದ ಮನೆಯಲ್ಲಿರುವ ಖಗೇಂದ್ರನು ಜಾನಕೀನಾಥನನ್ನು ತನ್ನ ಮಗನಾದ ಧೀರೆಂದ್ರನೊಡನೆ ಭೋಜನಮಾಡಲು ಪ್ರಾರ್ಥಿಸಿದನು. ಅದಕ್ಕೆ ಜಾನಕೀನಾಥನು,—"ಮಹಾ ಶಯ ! ನಿಮ್ಮ ಮನೆಯಲ್ಲಿ ಭೋಜನಮಾಡುವುದು ಅಧರ್ಮವು. ಹಾಗೆ ನಾನು ಮಾಡುವುದಾದರೆ ಜಾತಿಯು ಹೋಗುವುದು. ನಾನು ಹೀಗೆ ಹೇಳು ವುದಕ್ಕಾಗಿ ನೀನು ಕೋಪಗೊಳ್ಳಬಾರದು. ಅವರವರ ಜಾತಿಯು ಅವರ ವರಿಗೆ ದೊಡ್ಡದು. ನನ್ನನ್ನು ಮಟ್ಟಿಗೆ ಈ ವಿಷಯದಲ್ಲಿ ನಿರ್ಬಂಧಪಡಿಸ ಬಾರದು," ಎಂದು ಹೇಳಿದುದನ್ನು ಕೇಳಿ, ಖಗೇಂದ್ರನು ಅಷ್ಟಕ್ಕೆ ಬಿಡದೆ,- "ಮಹಾಶಯ ! ಊಟಕ್ಕೂ ಉಪಚಾರಕ್ಕೂ ಧರ್ಮಕ್ಕೂ ಆವ ವಿಧವಾದ ಸಂಬಂಧವೂ ಇರುವುದಿಲ್ಲ" ಎಂದು ನೀನು ಆಗಿಂದಾಗ ಹೇಳಿದುದನ್ನು ನಾನು ಕೇಳಿರುವೆನು. ನೀನು ನಮ್ಮ ಮನೆಯಲ್ಲಿ ಊಟಮಾಡಿದ ಮಾತ್ರಕ್ಕೇ, ನಿನ್ನ ಜಾತಿ ಹೋಗುವ ಬಗೆ ಎಂತಹುದು ? ಎಂದು ಕೇಳಿದನು. ಹೀಗೆಯೇ ಅವ ರಿಬ್ಬರಿಗೂ ಬಲುಹೊತ್ತು ಮಾತುಕತೆಗಳು ನಡೆದುವು. ಇದರಿಂದ ಜಾನಕೀ ನಾಥನು ಕಂಡಕಂಡವರ ಮನೆಯಲ್ಲಿ ಭೋಜನಾದಿಗಳನ್ನು ಮಾಡುವುದಿಲ್ಲ ವೆಂದು ನನಗೆ ಚೆನ್ನಾಗಿಯೂ ತಿಳಿದು ಬಂದಿತು.

ಈ ಮಾತು ಹಾಗಿರಲಿ. ಪ್ರಕೃತದಲ್ಲಿ ನಮಗೆ ಮುಂದೆ ಬಿಯ್ಯಗರಾಗ ತಕ್ಕವರ ಮನೆಯಿಂದ ಸಂದೇಶವೇನು ಬಂದಿರುವುದು ? ಈ ಕೈ ಪೆಟ್ಟಿಗೆ ಯನ್ನು ತೆರೆಯಿರಿ, ನೋಡೋಣ

ಹೆಂಗುಸರು ದಡಬಡನೆ ಪೆಟ್ಟಿಗೆಯ ಮುಚ್ಚಳವನ್ನು ತೆರೆದರು. ಅದ ರಲ್ಲಿ ಹತ್ತೆಂಟುಸಾವಿರ ರೂಪಾಯಿ ಬಾಳುವ ನಗನಟ್ಟುಗಳೂ, ನಾಲ್ಕಾರು ಸಾವಿರ ರೂಪಾಯಿಗಳು ಬಾಳುವ ಉಡುಗೆತೊಡುಗೆಗಳೂ, ಇನ್ನೂ ಏನೇ ನೋ ವಸ್ತುಗಳೂ ಇದ್ದುವು. ಅಚ್ಯುತಾನಂತನು ಇವೆಲ್ಲವನ್ನೂ ನೋಡಿ ಬಲು ಸಂತೋಷಗೊಂಡು, ಮುದುಕಿಯನ್ನು ನೋಡಿ,—"ನಮ್ಮ ಬಿಯ್ಯ ಗರು ಪತ್ರವನ್ನೇನಾದರೂ ಕಳುಹಿರುವರೇ ?" ಎಂದು ಪ್ರಶ್ನೆಮಾಡಲು, ಮುದುಕಿಯು ಎರಡು ಕಾಗದಗಳನ್ನೂ ಒಂದು ಸುಂದರವಾದ ಪುಸ್ತಕ

ವನ್ನೂ ಯಜಮಾನರ ಕೈಗೆ ಕೊಟ್ಟಳು. ಅದರಲ್ಲಿ ಒಂದು ಕಾಗದವು ಸರಳೆಯ ಹೆಸರಿಗೆ ಬರೆದಿದ್ದಿತು. ಅದನ್ನೂ ಪುಸ್ತಕವನ್ನೂ ಅಚ್ಯುತನು ಸರಳೆಯ ಕೈಗೆ ಕೊಟ್ಟು, ತನಗೆ ಬರೆದಿದ್ದ ಕಾಗದವನ್ನು ತೆಗೆದುಕೊಂಡು ತನ್ನ ಕಿರುಮನೆಯ ಕಡೆಗೆ ಹೊರಟು ಹೋದನು. ಆಕೂಡಲೆ ಸಖಿಯರು ಸರಳೆಯನ್ನು ಮುತ್ತಿಕೊಂಡು,—"ಸರಳೆ! ಎಲ್ಲಿ, ನೋಡೋಣ. ನಿನ್ನ ಗಂಡನು ನಿನಗೆ ಏನ ಬರೆದಿರುವನು," ಎಂದು ಕೇಳಿದೊಡನೆಯೇ, ಸರಳೆಯು ಆ ಕಾಗದವನ್ನೂ ಆ ಪುಸ್ತಕವನ್ನೂ ಸಖಿಯರ ಕೈಗೆ ಕೊಟ್ಟುಬಿಟ್ಟಳು. ಸಖಿಯೊಬ್ಬಳು ಆ ಕಾಗದವನ್ನು ಬಿಚ್ಚಿ ಓದಿದಳು. ಅದರಲ್ಲಿ ಈ ರೀತಿಯಾಗಿ ಬರೆದಿದ್ದಿತು.

## ನೂತನ ಪ್ರೇಮ ಪತ್ರ.

ನಂದನಗ್ರಾಮ.

ಹೃದಯೇಶ್ವರಿ! ದಾಸಾನುದಾಸನಾದ ರಾಮನಾರಾಯಣನು ಮಾಡುವ ಸಾಷ್ಟಾಂಗ ನಮಸ್ಕಾರಗಳು. ನನಗೆ ನಿನ್ನನ್ನು ಕೊಟ್ಟು ಮದುವೆಯಾಗುವುದೆಂದು ಕೇಳಿದ ದಿನ ಮೊದಲ್ಗೊಂಡು, ನಾನು ನಿನ್ನನ್ನು ಚೆನ್ನಾಗಿಯೂ ಪ್ರೀತಿಸುತ್ತಿರುವೆನು. ಅದರಂತೆಯೇ ನೀನೂ ನನ್ನನ್ನು ಪ್ರೀತಿಸುತ್ತಿರಬೇಕು ನೀನು ವಿದ್ಯಾವತಿಯೆಂದು ಕೇಳಿ, ಒಂದು ಸುಂದರವಾದ ಪುಸ್ತಕವನ್ನು ಕಳುಹಿರುವೆನು. ಅದನ್ನುನೀನು ಸಾಂಗವಾಗಿ ಓದು. ಶೀಘ್ರದಲ್ಲಿಯೇ ನಮ್ಮಿಬ್ಬರಿಗೂ ವಿವಾಹವಾಗುವುದು ಬಳಿಕ ನಾವು ಮುಂದೆ ಮಾಡಬೇಕಾದ ಕೆಲಸವೇನೆಂಬುದನ್ನು ಸಾವಧಾನದಿಂದ ಚಿಂತಿಸುವ. ನಮ್ಮ ತಂದೆಯೂ ನಿನ್ನ ತಂದೆಯೂ ಹಣಗಾರರಾದುದರಿಂದ ಮುಂದೆ ನಮಗೆ ಆವ ತೊಂದರೆಯೂ ಇರಲಾರದು. ಇಷ್ಟರಲ್ಲಿಯೇ ನಮ್ಮಿಬ್ಬರಿಗೂ ಪ್ರಥಮಸಂದರ್ಶನದ ಲಾಭವಾದೀತು.

ಇತಿ, ರಾಮನಾರಾಯಣಮಹಾಶಯನ

ಅನಂತಾನಂತ ನಮಸ್ಕಾರಗಳು.

ಸಖಿಯರು ಈ ಕಾಗದದ ಒಕ್ಕಣೆಯನ್ನು ಕೇಳಿ ಕಂಬನಿಗರೆಯುತ್ತಾ, "ಹತವಿಧಿಯೆ! ನಿನ್ನ ಘಟನೆಯಾದರೋ ಎಂತಹುದು? ಸುಲಲಿತವಾದ ಮುತ್ತಿನ ಮಾಲಿಕಯನ್ನು ಕೋತಿಯ ಕೈಗೆ ಸಿಕ್ಕುವಂತೆ ಮಾಡಬಹುದೇ? ನಯನಾನಂದಕರವಾದ ಸುವಾಸನೆಯುಳ್ಳ ಕುಸುಮದಲ್ಲಿ ಕೀಟಕ್ಕೆ ಸ್ಥಾನ

ವನ್ನು ಕೊಟ್ಟು, ಹೂವಿನ ಸೊಬಗನ್ನೇ ಹಾಳುಮಾಡುವ ಕೆಲಸವನ್ನು ಅದೇ ತಕ್ಕೆ ಕೈಕೊಂಡಿರುವೆ? ಅನೇಕ ಗುಣಗಳ ಮಧ್ಯದಲ್ಲಿ ಬಲವತ್ತರವಾದ ದೋಷವನ್ನು ಏರ್ಪಡಿಸಿ ಜನರನ್ನು ತೊಂದರೆಗೀಡುಮಾಡುವುದು ನಿನಗೆ ಹಿತವಾಗಿ ಕಂಡುಬರುವುದಾದರೆ, ಜಗವೆಲ್ಲವನ್ನೂ ಏಕಾಪೋಶನ ಮಾಡಿ ನೀನು ಸುಖಿಯಾಗಿರಬಾರದೇತಕ್ಕೆ?" ಎಂದು ಬಗೆಬಗೆಯಾಗಿ ಹಂಬಲಿಸುತ್ತಾ, ನೂತನ ಪ್ರೇಮಪತ್ರವನ್ನು ಮತ್ತಾರಿಗೂ ತೋರಿಸದೆ ತಮ್ಮಲ್ಲಿಯೇ ಇಟ್ಟು ಕೊಂಡು ಬಂದ ದಾರಿವಿಡಿದು ಹೊರಟುಹೋದರು. ಸರೋಜಿನಿಯು ನಾದಿನಿಯನ್ನು ಆ ಸ್ಥಳದಿಂದ ಬೇರೊಂದೆಡೆಗೆ ಕರೆದುಕೊಂಡು ಹೊರಟಳು. ಸರಳ ಕುಮಾರಿಯು ಆವ ಮಾತನ್ನೂ ಆಡದೆ ಅವಳ ಹಿಂದೆಹಿಂದೆಯೇ ತೆರಳಿದಳು.



# ಒಂಬತ್ತನೆಯ ಲಂಬಕ.



## ಹೊ ಸ ನೋ ಟ.

ಆಷಾಢಮಾಸ. ಮಧ್ಯಾಹ್ನದಲ್ಲಿ ಎರಡು ಗಂಟೆಯ ಸಮಯವಾಗಿದ್ದಿತು ಅಷ್ಟು ಹೊತ್ತಾಗಿದ್ದರೂ ಸೂರ್ಯನ ಕಿರಣವು ಕೊಂಚವೂ ಸಂತಾಪಕಾರಿಯಾಗಿರಲಿಲ್ಲ. ನೋಡುತ್ತಿದ್ದಹಾಗೆಯೇ ನೀಲಾಕಾಶಮಂಡಲದಲ್ಲಿ ಮೇಘವು ಆವರಿಸಿಕೊಂಡು ಬಂದು ಒಂದೆರಡು ಹನಿಗಳೂ ಬಿದ್ದುವು.

ಕಿಂಶುಕಾಟವಿಯ ಪ್ರಾಂತಪ್ರದೇಶದಲ್ಲಿ ಕಾಲಕೂಟವೆಂಬುದೊಂದು ಸಣ್ಣ ಗ್ರಾಮವಿರುವುದು. ಈ ಗ್ರಾಮವು ಅಸಭ್ಯಜಾತಿಯವರಿಗೆ ಆವಾಸ ಭೂಮಿಯು. ಈ ಗ್ರಾಮದ ಪಶ್ಚಿಮ ಭಾಗದಲ್ಲಿ ಪರಸ್ಥಳದಿಂದ ಬಂದ ಸರ್ವಪ್ರಹರಣಾಯುಧನೆಂಬುವನು ಸರಕಾರದಿಂದ ಶಾಂತಿರಕ್ಷಣೆಯ ಕೆಲಸದಲ್ಲಿ ನಿಯುಕ್ತನಾಗಿ ವಾಸಮಾಡಿಕೊಂಡಿರುತ್ತಿದ್ದನು. ಈತನ ಸಂಸಾರದಲ್ಲಿ ಹೆಂಡತಿ, ಮಗಳು, ಅಡುಗೆಯ ಹೆಂಗುಸು, ಒಬ್ಬ ಸೇವಕ, ಒಬ್ಬ ದಾಸಿ, ಇಷ್ಟುಜನ ಹೊರತಾಗಿ ಮತ್ತಾರೂ ಇರಲಿಲ್ಲ. ಸರ್ವಪ್ರಹರಣಾಯುಧನು ವಾಸವಾಗಿದ್ದುದು ಒಂದು ದೊಡ್ಡ ತೊಟ್ಟಿಯ ಮನೆ, ಮನೆಯ ಸುತ್ತಲೂ ಎತ್ತರವಾದ ಪೌಳಿಯ ಗೋಡೆ. ಅಂಗಳದಲ್ಲಿ ಬೇರೆಬೇರೆ ಜಾತಿಯ ಹತ್ತಾರು

ಮರಗಳಿದ್ದುವು. ಮನೆಯು ನೋಡುವುದಕ್ಕೆ ಅಷ್ಟು ಸುಂದರವಲ್ಲದಿದ್ದರೂ ಪರಿಷ್ಕಾರವಾಗಿದ್ದಿತು.

"ತೊಟಕು, ತೊಟಕು, ತೊಟ್, ತೊಟ್" ಎಂದು ಮಳೆಯ ಹನಿಯು ಬೀಳುತ್ತಿರುವುದು. ಭೋರ್ಗರೆದು ಗಾಳಿಯು ಬೀಸುತ್ತಿರುವುದು. ಗಿಡುಗಳ ಮೇಲೆ ಪಕ್ಷಿಗಳು ಕುಳಿತುಕೊಂಡು ದನಿಗಯ್ಯದೆ ತಂತಮ್ಮ ರೆಕ್ಕೆಗಳನ್ನು ಪಟಪಟನೆ ಕೊಡಹಿಕೊಳ್ಳುತ್ತಿರುವುವು ನೀರು ನಿಂತ ಸ್ಥಳಗಳಲ್ಲೆಲ್ಲಾ ಕಪ್ಪೆಗಳು "ವಟ್ರ, ವಟ್ರ" ಎಂದು ತಡೆಬಡೆಯಿಲ್ಲದೆ ಕೂಗಿಯೇ ಕೂಗುತ್ತಿರುವುವು.

ಈ ಸಮಯದಲ್ಲಿ ಯುವಕನೊಬ್ಬನು ಮಳೆಯಲ್ಲಿ ನನೆದುಕೊಂಡು ಮನೆಗೆ ಬಂದು, ದಾಸಿಯನ್ನು ಕುರಿತು,—"ನನ್ನ ಬಟ್ಟೆಬರೆಗಳೆಲ್ಲಿ?" ಎಂದು ಕೇಳಿದನು. ಅದಕ್ಕೆ ಉತ್ತರವಾಗಿ ದಾಸಿಯು,—ಹಿಂದಣ ಕೋಣೆಯಲ್ಲಿರುವುದು," ಎಂದುಸುರಿದಳು ಯುವಕನು ಮನೆಯೊಳಗೆ ಪ್ರವೇಶಮಾಡಿ ಒದ್ದೆಯ ಬಟ್ಟೆಗಳನ್ನು ತೆಗೆದು ಹಾಕಿ ಒಣಗಿದ ಬಟ್ಟೆಯನ್ನುಟ್ಟು ಕೈಕಾಲುಗಳನ್ನು ತೊಳೆದುಕೊಂಡು ಬಂದು ಮಂಚದ ಮೇಲೆ ಮಲಗಿ ಹತ್ತಿರದಲ್ಲಿದ್ದ ಆವುದೋ ಒಂದು ಪುಸ್ತಕವನ್ನು ತೆರೆದು ಓದಲಾರಂಭಿಸಿದನು. ಯುವಕನು ಓದುತ್ತಿರುವಷ್ಟರಲ್ಲಿಯೇ ಹದಿನಾಲ್ಕು ವರ್ಷ ವಯಸ್ಸುಳ್ಳ ಸರ್ವಾಂಗ ಸುಂದರಿಯಾದ ಹುಡುಗಿಯೊಬ್ಬಳು ಒಂದು ತಟ್ಟೆಯಲ್ಲಿ ಶುಚಿರುಚಿಯಾದ ಫಲಾಹಾರದ ಸಾಮಗ್ರಿಗಳನ್ನಿಟ್ಟುಕೊಂಡು ಯುವಕನು ಮಲಗಿದ್ದ ಕೋಣೆಯೊಳಗೆ ಪ್ರವೇಶ ಮಾಡಿದಳು ಯುವಕನು ಇದನ್ನು ನೋಡಿ ದಡಬಡನೆ ಎದ್ದು,—ಎಲೌ, ಈ ಮಳೆಯಲ್ಲಿ ನೀನೇತಕೆ ಇಲ್ಲಿಗೆ ಬಂದೆ? ಎಂದು ಕೇಳಿದನು.

ಹುಡುಗಿಯು ಸರ್ವಪ್ರಹರಣಾಯುಧನ ಕನ್ನೆ, ಹೆಸರು ತರಳಕುಮಾರಿ. ತರಳಕುಮಾರಿಯ ದೇಹದಲ್ಲಿ ಮಾತ್ರವೇ ಅಲ್ಲದೆ, ಹೃದಯದಲ್ಲಿಯೂ ಯೌವನ ಸಂಚಾರವಾಗಿದ್ದಿತು. ವಕ್ಷವು ಸಮುನ್ನತವಾಗಿಯೂ, ಮಧ್ಯವು ಕ್ಷೀಣವಾಗಿಯೂ, ವದನವು ಹಾಸ್ಯಮಯವಾಗಿಯೂ, ಕಣ್ಣುಗಳು ಸರಸವಾಗಿಯೂ, ಅಂಗಾಂಗಗಳೆಲ್ಲವೂ ಗುಂಡುಗುಂಡಾಗಿಯೂ ಇದ್ದುವು. ಇದನ್ನು ನೋಡಿದ ಕೂಡಲೆ, ಬ್ರಹ್ಮನು ಅತಿಪ್ರಯಾಸದಿಂದ ಈ ಸುಂದರೀಮಣಿಯನ್ನು ಸೃಷ್ಟಿಮಾಡಿರಬೇಕೆಂದು ತಿಳಿಯುವುದಕ್ಕೆ ಸಾಕಾಗಿದ್ದಿತು.

ಆಕೆಯ ದೇಹಕಾಂತಿಯು ಪುಟಹಾಕಿದ ಚಿನ್ನದ ಕಾಂತಿಯನ್ನು ಹೋಲುತ್ತಿದ್ದಿತು. ದೇಹವಾದರೋ ಅತಿ ಸ್ಥೂಲವಲ್ಲದೆಯೂ, ಅತಿ ಕೃಶವಲ್ಲದೆಯೂ, ಅತ್ಯುಚ್ಚವೆನಿಸದೆಯೂ, ಅತಿ ನೀಚವಾಗಿರದೆಯೂ ಇದ್ದು, ರಸಿಕರ ಹೃದಯದಲ್ಲಿ ದರ್ಶನಮಾತ್ರದಿಂದಲೇ ಪ್ರೇಮತಂತ್ರಿಯು ಅಲುಗಾಡುವಂತೆ ಮಾಡುತ್ತಿದ್ದಿತು.

ಯುವತಿಯು ಯುವಕನ ಮಾತಿಗೆ ಪ್ರತ್ಯುತ್ತರವಾಗಿ,—" ನೀನು ತಿನ್ನಲೇ ಇಲ್ಲ," ಎಂದಳು.

ಯುವಕ—ನಾನು ತಿನ್ನುವುದಕ್ಕೆ ನಿನ್ನ ಪ್ರಯತ್ನವಾದರೂ ಏನು ?

ಯುವತಿ—ನನ್ನ ತಾಯಿಯು ಕಳುಹಿದಳು.

ಯುವಕ—ನಿನ್ನ ತಾಯಿ ಕಳುಹಿದ್ದರಿಂದಲೇ ನೀನು ಬಂದುದು; ಇಲ್ಲವಾದರೆ ನೀನು ಬರುತ್ತಲೇ ಇರಲಿಲ್ಲ.

ಯುವತಿ—ಹಾಗೆ ಹೇಳಿದವರಾರು ?

ಯುವಕ—ಕೆಲಸದಲ್ಲಿಯೇ ಗೊತ್ತಾಗುವುದು.

ಯುವತಿ—ನಾನೇ ಬರುತ್ತಿದ್ದೆ.

ಯುವಕ—ಕಾರಣವೇನಿದ್ದಿತು ?

ಯುವತಿ—ನೀನು ಕುಡಿಯುವುದಕ್ಕೆ ನೀರನ್ನು ತರುತ್ತಿದ್ದೆ.

ಯುವಕ—ನಾನು ಕುಡಿಯದಿದ್ದರೆ ನಿನಗೆ ಕಷ್ಟವಾಗುವುದೇನು ?

ಯುವತಿ—ಕಷ್ಟವಾಗದೇ ಏನು.

ಯುವಕ—ಅದೆಂತಹ ಕಷ್ಟವೋ ನಾನು ಕಾಣೆನು.

ಯುವತಿ—ಅದು ನನಗೂ ತಿಳಿಯದು.

ಯುವಕ—ನೀನು ನನ್ನನ್ನು ಪ್ರೀತಿಸುವೆಯ ?

ಯುವತಿ—ಹಾಗೆಂದರೇನು ?

ಯುವಕ—ಮುಂದಣ ತಿಂಗಳಲ್ಲಿ ನನಗೆ ನಿನ್ನನ್ನು ಕೊಟ್ಟು ಮದುವೆಯಾಗುವುದೆಂದು ನಿನ್ನ ತಾಯಿ ಹೇಳುವಳು. ಇದು ನಿನಗೂ ಸಮ್ಮತವೇ ?

ಯುವತಿ—ಇದ್ದರೂ ಇರಬಹುದು.

ಯುವಕ—ನಿನಗೆ ನಾಚುಗೆಯೇ ಇಲ್ಲ.

ಯುವತಿ—ಅದು ಹೇಗೆ ?

ಯುವಕ—ಹೆಂಗುಸರಿಗೆ ಮದುವೆಯೆಂದರೇನೇ ಆಗುವುದಿಲ್ಲ.

ಯುವತಿ—ಆದಿರಲಾರದು. ಹೆಂಗುಸರು ಹೊರಗೆ ತೋರ್ಪಡಿಸದಿದ್ದರೂ ಒಳಗೆ ಇಷ್ಟವಿಲ್ಲದೆ ಇರಲಾರರು. ನಾನು ಇತರರಿಗೆ ತೋರ್ಪಡಿಸದಿದ್ದರೂ, ನಿನ್ನಲ್ಲಿ ತೋರಿಸುವುದಕ್ಕೆ ಅಡ್ಡಿಯೇನೂ ಇರಲಾರದು. ನಿನ್ನ ಸಮೀಪದಲ್ಲಿ ನನಗೆ ಲಜ್ಜೆಯೇತರದು ?

ಯುವಕ—ಹಾಗಾದರೆ ನೀನು ನನ್ನೊಡನೆ ನನ್ನ ಮನೆಗೆ ಬರುವೆಯ?

ಯುವತಿ—ಬರಲಾಗುವುದಿಲ್ಲವೆಂದರೇನು ? ನಾನು ನಿನ್ನವಳಾದ ಮೇಲೆ, ನೀನು ಎಲ್ಲೆಲ್ಲಿಗೆ ಹೋದರೂ, ಅಲ್ಲಲ್ಲಿಗೆ ನಾನೂ ಬರುವೆನು. ನಾನು ನಿನ್ನನ್ನು ಬಲುವಾಗಿ ಪ್ರೀತಿಸುವೆನು.

ಯುವಕನು ಇದನ್ನು ಕೇಳಿ ಇಂತೆಂದನು:—ತರಳಕುಮಾರಿ ! ಇನ್ನು ಮೇಲೆ "ಬಲುವಾಗಿ ಪ್ರೀತಿಸುವೆನು" ಎಂಬ ಮಾತನ್ನು ಮಟ್ಟಿಗೆ ಆಡಬೇಡ, ಕಂಡೆಯ? ಪ್ರೀತಿಸುವೆನೆಂಬ ಮಾತು ನನ್ನನ್ನು ಅಸುಖಿಯನ್ನಾಗಿ ಮಾಡುವುದು. ನಾನು ಮೊದಲಲ್ಲಿ ಇಂತಹ ಪ್ರೇಮಪಾಶದಲ್ಲಿ ಬಿದ್ದು ಪಡಬಾರದ ಸಂಕಟವನ್ನನುಭವಿಸಿ ಸಾಕಾಗಿ ಬಂದಿರುವೆನು. ಶಿವಶಿವಾ ! ಆ ಘಟನೆಯು ಇನ್ನೂ ಮರೆತಿಲ್ಲ. ಅದು ಜ್ಞಾಪಕಕ್ಕೆ ಬಂದಾಗಲೆಲ್ಲಾ, ನನ್ನ ಮೈಯೆಲ್ಲವೂ ಸುಟ್ಟು ಬೂದಿಯಾಗಿ ಬಿಡುವುದು. ಈ ಜನ್ಮದಲ್ಲಿ ಕಳೆದುಹೋದ ಆ ಸಂಗತಿಯನ್ನು ಮತ್ತೆಮತ್ತೆ ಸ್ಮರಣೆಗೆ ತರಕೂಡದೆಂದು ಎಷ್ಟೆಷ್ಟೋ ಪ್ರತಿಜ್ಞೆ ಮಾಡುವೆನು. ನನ್ನ ಪ್ರತಿಜ್ಞೆಯೆಲ್ಲವೂ ನೀರಿನ ಮೇಲ ಬರದಂತಾಗುವುದು. ತರಳೆ ! ನೀನು ನನ್ನನ್ನು ಪ್ರೀತಿಸುವೆ, ಅದನ್ನು ನಾನು ಚೆನ್ನಾಗಿಯೂ ಬಲ್ಲೆನು. ಆದರೆ ನೀನು ಮಟ್ಟಿಗೆ ನನ್ನನ್ನು ಹೇಗೂ ಪ್ರೀತಿಸಬೇಡ. ಅದರಿಂದ ದುಃಖವೇ ಹೊರತು ಸುಖವಿಲ್ಲ."

ಯುವತಿ—ನೀನು ಆರನ್ನು ಪ್ರೀತಿಸುತ್ತಿದ್ದೆಯೋ ಆಕೆಯ ಹೆಸರೇನು?

ಯುವಕ—ಸರಳಕುಮಾರಿ.

ಈ ಮಾತನ್ನಾಡಿದ ಯುವಕನು ವಿನಯಕುಮಾರನು. ಶಿವರಾಮಪುರದ ಜೋಡೀದಾರನಾದ ಅಚ್ಯುತಾನಂತ ಗೋವಿಂದಶರ್ಮನು ವಿನಯಕುಮಾರನನ್ನು ದೂರದೇಶಕ್ಕೆ ಓಡಿಸಿಬಿಟ್ಟದ್ದುದು ವಾಚಕಮಹಾಶಯರ ಹೃದಯದಲ್ಲಿ ಇನ್ನೂ ಜ್ಞಾಪಕದಲ್ಲಿರಬಹುದು.

ವಿನಯಕುಮಾರನು, ಆವ ದಿನ ಗೌರೀಶಂಕರನು ಹೇಳದೆ ಕೇಳದೆ ಹಡಗನ್ನೇರಿ ದ್ವೀಪದಿಂದ ಹೊರಟು ಹೋದನೋ, ಆ ದಿನದ ಬೆಳಗ್ಗೆ

ಪ್ರಾಣದ ಮೇಲೆ ಆಸೆಯನ್ನು ತೊರೆದು ಆ ಸಣ್ಣ ದ್ವೀಪದಲ್ಲಿ ಕುಳಿತುಕೊಂಡು ಅಳುತ್ತಿದ್ದನು. ಅದೇ ಸಮಯದಲ್ಲಿ ಸರ್ವಪ್ರಹರಣಾಯುಧನು ತನ್ನ ದೇಶವನ್ನು ಬಿಟ್ಟು ಹಡಗನ್ನೇರಿ ಅದೇ ಮಾರ್ಗವಾಗಿಯೇ ಹೋಗುತ್ತಿದ್ದನು. ಆತನು ವಿನಯಕುಮಾರನ ದುರ್ದಶೆಯನ್ನು ನೋಡಿ ಮನ ಕರಗಿದವನಾಗಿ ಅವನನ್ನು ತನ್ನೊಡನೆಯೇ ಕರೆದುಕೊಂಡು ಬಂದು ತನ್ನ ಮನೆಯನ್ನು ಸೇರಿಸಿದನು. ದಿನದಿನಕ್ಕೆ ವಿನಯನ ಪರಿಚಯವುಂಟಾದ ಹಾಗೆಲ್ಲಾ, ಸರ್ವಪ್ರಹರಣಾಯುಧನು ಅವನ ಶೀಲ ಸ್ವಭಾವಗಳನ್ನು ಚೆನ್ನಾಗಿಯೂ ಅರಿತವನಾಗಿ, ವಿನಯನಿಗೆ ತನ್ನ ಮಗಳನ್ನು ಕೊಟ್ಟು ವಿವಾಹ ಮಾಡಬೇಕೆಂದು ನಿಶ್ಚಯಮಾಡಿ ಅವನನ್ನು ತನ್ನಲ್ಲಿಯೇ ಇಟ್ಟುಕೊಂಡು ಕಾಪಿಡುತ್ತಾ ಬಂದನು.

ತರಳಕುಮಾರಿಯು ಸರಳಕುಮಾರಿಯ ಸಂಗತಿಯನ್ನು ಕೇಳಿ,—ಸರಳೆಯಂತೆಯೇ, ನೀನೂ ಆಕೆಯನ್ನು ಪ್ರೀತಿಸುತ್ತಿದ್ದೆಯ? ಎಂದು ಕೇಳಿದಳು.

ಬುದ್ಧಿಮಂತನಾದ ವಿನಯಕುಮಾರನು ಈ ಮಾತನ್ನು ಕೇಳಿ ತನ್ನಲ್ಲಿ ತಾನೇ, "ಸರ್ವಪ್ರಹರಣಾಯುಧನು ನನಗೆ ಜೀವನಪ್ರದಾತನು ಅವನ ಇಷ್ಟದಂತೆಯೇ ನಾನು ತರಳಕುಮಾರಿಯನ್ನು ಮದುವೆಯಾಗಬೇಕಾಗಿರುವುದು. ರಮಣಿಯರ ಹೃದಯವಾದರೋ ಪ್ರೇಮಕ್ಕಾಗಿಯೇ ತುಟುಗುಟ್ಟುತ್ತಿರುವುದು. ನಾನು ಸರಳೆಯನ್ನು ಪ್ರೀತಿಸುವೆನೆಂದು ಹೇಳುವುದಾದರೆ, ತರಳೆಯ ಹೃದಯವು ತರಳವಾಗುವುದು," ಎಂದು ಪರ್ಯಾಲೋಚಿಸಿ, ತರಳಕುಮಾರಿಯನ್ನು ಕುರಿತು,—"ತರಳೆ! ಮೊದಲು ಪ್ರೀತಿಸುತ್ತಿದ್ದೆನು," ಎಂದು ಹೇಳಿದನು.

ತರಳೆ—ಆವಾಗ ?

ವಿನಯ—(ನಸುನಕ್ಕು) ಆಕೆಯ ಮುಖಕಮಲವು ಎಲ್ಲಿನ ವರೆಗೂ ನನ್ನ ಕಣ್ಣುಗಳಿಗೆ ಆನಂದದಾಯಕವಾಗಿದ್ದಿತೋ, ಅಲ್ಲಿನ ವರೆಗೂ ಆಕೆಯನ್ನು ನಾನು ಪ್ರೀತಿಸುತ್ತಿದ್ದೆನು. ಈಗ ನಾನು ನಿನ್ನನ್ನು ಹೊರತು ಮತ್ತಾರನ್ನೂ ಪ್ರೀತಿಸೆನು.

ತರಳೆ—ನೀನು ಬಲು ಕಠಿನ ಹೃದಯನು.

ವಿನಯ—ಅದು ಹೇಗೆ ?

ತರಳೆ—ಅವಳು ನಿನ್ನನ್ನು ಪ್ರೀತಿಸುತ್ತಿರುವಲ್ಲಿ, ನೀನು ಮಟ್ಟಿಗೆ ಆಕೆಯನ್ನು ಪ್ರೀತಿಸುವುದಿಲ್ಲವೇತಕೆ ?

ವಿನಯ—(ಸ್ವಗತವಾಗಿ) ನಾನು ಆಕೆಯನ್ನು ಪ್ರೀತಿಸುತ್ತೇನೆಯೋ ಇಲ್ಲವೋ ನನ್ನ ಮನವೇ ಬಲ್ಲುದು. (ಪ್ರಕಾಶವಾಗಿ) ಪ್ರಿಯೆ! ನಿನ್ನ ಮುಖ ಚಂದ್ರನು ಉದಯಿಸಿದ ಕೂಡಲೆ, ನನ್ನ ಮನಶ್ಚಕೋರವು ನಿನ್ನಲ್ಲಿಯೇ ಅನುರಕ್ತವಾಗಿರುವುದು.

ಈ ಮಾತನ್ನು ಕೇಳಿದ ಕೂಡಲೆ ತರಳಕುಮಾರಿಯು ಚಕಿತಳಾಗಿ,—"ವಿನಯ! ನೀನು ಹೇಳುವುದನ್ನು ಕೇಳಿದರೆ, ನನಗೆ ಅದೇತಕೋ ಭಯವಾಗುವುದು. ನನ್ನ ಪ್ರಾಣವನ್ನು ನಿನಗೆ ಒಪ್ಪಿಸುವುದಕ್ಕೆ ಮನವೊಡಂಬಡದು. ಮತ್ತಾರಾದರೂ ಸಿಕ್ಕುವ ವರೆಗೆ ನನ್ನನ್ನು ಪ್ರೀತಿಸುತ್ತಿದ್ದು, ಬಳಿಕ ನೀನು ನನ್ನನ್ನು ಮರೆವುದಕ್ಕೂ ಸಾಕು," ಎಂದು ಗದ್ಗದ ಸ್ವರದಿಂದ ನುಡಿದಳು.

ವಿನಯ—ತರಳೆ! ಇದೇತಕೆ ಹೀಗೆ ಮಾತನಾಡುವೆ? ನಾನೆಂದಿಗೂ ದಯಾದರಿದ್ರನಲ್ಲ. ನಿನ್ನನ್ನು ಮರೆಯಲು ನನಗೆ ಕಾರಣವೇನಿರುವುದು? ನನ್ನ ಹಿಂದೆಯೂ ಮುಂದೆಯೂ ನೀನೇ, ಪಾರ್ಶ್ವಗಳಲ್ಲಿಯೂ ನೀನೇ, ಒಳಗೂ ಹೊರಗೂ ನೀನೇ, ಸರ್ವ ದಿಕ್ಕುಗಳಲ್ಲಿಯೂ ನೀನೇ ಆಗಿರುವೆ. ಸರ್ವ ವಸ್ತುಗಳಲ್ಲಿಯೂ ನಿನ್ನ ರೂಪವೇ ಪ್ರತಿಫಲಿಸಿರುವುದು. ಆವಾಗಲೂ ನಿನ್ನ ಧ್ಯಾನದಲ್ಲಿಯೇ ಆಸಕ್ತನಾಗಿರುವ ನನಗೆ ನಿನ್ನ ಮಾತು ಹೊರತೂ ಮತ್ತೇನೂ ಬೇಕಾಗಿರುವುದಿಲ್ಲ ಹೀಗಿರುವಲ್ಲಿ ನಿನ್ನನ್ನು ನಾನು ಮರೆವ ಸಂಭವವೆಂದರೇನು?

ತರಳೆ—ನನ್ನನ್ನೂ ಬಲೆಗೆ ಸಿಕ್ಕಿಸಿಕೊಳ್ಳಬೇಕೆಂದು ನೀನು ಅತಿ ಚಮತ್ಕಾರವಾಗಿ ಮಾತನಾಡಿದ ಮಾತ್ರಕ್ಕೆ, ನಾನು ನಿನ್ನ ಬುಟ್ಟಿಯಲ್ಲಿ ಬೀಳುವಷ್ಟು ಮೂಢೆಯಲ್ಲ ಒಬ್ಬಳಿಗೆ ಮಾಡಿದುದು ಮತ್ತೊಬ್ಬಳಿಗೂ ಅಲ್ಲವೇ? ಅದಕ್ಕೆ ಹೊಸದಾದ ನಿದರ್ಶನವೇನು ಬೇಕಾಗಿರುವುದು? ಕೈ ಹುಣ್ಣಿಗೆ ಕನ್ನಡಿಯೇ!

ವಿನಯ—ತರಳೆ! ಹೆಂಗುಸರ ಸ್ವಭಾವವು ಈಗ ನನಗೆ ಚೆನ್ನಾಗಿಯೂ ಗೊತ್ತಾಯಿತು ಸ್ತ್ರೀಯರು ಪೂರ್ವಾಪರ ವಿವೇಕವಿಲ್ಲದವರೆಂದು ನಾನು ಏತಕ್ಕೆ ಹೇಳಬಾರದು? ನಿಜವಾದ ಸಂಗತಿಯನ್ನು ನಾನು ಹೇಳುವುದರಿಂದ ಎಲ್ಲರೂ ಒಪ್ಪುವರೆಂದು ತಿಳಿದು ನಾನು ನಿನಗೆ ನಡೆದುದೆಲ್ಲವನ್ನೂ ನಡೆದಂತೆಯೇ ತಿಳಿಯ ಹೇಳಿದೆನು. ನಿಜವಾಗಿಯೂ ನಿನಗೆ ಮೋಸಮಾಡಬೇಕೆಂದು ನನ್ನಿಷ್ಟದಲ್ಲಿದ್ದರೆ, ನಿನಗೆ ನಾನು ಹಿಂದಣ ಸಂಗತಿಯನ್ನು ಕೊಂಚವಾದರೂ ತಿಳಿಸುತ್ತಿದ್ದೆನೇ? ನಿನ್ನ ಮನಸ್ಸು ಕರಗುವುದಕ್ಕೆ ಆವ ಮಾತ

ನ್ನಾಡಬೇಕೋ, ಅದನ್ನೇ ಹೇಳಿ ನಿನ್ನನ್ನು ನಾನು ಸ್ವಾಧೀನಪಡಿಸಿಕೊಳ್ಳು ತ್ತಿದ್ದೆನು. ಮುಂದಣ ಪರಿಣಾಮವದಂತಿರಲಿ, ಈಗಣ ಕಾಲದಲ್ಲಿ ಸತ್ಯವಂತ ರಿಗೆ ಮಾನವಿಲ್ಲ, ಗೌರವವಿಲ್ಲ; ಸತ್ಯವಂತರ ಮಾತನ್ನು ಆರೂ ನಂಬುವುದಿಲ್ಲ. ಜನರು ತಮ್ಮ ತಮ್ಮ ಸ್ವಭಾವಕ್ಕೆ ಅನುಗುಣವಾಗಿಯೇ ಇತರರ ಯೋಗ್ಯತೆ ಯನ್ನೂ ಪರೀಕ್ಷಿಸುವರು. ಇದು ಆವುದರ ದೋಷವೋ ತಿಳಿದು ಹೇಳುವು ದಕ್ಕಾಗುವುದಿಲ್ಲ. ಇದೂ ಹಾಗಿರಲಿ. ತರಳೆ ! ನಾನು ಸತ್ಯವನ್ನು ನುಡಿದು ದಕ್ಕಾಗಿ ನಿನ್ನ ಮನಸ್ಸಿಗೆ ಬೇಸರವುಂಟಾಗುವುದಾದರೆ, ನಿನ್ನ ಇಷ್ಟವಿದ್ದಂತೆ ಮಾಡಬಹುದು. ಕೃತ್ರಿಮವನ್ನರಿಯದ ನಿನ್ನಲ್ಲಿ ಕೃತ್ರಿಮವಿಲ್ಲದೆಯೇ ಪ್ರವ ರ್ತಿಸಬೇಕೆಂದು ನಿಶ್ಚಯಿಸಿ, ನಾನು ಮೊದಲಿನ ವೃತ್ತಾಂತವನ್ನು ಇದ್ದು ದು ಇದ್ದ ಹಾಗೆಯೇ ತಿಳಿಸಿದೆನು. ಇದನ್ನು ನೀನು ಬೇರೆಯ ಬಗೆಯಲ್ಲಿ ಭಾವಿಸಲಾಗದು ನಾನು ನಿನ್ನನ್ನು ಆವಾಗಲೂ ನನ್ನ ಹೃದಯದಲ್ಲಿ ಧಾರಣ ಮಾಡಿ, ನಿನ್ನ ಮೂರ್ತಿಯನ್ನು ಎಡೆಬಿಡದೆ ಪೂಜಿಸುವೆನು.

ವಿನಯನು ಹೀಗೆ ಹೇಳಿದ ಮಾತನ್ನು ತರಳಕುಮಾರಿಯು ಕೇಳಿದ ಕೂಡಲೇ, ಅತಿಶಯವಾದ ಪ್ರೇಮಾನುಬಂಧದಿಂದ ಸೊಕ್ಕಿ ಸೊರಗಿದವಳಾಗಿ ವಿನಯನ ಪಕ್ಕದಲ್ಲಿ ಕುಳಿತುಬಿಟ್ಟಳು ವಿನಯನು ಆಕೆಯ ಕೈಗಳನ್ನು ಹಿಡಿದುಕೊಳ್ಳಬೇಕೆಂದಿರುವಷ್ಟರೊಳಗಾಗಿ, "ಮಗು! ಬಲು ಹೊತ್ತು ಎಲ್ಲಿಗೆ ಹೋದೆ ? ಬೇಗನೆ ಬಂದು ವಿನಯನಿಗ ಊಟಕ್ಕೆ ಅಣಿಮಾಡು ತಡಮಾಡದೆ ಬಾ," ಎಂದು ತರಳೆಯ ತಾಯಿಯು ಅಡುಗೆಯ ಮನೆಯಿಂದಲೇ ಕೂಗಿ ದಳು. ಈ ಮಾತು ಕಿವಿಯ ಮೇಲೆ ಬಿದ್ದೊಡನೆಯೇ ತರಳೆಯು ಚಕಿತಳಾಗಿ "ಇದೇನು, ಹುಚ್ಚಿಯಂತಾಗಿಬಿಟ್ಟೆ ! ನಾನು ಏನ ಮಾಡಿದೆನೆಂಬುದೇ ನನಗೆ ತಿಳಿಯದೇ ಹೋಯಿತಲ್ಲಾ ! ನನ್ನಲ್ಲಿ ಎಷ್ಟು ವಿವೇಕವಿದ್ದರೆ ತಾನೇ ಏನು ಪ್ರಯೋಜನವಾದಂತಾಯಿತು? ವಿವೇಕವು ಆವಾಗಲೂ ಉತ್ತರ ಕಾಲದಲ್ಲಿ ಹುಟ್ಟುವುದೇ ಹೊರತು ಮೊದಲು ಹುಟ್ಟುವುದೇ ಇಲ್ಲ," ಎಂದು ಹೇಳಿ ಕೊಳ್ಳುತ್ತಾ ತಟ್ಟನೆ ಮಂಚದಿಂದ ಕೆಳಗಿಳಿದಳು. ವಿನಯನು ಇದನ್ನು ನೋಡಿ,—ತರಳೆ ! ಎಲ್ಲಿಗೆ ಹೊರಡುವೆ ? ಎಂದು ಕೇಳಿದನು.

ತರಳ ಕುಮಾರಿಯು,—" ನಮ್ಮ ತಾಯಿ ಕೂಗುತ್ತಿರುವಳು, ನಾನು ಹೊರಡುವೆನು," ಎಂದು ಹೇಳುತ್ತಾ ಹೇಳುತ್ತಾ ಆ ಕೋಣೆಯಿಂದ ಹೊರಗೆ ಹೊರಟೇ ಹೋದಳು.

# ಹತ್ತನೆಯ ಲಂಬಕ.

## ವಿ ವಾ ಹ .

ತರಳ ಕುಮಾರಿಯು ಹೊರಟು ಹೋದ ಕೂಡಲೆ, ವಿನಯನು ಮೊದಲಿನಂತೆಯೇ ಪುಸ್ತಕವನ್ನು ತೆರೆದು ಓದತೊಡಗಿದನು. ಕೊಂಚ ಹೊತ್ತಿನೊಳಗಾಗಿಯೇ ಭೋಜನವೂ ಸಿದ್ಧವಾಯಿತು. ಮೊದಲು ವಿನಯನೊಬ್ಬನೇ ಒಳಗೆ ಹೋಗಿ ಊಟವನ್ನು ತೀರಿಸಿಕೊಂಡು ಬಂದನು. ಅಷ್ಟು ಹೊತ್ತಿಗೆ ಸೂರ್ಯನು ಪಶ್ಚಿಮಾಚಲವನ್ನು ಸೇರಿದ್ದನು. ಯಾಮಿನಿಯು ತನ್ನ ಪ್ರಾಣಕಾಂತನಾದ ಚಂದ್ರನನ್ನು ಹುಡುಕಿಕೊಂಡು ಬಂದಳು, ಆದರೆ ಆಕೆಯ ಆಸೆಯು ಪೂರ್ಣವಾಗಲು ಅನುಕೂಲಿಸಲಿಲ್ಲ. ಕಾರಣವೇನೆಂದರೆ—ಗಗನ ಮಂಡಲದಲ್ಲಿ ಎಲ್ಲೆಲ್ಲಿಯೂ ಮೋಡವು ಆವರಿಸಿಕೊಂಡಿದ್ದಿತು. ಯಾಮಿನಿಯ ಹೃದಯವು ದುಃಖದಿಂದ "ದಡಾಸ್ ದಡಾಸ್" ಎಂದು ಬಡಿದು ಕೊಳ್ಳಲಾರಂಭಿಸಿತು. ಆಕೆಯ ದುಃಖದಲ್ಲಿ ಜಗತ್ತೆಲ್ಲವೂ ವ್ಯಸನದಿಂದ ತಲ್ಲಣಿಸಿಹೋಯಿತು. ಯಾಮಿನಿಯು ಗಂಡನನ್ನು ಕಾಣದೆ ಹೆಚ್ಚಿನ ವ್ಯಸನದಿಂದ ಆತನನ್ನು ಅಲ್ಲಲ್ಲಿ ಹುಡುಕುತ್ತಿರುವಷ್ಟರೊಳಗಾಗಿಯೇ ಅರ್ಧರಾತ್ರದ ಸಮಯವಾಯಿತು. ಜನರೆಲ್ಲರೂ ಮೈಮರೆತು ನಿದ್ರಿತರಾಗಿಬಿಟ್ಟರು.

ರಾತ್ರಿಯಲ್ಲಿ ಎರಡನೆಯ ಯಾಮವು ಕಳೆದು ಮೂರನೆಯ ಯಾಮವು ಜರಗುತಲಿದ್ದಿತು. ಆಗ ಆಕಾಶವು ಮೇಘಮಾಲೆಗಳಿಂದ ತುಂಬಿಹೋಗಿ, ಕಾರ್ಗತ್ತಲೆಯು ತಾನೇತಾನಾಗಿ ಏಕಾಧಿಪತ್ಯಕ್ಕೆ ಪ್ರಾರಂಭಮಾಡಿದ್ದಿತು. ಈ ಆಧಿಪತ್ಯದ ಮಧ್ಯಕಾಲದಲ್ಲಿ ೨೦-೨೫ ಮಂದಿ ಅಸಭ್ಯಜನರು ಭಯಂಕರವಾದ ವೇಷಗಳನ್ನು ತಾಳಿ ಆಯುಧ ಪಾಣಿಗಳಾಗಿ ಸರ್ವಪ್ರಹರಣಾಯುಧನ ಮನೆಯ ಇದಿರಿನಲ್ಲಿ ಬಂದು ನಿಂತುಕೊಂಡು ವಿಕಟವಾದ ಹುಂಕಾರವನ್ನು ಮಾಡಿದರು. ಆ ಹುಂಕಾರಧ್ವನಿಯು ಗಗನಮಂಡಲವನ್ನಡರಿ, ಅಲ್ಲಿಯೂ ಅಡಗದೆ ಸರ್ವಪ್ರಹರಣಾಯುಧನ ಮನೆಯೊಳಗೆ ನುಗ್ಗಿತು. ಬಹುಮಾತಿನಿಂದೇನು? ಮನೆಯ ಮುಂಗಡೆ ಬಂದು ನಿಂತು ಹುಂಕಾರ ಮಾಡಿದವರು ಕಳ್ಳರಾಗಿದ್ದರು ಕಳ್ಳರು ಮನೆಯ ಬಾಗಿಲನ್ನೊಡೆದು ಮನೆಯೊಳಗೆ ನುಗ್ಗಿದರು. ಒಬ್ಬನ ಕೈಯಲ್ಲಿ ಕತ್ತಿ, ಇನ್ನೊಬ್ಬನ ಕೈಯಲ್ಲಿ ದೊಣ್ಣೆ,

ಮತ್ತೊಬ್ಬನ ಕೈಯಲ್ಲಿ ಈಟಿ, ಮಗದೊಬ್ಬನ ಕೈಯಲ್ಲಿ ಕವಣೆ ಈ ರೀತಿಯಾಗಿ ಕಳ್ಳರೆಲ್ಲರೂ ಆಯುಧಗಳನ್ನು ಹಿಡಿದುಕೊಂಡು ಮನೆಯೊಳಗೆ ನುಗ್ಗಿ ತಮ್ಮ ತಮ್ಮ ಕೆಲಸದಲ್ಲಿ ಕೈ ಹಾಕಿದರು. ಗ್ರಾಮರಕ್ಷಕರಿಗೆ ಈ ಸಂಗತಿ ಹೇಗೋ ತಿಳಿದು, ಸಕಾಲದಲ್ಲಿಯೇ ಹತ್ತೆಂಟು ಜನ ಯಾಮಿಕರು (ಪೋಲೀಸಿನವರು) ಬಂದು ಕಳ್ಳರನ್ನು ಸುತ್ತಿಕೊಂಡರು. ಕಳ್ಳರಿಗೂ ಯಾಮಿಕರಿಗೂ ಸಣ್ಣ ಕದನವಾಯಿತು. ಕೊನೆಯಲ್ಲಿ ಕಳ್ಳರೆಲ್ಲರೂ ಭಯದಿಂದ ಪಲಾಯನ ಮಾಡಿದರು. ಬಳಿಕ ಕಳ್ಳರು ಆವ ಪದಾರ್ಥಗಳನ್ನು ಅಪಹರಿಸಿಕೊಂಡು ಹೋಗಿರುವರೆಂದು ನೋಡುವುದಕ್ಕಾಗಿ ಎಲ್ಲರೂ ದೀಪಗಳನ್ನು ಹಿಡಿದುಕೊಂಡು ಹುಡುಕಾಡಿದರು. ಮನೆಯಲ್ಲಿ ಆವ ಪದಾರ್ಥವೂ ಕಳವಾದಂತೆ ಕಂಡುಬರಲಿಲ್ಲ. ಎಲ್ಲರೂ ಮನೆಯ ಯಜಮಾನನ್ನು ನೋಡುವುದಕ್ಕಾಗಿ ಆತನ ಕೋಣೆಗೆ ಹೋದರು. ಅಲ್ಲಿ ಯಜಮಾನನು ಇರಲಿಲ್ಲ. ಎಲ್ಲರೂ ಎಲ್ಲೆಲ್ಲಿಯೂ ಆತನನ್ನು ಹುಡುಕಿ ನೋಡಿದರು, ಯಜಮಾನನು ಸಿಕ್ಕಲೇ ಇಲ್ಲ. ಕಟ್ಟಕಡೆಗೆ ಎಲ್ಲರೂ ಯಜಮಾನನನ್ನು ಕಳ್ಳರೇ ಎತ್ತಿಕೊಂಡು ಹೋಗಿರಬೇಕೆಂದು ನಿರ್ಧರ ಮಾಡಿದರು ಇದನ್ನು ಕೇಳಿದೊಡನೆಯೇ ಯಜಮಾನಿಗೆ ದುಃಖವು ಉಕ್ಕಿಬಂದು ಕಣ್ಣೀರಿನ ರೂಪದಲ್ಲಿ ಹರಿದುಹೋಯಿತು. ಆಕೆಯು "ಪಾಪಾತ್ಮಳಾದ ನನ್ನ ಹಣೆಯಲ್ಲಿ ಮತ್ತಾವಾವ ಕಷ್ಟಗಳು ಬರೆದಿವೆಯೋ, ಬಲ್ಲವರಾರು? ಹಾ! ನಾಥ!" ಎಂದು ಗೋಳಿಡುತ್ತಾ ಎದೆಯನ್ನು ಹೊಡೆದುಕೊಳ್ಳಲಾರಂಭಿಸಿದಳು. ತರಳಕುಮಾರಿಯು ದಿಕ್ಕು ತೋರದವಳಾಗಿ ಬಿಕ್ಕಿ ಬಿಕ್ಕಿ ಅತ್ತಳು. ಈ ದುರ್ಯೋಗವನ್ನು ಕಂಡು ವಿನಯನ ಮನವೂ ಕರಗಿಹೋಯಿತು. ಇಷ್ಟೆನ್ನುವುದರೊಳಗಾಗಿ ರಾತ್ರಿಯು ಕಳೆದು ಬೆಳಗಾಯಿತು. ಸರ್ವಪ್ರಹರಣಾಯುಧನನ್ನು ಕಂಡುಹಿಡಿಯುವುದಕ್ಕಾಗಿ ಜನರು ದಿಕ್ಕುದಿಕ್ಕಿಗೆ ಕಳುಹಲ್ಪಟ್ಟರು. ಎಷ್ಟು ಹುಡುಕಿಸಿದರೂ ಫಲವಾಗದೇ ಹೋಯಿತು. ಕೊನೆಗೆ ಮನೆಯವರು ಅಲ್ಲಿರುವುದು ಅಪಾಯಕರವೆಂದೂ, ಬೇರೆಯ ಸ್ಥಳಕ್ಕೆ ಕೂಡಲೆಯೇ ಹೊರಟು ಹೋಗುವುದು ಯುಕ್ತವೆಂದೂ ತಿಳಿದು, ಕೂಡಿದಷ್ಟು ಬೇಗನೆ ಸಕಲ ಸಾಮಗ್ರಿಗಳನ್ನೂ ನಾಗಿಸಿಕೊಂಡು ತಮ್ಮ ತೌರೂರನ್ನು ಕುರಿತು ಪಯಣ ಬಳೆಯಿಸಿದರು.

ಸರ್ವಪ್ರಹರಣಾಯುಧನ ಹೆಂಡಿತಿಯು ಸ್ವಗ್ರಾಮಕ್ಕೆ ಬಂದಕೂಡಲೆ ಗ್ರಾಮ ಪುರೋಹಿತರನ್ನು ಕರಯಿಸಿಕೊಂಡು ತನ್ನ ಯಜಮಾನನ ವಿಷಯ

ದಲ್ಲಿ ಮಾಡಬೇಕಾದುದೇನೆಂದು ಕೇಳಿದಳು. ಪುರೋಹಿತರು ಬಲುಹೊತ್ತು ಆಲೋಚಿಸಿದ ಬಳಿಕ ಆಕೆಯನ್ನು ಕುರಿತು ಇಂತೆಂದರು:—

"ಯಜಮಾನನು ಎಲ್ಲಿಯೂ ಸಿಕ್ಕಲಿಲ್ಲವೆಂದು ನೀವು ಹೇಳುವಿರಿ. ಆತನು ಬದುಕಿದ್ದರೆ ಮನೆಗೆ ಬಾರದೆಯೇ ಹೋಗುತ್ತಿದ್ದನೇ? ಇಲ್ಲ, ನಿಜವಾಗಿಯೂ ಆತನು ಬದುಕಿರಲಿಕ್ಕಿಲ್ಲ. ಇದರಲ್ಲಿ ನೀವು ಈ ವಿಷಯವನ್ನು ಚಿಂತಿಸದಿದ್ದುದೇ ಒಂದು ತಪ್ಪು, ಆತನ ಪ್ರೇತಾತ್ಮಕ್ಕೆ ಇಲ್ಲಿನ ವರೆಗೂ ಸಂಸ್ಕಾರ ಮಾಡದಿರುವುದು ಮತ್ತೊಂದು ತಪ್ಪು. ಈ ಎರಡು ತಪ್ಪುಗಳನ್ನು ಇಟ್ಟುಕೊಂಡು, ಮಾಡಬೇಕಾದ ಕೆಲಸವನ್ನು ಶೀಘ್ರದಲ್ಲಿ ಮಾಡದಿದ್ದರೆ ಜನಗಳ ಆಕ್ಷೇಪಣೆಗೆ ಗುರಿಯಾಗಬೇಕು, ಇದರ ಮೇಲೂ ಮತಾಚಾರ್ಯರು ಕುಲದಿಂದ ಹೊರಗೆ ಹಾಕುವರು. ನಾವು ಮಾಡುವ ಕೆಲಸದಲ್ಲಿ ಕೊಂಚ ಮೈಮರೆತರೆ, ಇಷ್ಟೆಲ್ಲಾ ಅನರ್ಥಕ್ಕೆ ಕಾರಣವಾಗುವುದು. ಆದಕಾರಣ, ಇನ್ನಾದರೂ ನಾವಕಾಶಮಾಡದೆ, ಮಾಡಬೇಕಾದ ಕೆಲಸವನ್ನು ಸಾಧ್ಯವಾದಷ್ಟು ಬೇಗನೆ ನೆರವೇರಿಸಲು ಯತ್ನಮಾಡಿರಿ ನಿಮಗೆ ಬೇಕಾದರ, ನನ್ನಿಂದಾಗುವಷ್ಟು ಸಾಹಾಯ್ಯವನ್ನೂ ಮಾಡಲು ನಾನು ಸಿದ್ಧನಾಗಿರುವೆನು. ಶ್ರಮಪಡಲು ನಿಮಗೆ ಅಸಾಧ್ಯವಾಗಿ ಕಂಡುಬಂದಲ್ಲಿ, ನನಗೆ ಪ್ರಕೃತದಲ್ಲಿ ಒಂದುನೂರು ರೂಪಾಯಿಗಳನ್ನಾದರೂ ಕೊಡೋಣವಾಗಲಿ. ಆವ ಗಲಭೆಯೂ ಇಲ್ಲದಂತೆ ನಾನು ಕೆಲಸವನ್ನು ಆಗಮಾಡಿಬಿಡುವೆನು. ಇದರಿಂದ ನಿಮಗೆ ಮುಂದಣ ತೊಂದರಯಾವುದೂ ಇರುವುದಿಲ್ಲ. ಇದರ ಮೇಲೆ ನಿಮ್ಮ ಇಷ್ಟವಿದ್ದಂತೆ ಮಾಡಬಹುದು ನೀವು ಇದೊಂದು ವಿಷಯವನ್ನು ಮಟ್ಟಿಗೆ ಜ್ಞಾಪಕದಲ್ಲಿಟ್ಟರಬೇಕು. ಅದೇನೆಂದರ—ಜನರು ವಿಧವಿಧವಾಗಿ ಮಾತನಾಡಿಕೊಳ್ಳಬಹುದು, ಆಕ್ಷೇಪಿಸಬಹುದು, ಪರಿಪರಿಯ ತೊಂದರೆಗಳನ್ನುಂಟು ಮಾಡಲೂಬಹುದು, ಆದರೆ ನೀವು ಮಟ್ಟಿಗೆ ಕೆಟ್ಟ ಕೂಗಿಗೆ ಗಮನ ಕೊಡದೇ ಇರಬೇಕು."

ಪುರೋಹಿತರು ಈ ರೀತಿಯಲ್ಲಿ ನುಡಿದ ನುಡಿಯನ್ನು ಕೇಳಿ, ವಿನಯ ಕುಮಾರನು ಇಂತೆಂದನು:—

"ಮಹಾಶಯರೆ! ತಾವು ಹೇಳುವ ಮಾತೆಲ್ಲವೂ ಸರಿಯೇ, ಆದರೆ ಶಾಸ್ತ್ರಕಾರರ ವಚನಕ್ಕೂ ನೀವು ಗಮನ ಕೊಡಬೇಕಲ್ಲವೇ?" "ಆವನಾದರೂ ಕಣ್ಮರೆಯಾದನೆಂದರೆ, ಹನ್ನೆರಡು ವರ್ಷಗಳ ವರೆಗಾದರೂ ನಿರೀಕ್ಷಿಸಿ

ನೋಡಬೇಕು; ಅನಂತರದಲ್ಲಿಯೂ ಆತನ ಸ್ಥಿತಿಗತಿಗಳು ತಿಳಿವಿಗೆ ಬರದೇ ಹೋಗುವ ಸಂದರ್ಭದಲ್ಲಿ ಅಪರಕರ್ಮವನ್ನು ಮಾಡಬೇಕು," ಎಂದು ಶಾಸ್ತ್ರವಚನವಿರುವಲ್ಲಿ, ಇದಕ್ಕೆ ನೀವೇನು ಹೇಳುವಿರಿ ? ರೂಪಾಯಿಗಳು ಬೇಕಾಗಿದ್ದಲ್ಲಿ ನಾನು ಕೊಡುವೆನು. ಅದರ ವಿಷಯದಲ್ಲಿ ನಿಮಗೆ ಕೊಂಚ ವಾದರೂ ಸಂದೇಹ ಬೇಡ. ಹಣಕ್ಕಾಗಿ ಸೂಕ್ತವಲ್ಲದ ಕರ್ಮಗಳನ್ನು ಮಾಡ ಬೇಕಾಗಿಯೂ ಇಲ್ಲ, ಮಾಡತಕ್ಕ ಕೆಲಸವನ್ನು ಬಿಡಬೇಕಾಗಿಯೂ ಇಲ್ಲ. ಶಾಸ್ತ್ರವಿದ್ದಂತೆ ಆವ ಕೆಲಸಮಾಡಿದರೂ ಎಲ್ಲರಿಗೂ ಕ್ಷೇಮವುಂಟು. ಆದುದ ರಿಂದ, ಪುರೋಹಿತ ಮಹಾಶಯ ! ತಾವು ಈ ವಿಷಯದಲ್ಲಿ ಹೆಚ್ಚಿನ ಶ್ರಮ ತೆಗೆದುಕೊಳ್ಳಬೇಕಾದುದೇನೂ ಇರುವುದಿಲ್ಲ. ಈಗ ತಾವು ತೆರಳೋಣವಾ ಗಲಿ, ಕಾಲಾನಂತರದಲ್ಲಿ ತಮ್ಮ ಸೇವೆಯನ್ನು ತೆಗೆದುಕೊಳ್ಳುವೆವು."

ಹೀಗೆ ವಿನಯನು ಹೇಳಿದ ಮಾತುಗಳನ್ನು ಕೇಳಿ, ಪುರೋಹಿತರು ವಿಷ ಣ್ಣರಾಗಿ ತಾವು ಬಂದ ದಾರಿಗೆ ಸುಂಕವಿಲ್ಲವೆಂದು ಹೇಳುತ್ತಾ ತಮ್ಮ ತಮ್ಮ ಮನೆಗಳಿಗೆ ಹೊರಟುಹೋದರು. ಇದು ನಡೆದ ಕೆಲವು ದಿನಗಳೊಳಗಾಗಿಯೇ ತರಳೆಗೆ ವಿವಾಹದ ಏರ್ಪಾಡು ನಡಯಿತು, ವಿವಾಹದ ಮುಹೂರ್ತವೂ ಸ್ಥಿರ ಪಡಿಸಲ್ಪಟ್ಟಿತು ಪುರೋಹಿತರು ಬಂದು ತಮ್ಮ ಸುವರ್ಣ ಪುಷ್ಪವನ್ನು ಬರ ಮಾಡಿಕೊಂಡರು. ಪೂರ್ವಪ್ರಯೋಗವಾಗಲಿ, ಅಪರಪ್ರಯೋಗವಾಗಲಿ, ತಮಗೆ ಹಣ ಬಂದರೆ ಸಾಕೆಂದು ತಿಳಿದಿರುವ ಪುರೋಹಿತರು ಹೇಗಾದರೂ ಮಾಡಿ ತಮಗೆ ಬರಬೇಕಾದುದನ್ನು ಬರಮಾಡಿಕೊಳ್ಳದೇ ಬಿಡರು. ಅಕ್ಕ ಪಕ್ಕದ ಜನರೆಲ್ಲರೂ ವಿವಾಹಕ್ಕೆ ಬಂದು ವಧೂವರರಿಗೆ ಆಶೀರ್ವಾದ ಮಾಡಿ ದಿವ್ಯ ಭೋಜನವನ್ನು ಮಾಡಿಕೊಂಡು ತೆರಳಿದರು. ನೂತನ ದಂಪತಿಗಳು ಕೆಲವು ಕಾಲ ಸುಖವಾಗಿದ್ದರು.

———— o ————

# ಹನ್ನೊಂದನೆಯ ಲಂಬಕ.

## ವಿ ಷಾ ದ ದ ಪ್ರ ತಿ ಮೆ .

ಪ್ರಿಯ ಪಾಠಕ ಮಹಾಶಯ ! ತಾವು ಏನ ಕೆಲಸವಿದ್ದರೂ ಬಿಟ್ಟು ದಯೆ ತೋರಿ ನಮ್ಮ ಜತೆಯಲ್ಲಿ ಕೊಂಚ ದೂರ ಪ್ರಯಾಣವನ್ನು ಬೆಳೆಯಿ

ಸೋಣವಾಗಲಿ. ನಾವೆಲ್ಲರೂ ಸೇರಿಕೊಂಡು, ನಮ್ಮ ಪೂರ್ವಪರಿಚಿತಳಾದ ಸರಳಕುಮಾರಿಯನ್ನು ನೋಡಿಕೊಂಡು ಬರುವ. ಬಹುಕಾಲದಿಂದಲೂ ಆಕೆಯ ಸುದ್ದಿಯು ತಿಳಿಯದೆ ತುಂಬಾ ವಿಷಾದಕ್ಕೆ ಕಾರಣವಾಗಿರುವುದು. ಮಾನವ ಹಿತಚಿಂತಕರಾದ ನಾವು ಆಕೆಯ ಯೋಗಕ್ಷೇಮವನ್ನು ವಿಚಾರಿಸದೆ ಬಹುಕಾಲ ದೂರವಿರುವುದೂ ಯುಕ್ತವಾಗಿ ಕಂಡುಬರುವುದಿಲ್ಲ

ಚಂದ್ರಮಂಡಲವನ್ನು ಧಿಕ್ಕರಿಸುತ್ತಿದ್ದ ಸರಳಕುಮಾರಿಯ ಮುಖವು ಇಂದು ಬಾಡಿದೆ. ಆಕೆಯ ಸರಳವಾದ ಹೃದಯವು ಇಂದು ತರಳವಾಗಿದೆ. ಹೊಸದಾಗಿ ವಿಕಸಿತವಾದ ಕುಸುಮದಂತೆ ಕಂಗೊಳಿಸುತ್ತಿದ್ದ ಸರಳೆಯು, ಈಗ ಕಾಲಪರಿವರ್ತನದಿಂದ ಸೊಕ್ಕಿಸೊರಗಿ ಹೋಗಿರುವಳು ಹಠಗಾರನಾದ ತಂದೆಯ ದುರಭಿಪ್ರಾಯವೆಂಬ ಪ್ರಜ್ವಲಿತವಾದ ಅಗ್ನಿಯು ಆ ಬಾಲಿಯಾದ ಸರಳೆಯ ಸುಕುಮಾರವಾದ ದೇಹವನ್ನು ತಪಿಸಿ ಬಣ್ಣಗೆಡಿಸಿದ್ದಿತು. ಯೌವನದಲ್ಲಿ ಎಲ್ಲರಿಗೂ ಸುಖಾಭಿಲಾಷೆ ಇರುವುದು ಸಹಜವಾದರೂ, ಸರಳೆಯು ಮಟ್ಟಿಗೆ ತನ್ನ ಪೂರ್ಣಯೌವನದಶೆಯಲ್ಲಿ ನರಕಭೋಗವನ್ನು ಅನುಭವಿಸ ತೊಡಗಿದಳು. ದೈವಾನುಕೂಲವಿದ್ದಾಗ, ಆವಾವ ವಸ್ತುಗಳು ಆನಂದವನ್ನುಂಟುಮಾಡುತ್ತಿದ್ದುವೋ, ಅವುಗಳೆಲ್ಲವೂ ಈಗ ಆಕೆಯ ಮರ್ಮವನ್ನು ಕತ್ತರಿಸಲಾರಂಭಿಸಿದುವು. ತತ್ತ್ವವೇನೆಂದರೆ—ವಸ್ತು ಸಮುದಾಯದಲ್ಲಿ ಗುಣವಿಲ್ಲ; ಹಿತಾಹಿತವೆಂಬುದು ಮನೋಭಾವದಿಂದ ಉಂಟಾಗುವುದೇ ಹೊರತು ಮತ್ತಾವುದರಿಂದಲೂ ಅಲ್ಲವು.

ಸರಳೆಗೆ ಇನ್ನೂ ವಿವಾಹವಾಗಿರಲಿಲ್ಲ. ಹೆಂಗುಸಾಗಿ ಹುಟ್ಟಿದ ಮೇಲೆ ಆವ ಪುರುಷನ ಕಯ್ಯನ್ನಾದರೂ ಹಿಡಿದು ಜೀವನ ಮಾಡಲೇ ಬೇಕು. ವರನಾದವನು ಅನುಕೂಲನೋ, ಪ್ರತಿಕೂಲನೋ ಮೊದಲು ಆರಿಗೆ ಗೊತ್ತಾಗುವುದು ? ಹೇಗಾದರೂ ಹೆಣ್ಣನ್ನು ಹಡೆದ ತಪ್ಪಿಗೆ ಮದುವೆಮಾಡಿಬಿಟ್ಟರೆ ಸಾಕೆಂದು ಅನೇಕರು ತಿಳಿದುಕೊಂಡಿರುವರು. ಸಾಧಕ ಬಾಧಕಗಳನ್ನು ಚೆನ್ನಾಗಿ ಪರಿಶೀಲಿಸಿ ವಿವಾಹ ಮಾಡತಕ್ಕವರು ಅತಿ ವಿರಳರು. ಕನ್ನೆಯರಿಗೆ ವಿವಾಹ ಮಾಡಬೇಕಾದರೆ, ವಿವಾಹಕರ್ತನು ಕನ್ಯಾಸ್ಥಾನದಲ್ಲಿ ನಿಂತುಕೊಂಡು ಯುಕ್ತಾಯುಕ್ತವನ್ನು ವಿಚಾರಮಾಡಿ ನೋಡಬೇಕು. ಹೀಗೆ ಮಾಡದೆ, ತಂದೆ ತಾಯಿಗಳು ತಮಗೆ ಸೂಕ್ತವಾಗಿ ಕಂಡುಬಂದಂತೆ ವಿವಾಹಮಾಡುವರು. ಇದು ದೊಡ್ಡ ತಪ್ಪು. ಈ ತಪ್ಪಿಗೆ ಲೋಕಾನುಭವವು ಸಾಲದಿರು

ವುದೇ ಮುಖ್ಯ ಕಾರಣವು. ವಿವಾಹದ ತತ್ತ್ವವನ್ನು ಚೆನ್ನಾಗಿ ಪರಿಶೀಲಿಸಿ ಕಾರ್ಯವನ್ನು ನೆರವೇರಿಸುವುದಾದರೆ, ಅನರ್ಥ ಪರಂಪರೆಗೆ ಆಸ್ಪದವಾಗಲಾರದು. ಲೋಕದಲ್ಲಿ ಚೆನ್ನಾಗಿ ಪರ್ಯಾಲೋಚಿಸಿ ಮಾಡಿದುದರಲ್ಲಿಯೂ ನೂರಕ್ಕೊಂದರಂತೆ ಕಿಡುವುದೂ ಉಂಟು, ಆದರೆ ಇದನ್ನೇ ಆಧಾರವಾಗಿಟ್ಟುಕೊಂಡು ಕೆಲಸಮಾಡಕೂಡದು. ವಿಚಾರಿಸಿ ಕೆಲಸಮಾಡಿದವರು ಸಂಸಾರದಲ್ಲಿ ಸುಖವಾಗಿಯೇ ಇರುವರು. ಪ್ರಕೃತದ ಸಂದರ್ಭದಲ್ಲಿ ಸರಳಕುಮಾರಿಗೆ ವಿವಾಹವಾಗಲು ಅನುಕೂಲಿಸಲೇ ಇಲ್ಲ. ವಿವಾಹದ ವಿಷಯದಲ್ಲಿ ಹುಡುಗಿಯ ಇಷ್ಟವೇ ಬೇರೆ, ತಂದೆಯ ಇಷ್ಟವೇ ಬೇರೆ. ಈ ಸಂಕಟದ ಮಧ್ಯದಲ್ಲಿ ಸರಳೆಯು ಕೊರಗಿ ಕೊರಗಿ ನಾಯಬೇಕಾಗಿ ಬಂದು ಸೇರಿತು. ಈ ದುಃಖವನ್ನು ಅನುಭವಿಸುವವರ ಮಾತು ಹಾಗಿರಲಿ; ಅಂತಹವರನ್ನು ನೋಡಿ ಕೊರಗುವುದು ನಮ್ಮ ಹಣೆಯಲ್ಲಿ ಬರೆದುದಕ್ಕಾಗಿ ಎಷ್ಟು ವ್ಯಸನಪಟ್ಟರೂ ಸಾಲದು.

ಸರಳೆಯು ಅನೇಕ ದಿನಗಳಿಂದ ವಿನಯನ ಸಂಗತಿಯನ್ನು ತಿಳಿಯದೆ ದಿನದಿನಕ್ಕೆ ಕ್ಷಯಿಸಿಹೋಗುತ್ತಿದ್ದಳು ವಿನಯನು ಬದುಕಿರುವನೋ, ಇಲ್ಲವೆ, ಈ ಲೋಕವನ್ನೇ ತ್ಯಾಗಮಾಡಿ ತೆರಳಿರುವನೋ ಬಲ್ಲವರಾರು? ಪ್ರಬಲವಾದ ಶತ್ರುಗಳ ಮಧ್ಯದಲ್ಲಿ ಕಯ್ಯಲ್ಲಾಗದ ಹೆಣ್ಣು ಹೆಂಗುಸು ಏನ ಮಾಡಬಲ್ಲಳು? ವಿನಯನನ್ನೇ ಮದುವೆಯಾಗಬೇಕೆಂದು ಸರಳೆಯು ಪ್ರತಿಜ್ಞೆಮಾಡಿರುವಳು. ಒಂದುವೇಳೆ ವಿನಯನು ಲೋಕಾಂತರವನ್ನೈದ್ದಿದ್ದಲ್ಲಿ, ಸರಳೆಯು ವಿವಾಹವಾಗದೆ ಸುಮ್ಮನಿರಲಾದೀತೇ? ಇತರರಿಗೋಸ್ಕರ ಅಮೂಲ್ಯವಾದ ಆತ್ಮಸುಖವನ್ನು ಆರಾದರೂ ಕಳೆದುಕೊಳ್ಳುವುದಕ್ಕೆ ಇಷ್ಟಪಡುವರೇ? ಇಷ್ಟಪಡುವವರೂ ಇರುವರು. ಇದಕ್ಕೆ ಅತಿಶಯವಾದ ಪತಿಪ್ರೀತಿಯೇ ಕಾರಣವು. ಅನೇಕ ನಾರೀಮಣಿಯರು ತಮ್ಮ ಸ್ವಾಮಿಯಲ್ಲಿ ನಿರತಿಶಯವಾದ ಪ್ರೀತಿಯನ್ನಿಟ್ಟು ಆತ್ಮಸುಖವನ್ನು ತೃಣಕ್ಕಿಂತಲೂ ಕಡೆಯಾಗಿ ಎಣಿಸಿರುವರು, ಇದರಿಂದಲೇ ಅನೇಕರು ಪತಿಗಾಗಿ ತಮ್ಮ ಪ್ರಾಣವನ್ನೂ ತೊರೆದಿರುವರು. ಇದೆಲ್ಲದಕ್ಕೂ ಕಾರಣವೇನಿರಬಹುದು? ನಿರ್ದುಷ್ಟವಾದ ಪತಿಪ್ರೀತಿಯೇ. ಈ ಜಗತ್ತಿನಲ್ಲಿ ಈ ವಿಧವಾದ ಪ್ರೀತಿಯೊಂದೇ ಎಲ್ಲರಿಂದಲೂ ಬಯಸಲ್ಪಟ್ಟ ಅಮೃತಕಲಶವು. ಇಂತಹ ಅಮೃತರಸವನ್ನು ಪಾನಮಾಡಿ ಸಂಸಾರದಲ್ಲಿ ಸುಖಪಡಬೇಕೆಂದು ಎಲ್ಲರಿಗೂ ಬಯಕೆಯುಂಟು,

ಆದರೆ ಅನೇಕ ಮಹನೀಯರು ಈ ಅಮೃತವನ್ನು ಪಾನಮಾಡಿಲ್ಲ, ಮಾಡುವ ಹಾಗೂ ಇಲ್ಲ. ನಮ್ಮ ಸರಳಕುಮಾರಿಯಾದರೋ ಇಂತಹ ಅಮೃತಕ್ಕೆ ಸಮುದ್ರದಂತಿರುವಳು. ಇಷ್ಟವುಳ್ಳ ಮಹಿಳೆಯರು ಆಕೆಯನ್ನು ಸೇವಿಸಿ ಅಮೃತವನ್ನು ಭಿಕ್ಷೆಯೆತ್ತಿ ಜೀವಿಸುವುದಾದರೆ ಈ ಲೋಕವೇ ಸ್ವರ್ಗ ಲೋಕವು.

ಇಂತಹ ಮಹಾಮಹಿಮೆಯುಳ್ಳ ಅಮೃತರಸವನ್ನು ಮನದಣಿಯೆ ಪಾನಮಾಡಿ ಸರಳಕುಮಾರಿಯು ಮಹಡಿಯ ಮೇಲೆ ತನ್ನ ಕಿರುಮನೆಯಲ್ಲಿ ಒಂದು ಚಾಪೆಯ ಮೇಲೆ ಕುಳಿತುಕೊಂಡು ಪರಿಪರಿಯಾಗಿ ಚಿಂತಿಸುತ್ತಿರುವಳು. ಆಗ ಸುಕುಮಾರಿಯೊಬ್ಬಳು ಸರಳೆಯ ಬಳಿಗೆ ಬಂದು,—"ಸರಳೇ! ನಾನು ಬಂದಿರುವೆನೇ," ಎಂದಳು.

ಸರಳೆಯು ತಲೆಯೆತ್ತಿ ನೋಡಿದಳು, ಬಂದವಳು ಮನೋರಮೆ. "ಮನು! ನೀನು ಆವಾಗ ಬಂದೆ?" ಎಂದು ಸರಳೆಯು ಆಕೆಯನ್ನು ಕೇಳಿದಳು.

ಮನೋರಮಾ—ನಾನು ಬಂದು ಕೊಂಚ ಹೊತ್ತಾಯಿತು. ನಿನ್ನನ್ನು ನೋಡಿ ತುಂಬಾ ದಿನಗಳಾದುವು ಸರಳೆ!

ಸರಳಾ—ಅಹುದು, ನಾನು ನಿನ್ನನ್ನು ನೋಡಿ ಇಂದಿಗೆ ೫-೬ ವರ್ಷಗಳಾದರೂ ಆಗಿರಬಹುದು ನಮ್ಮನ್ನು ನೀನು ಮರೆತು ಹೋದೆ ಎಂದು ನಾನು ತಿಳಿದಿದ್ದೆನು ಅದು ಹಾಗಿರಲಿ. ಸತೀಶನು ಹೇಗಿರುವನು? ಆತನು ನಿನ್ನನ್ನು ಮೊದಲಿನಂತೆಯೇ ಪ್ರೀತಿಸುತ್ತಿರುವನಷ್ಟೇ?

ಮನೋರಮೆಯು ನಾಚುಗೆಯಿಂದ ತಲೆವಾಗಿ ನಿಂತಳು. ಅವಳ ಬಾಯಲ್ಲಿ ಮಾತೇ ಹೊರಡಲಿಲ್ಲ.

ಸರಳಾ—ಸತೀಶನು ಮೊನ್ನೆಯೇ ಬರುವುದಾಗಿ ವರ್ತಮಾನವಿದ್ದಿತು. ಆತನು ಅದೇಕೆ ಬರಲಿಲ್ಲವೋ ಗೊತ್ತಿಲ್ಲ.

ಮನೋರಮಾ—ಮೊನ್ನೆಯ ದಿನವೇ ನನ್ನ ಗೆಳತಿಯ ಮದುವೆ. ಮದುವೆ ತೀರಿಸಿಕೊಂಡು ಹೋಗಬಹುದೆಂದು ನಿರ್ಬಂಧವಿದ್ದುದರಿಂದ, ಅವರು ಅಂದು ಬರಲು ಆಗಲಿಲ್ಲ.

ಸರಳಾ—ಮನು! ನಿನ್ನ ಹಾಡು ಕೇಳಿ ಬಹುದಿನಗಳಾದುವು. ನಿನ್ನ ದನಿಯಾದರೋ ಬಲು ಇಂಪಾಗಿರುವುದು. ಒಂದು ಹಾಡನ್ನಾದರೂ ಹಾಡಬಾರದೇನೇ?

ಮನೋರಮಾ—ಹಾಡುವೆನು ಅದಕ್ಕೇನು ಶ್ರಮಪಡಬೇಕು! ನಾನು ಏನ ಹಾಡಲಿ, ಹೇಳು ?

ಸರಳಾ—ಹೊಸದಾಗಿ ಏನನ್ನಾದರೂ ಕಲಿತಿದ್ದರೆ ಹೇಳು. ಹೊಸ ಹೊಸ ಹಾಡನ್ನು ಕೇಳುವುದಕ್ಕೆ ನನಗೆ ತುಂಬಾ ಇಷ್ಟವು.

ಮನೋರಮಾ—ನಿನ್ನ ಮದುವೆಯಲ್ಲಿ ಹಾಡುವುದಕ್ಕೆ ಒಂದು ಹಾಡನ್ನು ರಚಿಸಿರುವೆನು. ಅದನ್ನು ಈಗಳೇ ನಿನ್ನಿದಿರಿನಲ್ಲಿ ಹಾಡಿಬಿಡುವೆನು. ಆಗಬಹುದಷ್ಟೇ ?

ಸರಳಾ—ಹಾಡು, ನೋಡುವ,

ಮನೋರಮೆಯು ದನಿಯನ್ನು ಸರಿಪಡಿಸಿಕೊಂಡು ಹಾಡಿದಳು.

ಸುರಟಿ,—ರೂಪಕತಾಳ.

ಇಂದುವದನೆಗಾರತಿಯ | ತಂದು ಬೆಳಗುವೆ || ಪ ||
ತರಳನಾದ ವಿನಯನನ್ನು | ಪರಮ ಹರುಷದಿ ||
ವರಿಸಿ ದಿಟ್ಟತನವ ನಾಂತು | ಮೆರೆವ ಸರಳೆಗೆ || ೧ ||

ಸರಳಾ—ಸಾಕು, ಸಾಕು, ನಿನ್ನ ದುರುಳತನವನ್ನು ನಾನು ನೋಡಲಾರೆನು. ಮನು ! ನೀನು ಈಚೀಚೆಗೆ ಬಲು ಕೆಟ್ಟವಳಾದೆ.

ಮನೋರಮೆಯು ಮುಂದಣ ನುಡಿಗಳನ್ನು ಹಾಡದೆಯೇ ಸುಮ್ಮನಾಗಿಬಿಟ್ಟಳು.



# ಹನ್ನೆರಡನೆಯ ಲಂಬಕ

## ಆ ಶಾ ವ ಸಾ ನ .

ಮನೋರಮೆಯು ಹಾಡನ್ನು ನಿಲ್ಲಿಸಿ ಸರಳೆಯನ್ನು ಕುರಿತು,—“ಸರಳೆ ! ಹಾಡು ಹೇಗಿರುವುದು ?” ಎಂದು ಕೇಳಿದಳು.

ಸರಳಾ—ನೀನು ಇದ್ದಹಾಗೆಯೇ ನಿನ್ನ ಹಾಡೂ ಇರುವುದು. ಈ ಮಾತು ಹೋಗಲಿ, ನಿನ್ನ ಗೆಳತಿಯ ಹೆಸರೇನು ? ವರನಾರು ?

ಮನೋರಮಾ—ಗೆಳತಿಯ ಹೆಸರು ತರಳಕುಮಾರಿ. ಆಕೆಯ ವರನಾದರೋ ಬಲು ಚೆಲುವನು. ಅವನು ಎಷ್ಟು ಸುಂದರನೋ ಅವನ ಮಾತೂ

ಅಷ್ಟು ಮಧುರವು, ಅವನ ಊರು, ಕುಲ, ಗೋತ್ರವಾವುದೂ ನನಗೆ ಗೊತ್ತಿಲ್ಲ. ಅವನು ನಮ್ಮೂರಿನವನಂತೂ ಅಲ್ಲ.

ಸರಳಾ—ಅವನಾರಿರಬಹುದು ?

ಮನೋರಮಾ—ಇದನ್ನೆಲ್ಲಾ ಆರು ಕೇಳಿಕೊಂಡು ಕುಳಿತುಕೊಳ್ಳುವರು ? ಅವನನ್ನು ನೋಡಿದ ಕೂಡಲೆ, ಆವ ಹೆಂಗುಸಿಗಾದರೂ ಆತನನ್ನೇ ವರಿಸಬೇಕೆಂಬ ಕುತೂಹಲವುಂಟಾಗುವುದು. ನೀನು ನೋಡಿದರಂತೂ, ಅವನನ್ನು ಎಂದಿಗೂ ಬಿಡಲಾರೆ.

ಸರಳಾ—(ನಸುನಗುತ್ತಾ) ಮನು! ಕಂಡಕಂಡವರ ರೂಪಿನಲ್ಲಿ ನಾನು ನಿನ್ನ ಹಾಗೆ ಮೋಹಗೊಳ್ಳುವಷ್ಟು ಪಾಪಿನಿಯಲ್ಲ. ನಾನಾದರೋ ಒಬ್ಬನನ್ನು ಮನಸ್ಸಿನಿಂದಲೇ ವರಿಸಿಬಿಟ್ಟಿರುವೆನು. ಒಂದುಸಲ ಒಬ್ಬನನ್ನು ವರಿಸಿದ ಮೇಲೆ ಮತ್ತೊಬ್ಬನನ್ನು ವರಿಸುವುದು ಭಾರತ ಮಹಿಳೆಯರಿಗೆ ಧರ್ಮವಲ್ಲ. ಕಾಯದಿಂದಲೂ, ವಾಕ್ಕಿನಿಂದಲೂ, ಮನಸ್ಸಿನಿಂದಲೂ ನಾನು ಒಬ್ಬನಿಗೆ ಆತ್ಮಸಮರ್ಪಣೆ ಮಾಡಿದ ಮೇಲೆ, ಮತ್ತೊಬ್ಬನನ್ನು ವರಿಸಲು ನನಗೆ ಸ್ವಾತಂತ್ರ್ಯವೆಲ್ಲಿಯದು ? ವರಿಸುವುದಕ್ಕೆ ತಾನೇ ನಾನಾರು ? ನನ್ನ ವಿಷಯವಧಂತಿರಲಿ, ವರನ ಹೆಸರಾದರೂ ಏನು ?

ಮನೋರಮಾ—ವಿನಯಕುಮಾರನಂತೆ.

ಸರಳೆಯು ವಿನಯಕುಮಾರನ ಹೆಸರನ್ನು ಕೇಳಿದಳು. ಅದು ಅವಳಿಗೆ ಪೂರ್ವಪರಿಚಿತವಾದ ಹೆಸರಾಗಿದ್ದಿತು. ಸರಳೆಯು ವಿನಯಕುಮಾರನೆಂಬ ಹೆಸರನ್ನು ಕೇಳಿದ ಮಾತ್ರದಿಂದಲೇ, ಅವಳ ಮೈಯ್ಯ ರಕ್ತವು ನರಗಳಲ್ಲಿ ವೇಗವಾಗಿ ದರದರನೆ ಹರಿಯಲಾರಂಭವಾಯಿತು. ಬಳಿಕ ಅವಳ ಅಂಗಾಂಗಗಳೆಲ್ಲವೂ ಅರಳಿಯ ಎಲೆಯಂತೆ ನಡುಗಿದುವು, ಬಾಯಿ ಒಣಗಿತು, ಮಾತು ನಿಂತುಹೋಯಿತು. ಸರಳೆಯು ಕೊಂಚ ಹೊತ್ತು ಈ ಅವಸ್ಥೆಯಲ್ಲಿ ಮೌನವಾಗಿದ್ದು,—"ಮನು! ಆತನಿಗೆ ವಯಸ್ಸು ಎಷ್ಟಾಗಿರಬಹುದು?" ಎಂದು ಕೇಳಲಾಗಿ, ಮನೋರಮೆಯು,—"ಆತನಿಗೆ ೨೨-೨೪ ವರ್ಷ ವಯಸ್ಸಿರಬಹುದು," ಎಂದು ಉತ್ತರವಿತ್ತಳು.

ಸರಳಕುಮಾರಿಗೆ ಇನ್ನು ತಡೆಯಲಾರದೇ ಹೋಯಿತು. ತರುವಾಯ ಸರಳೆಯು ಮನೋರಮೆಗೆ ತನ್ನ ಪೂರ್ವವೃತ್ತಾಂತವೆಲ್ಲವನ್ನೂ ತಿಳಿಸಿದಳು. ಅವಳು ಚಿಂತಿಸಿದ್ದ ಹಾಗೆಯೇ ಎಲ್ಲವೂ ನಡೆದಿದ್ದಿತು.

ಸರಳೆಯು ಚಿಂತಿಸಿದ ಬಗೆ:—ಈ ನೂತನ ವರನಾದ ವಿನಯಕುಮಾರನೇ ತನ್ನ ವಿನಯ ಕುಮಾರನು. ಆದರೆ ಈಗ ನನ್ನವನಲ್ಲ. ನನ್ನ ಅಮೂಲ್ಯವಾದ ಜೀವರತ್ನವನ್ನು ಈಗ ಮತ್ತೊಬ್ಬಳು ಅಪಹರಿಸಿಬಿಟ್ಟಳು. ಈ ಜನ್ಮದಲ್ಲಿ ಮತ್ತೆ ಆ ಜೀವರತ್ನವನ್ನು ಹೊದ್ದಲು ನನ್ನ ಅದೃಷ್ಟದಲ್ಲಿ ಇಲ್ಲದೇ ಹೋಯಿತು. ಹೋಗಲಿ, ತನಗಿಲ್ಲದಿದ್ದರೆ ಬೇಡ. ನನ್ನ ಜೀವ ರತ್ನವು ಎಲ್ಲಿಯಾದರೂ ಜೀವಂತನಾಗಿದ್ದರೆ ಸಾಕು. ಪ್ರಿಯವಾದ ವಸ್ತುವು ಬದುಕಿರುವುದಾದರೆ, ಎಂದಾದರೊಂದು ದಿನ ಕಣ್ಣಿನಿಂದಾದರೂ ನೋಡಬಹುದು. ವಿನಯಕುಮಾರನು ಮಹಾವಿಪತ್ತಿನಿಂದ ಪಾರಾಗಿ ತನ್ನ ದೇಶಕ್ಕೆ ಮತ್ತೆ ಬಂದಿರುವನಲ್ಲಾ! ಹೀಗಾಗಿರುವುದಾದರೆ, ಆತನು ನನ್ನನ್ನು ನೋಡಲು ಎಂದಾದರೊಂದು ದಿನ ಬಂದರೂ ಬರಬಹುದು. ಆಗ ನಾನು ಅವನಿಗೆ ನನ್ನ ಮುಖವನ್ನು ಹೇಗೆ ತೋರಿಸಲಿ? ಹಾ, ವಿಧಿಯೇ! ನನ್ನ ಹಣೆಯ ಬರಹವು ಈ ರೀತಿಯಾಗಿ ಪರಿಣಮಿಸಿತೇ!"

ಸರಳೆಯು ಹೀಗೆ ತನ್ನಲ್ಲಿ ತಾನೇ ಚಿಂತಿಸಿ ಚಿಂತಿಸಿ ತಲೆ ತಿರುಗಿದವಳಾಗಿ ಒಂದು ಕ್ಷಣಕಾಲದ ವರೆಗೆ ಸುಮ್ಮನೇ ಕುಳಿತಿದ್ದಳು. ಮನೋರಮೆಯು ಇದನ್ನು ನೋಡಿ,—"ಸರಳೆ! ಇದೇಕೆ ಇಷ್ಟು ಹೆದರುತ್ತಲಿರುವೆ? ಸುಸ್ಥೆಯಾಗಿರುವೆಯೋ ಇಲ್ಲವೋ?" ಎಂದು ಪ್ರಶ್ನೆಮಾಡಿದಳು.

ಸರಳಾ—ಮನು! ನನ್ನ ತಲೆಯು ನೋಯುತ್ತಿರುವುದು. ಅದರ ಯಾತನೆಯಿಂದ ನಾನು ಕುಳಿತಿರಲಾರೆನು. ನಾನು ಹೋಗಿ ಮಲಗಿಕೊಳ್ಳುವೆನು. ನೀನೂ ನನ್ನೊಡನೆಯೇ ಮಲಗಿಕೊಳ್ಳುವೆ, ಬಾ

ಮನೋರಮಾ—ಇಲ್ಲ. ನನ್ನನ್ನು ಬಲಾತ್ಕರಿಸಬೇಡ. ಈಗ ನಾನು ಅತ್ತೆಯ ಮನೆಗೆ ಬಂದಿರುವುದು ನಿನಗೆ ಗೊತ್ತಿಲ್ಲವೆ? ನನಗೆ ಹೊತ್ತಾಯಿತು, ಹೊರಡುವೆನು.

ಸರಳಾ—ಹಾಗಾದರೆ ನಾಳೆಯ ಬೆಳಗ್ಗೆ ಬರುವೆಯ?

ಮನೋರಮಾ—ಬರದೇ ಏನು? ತಪ್ಪದೇ ಬರುವೆನು.

ಮನೋರಮೆಯು ಹೀಗೆ ಹೇಳಿ ಹೊರಟು ಹೋದಳು. ಬಳಿಕ ಸರಳೆಯು ಹಾಸುಗೆಯ ಮೇಲೆ ಮಲಗಿದಳು, ಆದರೆ ಅವಳ ಕಣ್ಣುಗಳಿಗೆ ನಿದ್ದೆ ಹತ್ತಲಿಲ್ಲ. ರಾತ್ರಿಯು ಹೆಚ್ಚಿದ ಹಾಗೆಲ್ಲಾ ಅವಳ ಮನೋವ್ಯಥೆಯೂ ಹೆಚ್ಚುತ್ತಿದ್ದಿತು. ಸರಳೆಯು ಹಾಸುಗೆಯ ಮೇಲೆ ಮಲಗಿರಲು ಇಷ್ಟವಿಲ್ಲ

ದವಳಾಗಿ ಕಿಟಕಿಯ ಹತ್ತಿರಕ್ಕೆ ಹೋಗಿ ಹೊರಗೆ ನೋಡುತ್ತಾ ಕುಳಿತುಕೊಂಡಳು. ಚಂದ್ರನು ನೀಲಾಕಾಶದಲ್ಲಿ ತನ್ನ ಮನೋಹರವಾದ ಗಂಭೀರವಾದ ಮೂರ್ತಿಯೊಡನೆ ಸಂಚಾರಮಾಡುತ್ತಿರುವನು, ಬೆಳ್ದಿಂಗಳು ದಿಗಂತವನ್ನು ವ್ಯಾಪಿಸಿಕೊಂಡು ನಲಿದಾಡುತ್ತಿರುವುದು ನಕ್ಷತ್ರಗಳು ಕಿಲಕಿಲನೆ ನಗುತ್ತಾ ತಮ್ಮ ಆನಂದವನ್ನು ತೋರ್ಪಡಿಸುತ್ತಿರುವುವು. ನದಿಯು ಚಂದ್ರಿಕಾ ವಿಹಾರಕ್ಕೋಸ್ಕರ ತನ್ನ ಪ್ರಿಯನನ್ನು ಕರೆತರಲು ಹರಿದುಹೋಗುತ್ತಿತ್ತು. ಅದರ ವಕ್ಷದ ಮೇಲೆ ನಾನಾತರದ ನಾವೆಗಳು ಚಂದ್ರಿಕಯ ಸೊಬಗನ್ನು ಅನುಮೋದಿಸುವುದಕ್ಕಾಗಿ ತಲೆಗಳನ್ನು ಅಲ್ಲಾಡಿಸುತ್ತವೆಯೋ ಎಂಬಂತೆ ಕಾಣಬರುತ್ತಿದ್ದುವು ನಾವೆಗಳನ್ನು ನಡೆಯಿಸುತ್ತಿದ್ದವರಲ್ಲಿ ಒಬ್ಬನು ಆನಂದದಿಂದ ಮೃದುಮಧುರವಾಗಿ ಗಾನಮಾಡಿದನು.

ಬಾರೊ ದೊರೆ ಮುಖತೋರೊ ಹರೇ ' ॥ ಪ ||
ಮಾರನ ತಾಪವ ಸಹಿಸೆನು ಹಾ ಹಾ || ಅನು ||

ಕಿಟಕಿಯ ಕಡೆ ಕುಳಿತುಕೊಂಡು ಪ್ರಕೃತಿಯ ಸೌಂದರ್ಯವನ್ನು ನೋಡುತ್ತಿದ್ದ ಸರಳೆಯ ಕಿವಿಗೆ ಈ ಗಾನವು ಕೇಳಿಸಿತು ಸರಳೆಯು ಇದನ್ನು ಕೇಳಿದಾಕ್ಷಣವೇ ಅತ್ತುಬಿಟ್ಟಳು ಅತ್ತು ಅತ್ತು ಸಾಕಾಗಿ ತನ್ನಷ್ಟಕ್ಕೆ ತಾನೇ ಮಾತನಾಡಿಕೊಂಡಳು

"ನಾನು ಇನ್ನು ಬದುಕಿರಲಾರೆನು ನಾನು ಸಾಯುವುದೇ ಲೇಸು. ನನ್ನ ಪ್ರಾಣಗಳಾದರೋ ತುಟುಗುಟ್ಟುತ್ತಿರುವುವು ನಾನು ಪ್ರಯಾಸಪಟ್ಟಾದರೂ ಈ ಹಾಳು ಪ್ರಾಣಗಳನ್ನು ಕಾಪಿಡುವುದರಿಂದ ಬರುವ ಭಾಗ್ಯವೇನು? ನಾನು ಆರಿಗಾಗಿ ಪ್ರಾಣವನ್ನಾದರೂ ಬಿಡಲು ಸಿದ್ಧಳಾಗಿರುವೆನೋ ಆತನು ಬದುಕಿರುವುದಾದರೂ ನನ್ನವನಲ್ಲದೇ ಹೋದನು. ವಿನಯನು ಬದುಕಿರುವನೇ ? ನೂತನ ವಿನಯಕುಮಾರನು ಆರಿರಬಹುದು ? ವಿನಯನು ಹೇಗಾದರೂ ಇರಲಿ, ಅವನು ನನ್ನವನೇ ಅಹುದು ಪ್ರಾಣೇಶ್ವರ ! ನಿರ್ಭಾಗ್ಯಳಾದ ನನ್ನನ್ನು ತ್ಯಾಗಮಾಡಿ ಮತ್ತೊಬ್ಬಳನ್ನು ಮದುವೆಯಾದೆಯಾ ? ಇದರಿಂದ ನನಗೆ ತುಂಬಾ ಸಂತೋಷವೇ ಆಯಿತು. ನಿನಗೆ ಸುಖವಾದರೆ ನನಗೂ ಸುಖವೇ ಸರಿ. ಆದರೆ, ಹೃದಯವಲ್ಲಭ! ಈ ದಾಸಿಯನ್ನು ಮಟ್ಟಿಗೆ ಮರೆಯಬೇಡ, ಕಂಡೆಯಾ ? ಈ ನಾನು ನಿನಗೆ ಅಕ್ರೀತದಾಸಿಯಾಗಿರುವೆನು. ನಾನು ನಿನ್ನನ್ನು ಆವಾಗಲೂ ಸೇವಿಸಿಕೊಂಡಿರುವೆನು. ನಾನು ನಿನ್ನ

ಬಳಿಯಲ್ಲಿರುವುದಾದರೆ, ನಿನ್ನ ಸಹಧರ್ಮಿಣಿಗೆ ಕೋಪ ಬರಬಹುದು. ಆವ ಬಗೆಯಲ್ಲಿಯೂ ಆಕೆಗೆ ಕೋಪತಾಪಗಳುಂಟಾಗದಂತೆ ನಾನು ನೋಡಿಕೊಳ್ಳುವೆನು. ನಾನು ನಿನಗಾಗಿ ಆಕೆಯ ಸೇವೆಯನ್ನೂ ಮಾಡುವೆನು."

"ಪ್ರಾಣೇಶ್ವರನ ಪ್ರಿಯಭಾರ್ಯೆ ! ವಿನಯಕುಮಾರನನ್ನು ನಾನು ಹೇಗೆ ಸೇವಿಸುವೆನೋ, ನಿನ್ನನ್ನೂ ಹಾಗೆಯೇ ಸೇವಿಸುವೆನು. ನೀನು ಮಟ್ಟಿಗೆ ನನ್ನನ್ನು ಪರಿತ್ಯಾಗ ಮಾಡಕೂಡದು. ನೀನು ಎಡದ ಕಾಲಿನಿಂದ ತೋರಿಸಿದುದನ್ನು ನಾನು ತಲೆಯಿಂದ ನೆರವೇರಿಸಿಕೊಡುವೆನು. ನೀನು ಮಟ್ಟಿಗೆ ನನ್ನಲ್ಲಿ ಆಗ್ರಹ ಮಾಡಿ ನನ್ನನ್ನು ಪರಿತ್ಯಾಗ ಮಾಡಕೂಡದು. ನಾನು ನಿನ್ನಲ್ಲಿ ಸೆರಗೊಡ್ಡಿ ಬೇಡುವೆನು. ನೀನು ಈ ಪ್ರಾಣಭಿಕ್ಷೆಯನ್ನು ಕೊಡು."

ಸರಳೆಯು ಹೀಗೆಲ್ಲಾ ಮಾತನಾಡಿಕೊಳ್ಳುತ್ತಿರುವ ಸಮಯದಲ್ಲಿ ಸರೋಜಿನಿಯು ಒಯ್ಯಾರದಿಂದ ಬಂದು,—ಸರಳೆ! ನಿಮ್ಮಣ್ಣನು ನಿನ್ನನ್ನು ಕರೆವರು," ಎಂದಳು.

ಸರಳೆಯು ಎಚ್ಚೆತ್ತು ತಟ್ಟನೆ ಎದ್ದು ನಿಂತುಕೊಂಡು ಸೆರಗನ್ನು ಸರಿಪಡಿಸುತ್ತಾ,—"ಸರು ! ಅಣ್ಣಾ ಕರೆವನೇ ?" ಎಂದಳು

ಸರಳಕುಮಾರಿಯು ಅಳುತ್ತಿದ್ದುದೂ, ಪರಿಪರಿಯಾಗಿ ಚಿಂತಿಸುತ್ತಿದ್ದುದೂ ಸರೋಜಿನಿಗೆ ಹೇಗೋ ಗೊತ್ತಾಗಿ ಅವಳ ದುರದೃಷ್ಟವನ್ನು ನಿಂದಿಸುತ್ತಾ,—" ಮಗು ! ಅವರು ನನ್ನ ಕೋಣೆಯಲ್ಲಿರುವರು ನೀನು ಬಾ," ಎಂದು ಹೇಳಿ, ಸರಳೆಯನ್ನು ತನ್ನ ಜತೆಯಲ್ಲಿಯೇ ಕರೆದುಕೊಂಡು ಹೊರಟಳು. ಸರಳೆಯು ಜಾನಕೀನಾಥನನ್ನು ಕಂಡೊಡನೆಯೇ,— " ಅಣ್ಣಾ! ನನ್ನನ್ನು ಕರೆದುದೇತಕೆ ?" ಎಂದು ಕೇಳಿದಳು.

ಜಾನಕೀನಾಥ—ವಿನಯನು ಹಿಂದಿರುಗಿ ಬಂದನಂತೆ ನೀನು ಈ ಸಂಗತಿಯನ್ನು ಕೇಳಿದೆಯೇನು ?

ಸರಳಾ—ಗೊತ್ತಾಯಿತು. ಮನೋರಮೆಯು ಎಲ್ಲವನ್ನೂ ನನಗೆ ತಿಳಿಸಿ ಹೇಳಿದಳು.

ಜಾನಕೀ—ಮನೋರಮೆಯಾರು ?

ಸರಳಾ—ನಮ್ಮ ಪಕ್ಕದ ಮನೆಯವಳು.

ಜಾನಕೀ—ಗೊತ್ತಾಯಿತು. ವಿನಯನಿಗೆ ಮದುವೆಯೂ ಆಯಿತಂತೆ.

ಸರಳಾ—ಅದೂ ತಿಳಿದು ಬಂದಿತು.

ಜಾನಕೀ—ಮುಂದೇನ ಮಾಡುವೆ ?

ಸರಳೆಯು ನಾಚುಗೆಯಿಂದ ಉತ್ತರ ಕೊಡಲಿಲ್ಲ.

ಜಾನಕೀ—ಮತ್ತಾರನ್ನಾದರೂ ಮದುವೆಯಾಗಬೇಕಾದೀತು. ಈಗ ಮತ್ತೊಬ್ಬನನ್ನು ಮದುವೆಯಾಗುವುದರಿಂದ ದೋಷವೇನೂ ಇರಲಾರದು.

ಸರಳೆಯು ಮೊದಲಿನಂತೆಯೇ ಸುಮ್ಮನಿದ್ದುಬಿಟ್ಟಳು.

ಸರೋಜಿನಿ—(ಗಂಡನನ್ನು ಕುರಿತು) ನಿಜ, ಆದರೂ ಅವಳು ಮತ್ತೊಬ್ಬನನ್ನು ಮದುವೆಯಾಗಲಾರಳು. ನಾನು ಬೇಕಾದರೆ ಮತ್ತೊಂದು ಸಲ ಮದುವೆಯಾಗುವೆನು.

ಜಾನಕೀ—ಕಾರಣವೇನು ?

ಸರೋಜಿನಿ—ನೀವು ಶಿವಶಂಕರ ದೀಕ್ಷಿತರ ಮಗಳನ್ನು ಪ್ರೀತಿಸುವಿರೆಂದು.

ಜಾನಕೀ—ಸರಿಸರಿ. ಹಾಗಾದರೆ ನಿನಗೆ ತಕ್ಕ ವರನನ್ನು ತಂದು ಕೊಡುವೆನು.

ಸರೋಜಿನಿ—ವರನಾದರೂ ಎಂತಹವನಿರಬಹುದು ?

ಜಾನಕೀ—ಅಚ್ಯುತಾನಂತ ಗೋವಿಂದಶರ್ಮನಿಗೆ ಮಗನೊಬ್ಬನಿರುವನು. ನೀನು ಅವನನ್ನು ಮದುವೆಯಾದರೆ, ನಾನು ಶಿವಶಂಕರ ದೀಕ್ಷಿತರ ಮಗಳನ್ನು ಪ್ರೀತಿಸುತ್ತಿರುವುದಕ್ಕೆ ತಕ್ಕ ಪ್ರತೀಕಾರವನ್ನು ಮಾಡಿದಂತಾಗುವುದು. ಸರೋಜ! ನಿನ್ನ ಹಾಸ್ಯದ ಮಾತು ಹಾಗಿರಲಿ. ಈಗ ವಿನಯಕುಮಾರನು ತರಳಕುಮಾರಿಯನ್ನು ಪ್ರೀತಿಸುತ್ತಿರುವಲ್ಲಿ, ಸರಳಕುಮಾರಿಯು ಏನ ಮಾಡತಕ್ಕುದಿದೆ ?

ಸರೋಜಿನಿ—ಅದು ನನಗೆ ತಿಳಿಯದು.

ಜಾನಕೀ—ಕಾಲಾಕಾಲವೆಂಬುದನ್ನರಿಯದೆ ಹಾಸ್ಯಮಾಡುವುದೊಂದೇ ನಿನಗೆ ಗೊತ್ತುಂಟು ನಿನ್ನನ್ನು ಕಾಣದವರಾರು ? ಅದಂತಿರಲಿ. ಈಗ ತಾನೇ ವಿನಯಕುಮಾರನಿಂದ ನನ್ನಹೆಸರಿಗೊಂದು ಪತ್ರವು ಬಂದಿರುವುದು.

## ಪತ್ರದ ಒಕ್ಕಣೆ.

ಪ್ರಿಯ ಮಿತ್ರ, ಜಾನಕೀನಾಥ !

ಸ್ವಸ್ತಿ! ಕೆಲವು ಕಾಲದಿಂದೀಚೆಗೆ ನಾನು ದುರಂತವಾದ ಕಷ್ಟನಷ್ಟಗಳನ್ನನುಭವಿಸಿದೆನು. ಅವುಗಳನ್ನು ಕಾಗದದಲ್ಲಿ ಬರೆಯಲು ಸಾಧ್ಯವಲ್ಲ.

ನಾನು ಕಾಲಚಕ್ರದ ಧರ್ಮಸಂಕಟಕ್ಕೆ ಸಿಕ್ಕಿಬಿದ್ದು, ಸರ್ವಪ್ರಹರಣಾಯುಧ ಮಹಾಶಯರ ಕುವರಿಯಾದ ತರಳಕುಮಾರಿಯನ್ನು ವಿವಾಹಮಾಡಿಕೊಳ್ಳ ಬೇಕಾಗಿ ಬಂದು ಸೇರಿತು. ವಿಧಿವಿಲಾಸವನ್ನು ಮೀರಬಲ್ಲವರಾರು ? ಚಿ| ಸರ ಳಕುಮಾರಿಗೆ ವಿವಾಹವಾಯಿತೆ ? ಆಕೆಗೆ ನನ್ನ ಮಂಗಳಾಶೀರ್ವಾದವನ್ನು ತಿಳಿಸುವುದು. ನಿನ್ನ ಧರ್ಮಪತ್ನಿಯಾದ ಸರೋಜಿನೀದೇವಿಯು ನಾರಿಯರ ಧರ್ಮವನ್ನಾಚರಿಸಿಕೊಂಡು ಆರೋಗ್ಯವಾಗಿರುವುದಕ್ಕೆ ತಿಳಿಸಬೇಕು. ಈಗ ನಾನು ಕ್ಷೇಮದಿಂದಿರುವೆನು. ಮುಂದಣ ತಿಂಗಳಲ್ಲಿ ಒಂದು ಶುಭಮುಹೂ ರ್ತದಲ್ಲಿ ನಾನು ರಾಮವಾಡಿಗೆ ಬರುವೆನು ಆಗ ನಿನ್ನ ದರ್ಶನವನ್ನು ತೆಗೆ ದುಕೊಳ್ಳಬೇಕೆಂದಿರುವೆನು, ಇತಿ, ನಿರ್ಭಾಗ್ಯ ವಿನಯಕುಮಾರ.

ಜಾನಕೀನಾಥನು ಈ ರೀತಿಯಲ್ಲಿ ಬರೆದಿದ್ದ ಕಾಗದವನ್ನು ಓದಿದನು. ಸರೋಜಿನೀ ಸರಳಕುಮಾರಿಯರಿಬ್ಬರೂ ಕಿವಿಯಾರೆ ಓದಿದುದನ್ನು ಕೇಳಿದರು. ಆಗ ಸರಳೆಯ ಮನದಲ್ಲಿ ಉಂಟಾದ ಭಾವವು ಈ ಬಗೆಯಾಗಿದ್ದಿತು —

"ಏನಚ್ಚರಿ! ವಿನಯನು ನನ್ನನ್ನು ಮರತಿರುವನೇ! ಪುರುಷರ ಸ್ವಭಾ ವವನ್ನರಿವುದು ಕಷ್ಟವು ಈಗ ನಾನೇನ ಮಾಡಬೇಕು ? ಮುಂದಣ ಪರಿಣಾ ಮವೇನು? ಅತ್ತು ಅತ್ತು ಜನ್ಮವನ್ನು ನೀಗಿಬಿಡಲೆ ? ಅದಾರು ಮಾಡುವ ಕೆಲಸವು ? ವಿನಯನು ನನ್ನನ್ನು ಮರೆತರೂ, ನಾನು ಮಟ್ಟಿಗ ಆತನನ್ನು ಎಂದೆಂದಿಗೂ ಮರೆಯಲಾರೆನು ಆಶ್ರಯಿಸಿಕೊಂಡಿರುವ ಲತೆಯು ಗಿಡ ವನ್ನು ಬಿಟ್ಟು ಒದುಕುವ ಸಂಭವವೆಲ್ಲಿಯದು!"

ಸರಳಕುಮಾರಿಯು ಕಾಗದದ ಒಕ್ಕಣೆಯನ್ನು ಕೇಳಿದ ಬಳಿಕ ತನ್ನ ಕೋಣೆಗೆ ಬಂದುಬಿಟ್ಟಳು.



# ಹದಿಮೂರನೆಯ ಲಂಬಕ.



## ಪತ್ರಿಕಾ ಪ್ರಸಂಗ.

ವಿನಯಕುಮಾರನು ಹೊಸ ಹೆಂಡಿತಿಯೊಡಗೂಡಿ ತನ್ನ ಗ್ರಾಮಕ್ಕೆ ಹಿಂದಿರುಗಿ ಬಂದನು. ವಿನಯನು ಅತ್ಯಾನಂದದಿಂದ ತನ್ನ ಮನೆಯೊಳಗ ಪ್ರವೇಶ ಮಾಡಿದ ಕೂಡಲೆ, ತಂದೆ ಗತಿಸಿಹೋದ ಸಂಗತಿಯು ತಿಳಿಯ

ಬಂದಿತು. ಪಿತೃವಿಯೋಗದಿಂದ ವಿನಯನು ಬಹಳವಾಗಿ ವ್ಯಸನಪಟ್ಟನು. ಒಂದು ಕಡೆ ತಂದೆ ಸತ್ತ ವ್ಯಸನವೂ, ಮತ್ತೊಂದು ಕಡೆ ಅಚ್ಯುತಾನಂತ ಗೋವಿಂದನ ಸಹಿಸಕೂಡದ ಅತ್ಯಾಚಾರವೂ ವಿನಯನನ್ನು ನರಕಯಾತನೆಗೆ ಗುರಿಮಾಡಿದುವು. ತಂದೆಯ ಮರಣದಿಂದುಂಟಾದ ಶೋಕವಾದರೂ ಕೆಲ ಕಾಲಾನಂತರದಲ್ಲಿ ನಿವಾರಣೆಯಾಗಲು ಸಂಭವವುಂಟು, ಅಚ್ಯುತನ ಅತ್ಯಾಚಾರವಾದರೋ ಗಾಳಿಯ ಒತ್ತಾಸೆಯಿಂದ ಮೆಯ್ಯುಬ್ಬಿದ ಕಾಳ್ಕಿಚ್ಚಿನಂತೆ ದಿನದಿನಕ್ಕೂ ಹೆಚ್ಚುತಲಿದ್ದಿತು. ವಿನಯನು ಸ್ವದೇಶವನ್ನು ತ್ಯಾಗಮಾಡಿ ಎಷ್ಟೋ ದಿನಗಳಾಗಿ ಹೋಗಿದ್ದರೂ, ಅಚ್ಯುತನ ಯಮಶಾಸನವು ಮಟ್ಟಿಗೆ ಹೊಸಹೊಸದಾಗಿ ಎಲ್ಲರ ಕಿವಿಗಳಲ್ಲಿಯೂ ಜಾಗರಿತವಾಗಿದ್ದಿತು. ಈ ಪ್ರಬಲವಾದ ಕಟ್ಟ ಕೂಗಿನಿಂದ ವಿನಯನಿಗೆ ಉತ್ತಾರಣೆಯೇ ಇಲ್ಲದಂತಾಯಿತು. ಕಾರಣವೇನೆಂದರೆ—ವಿನಯನು ದೇಶತ್ಯಾಗಿಯಾದ ಕೂಡಲೆ, ಅವನು ಜಾತಿ ಕೆಟ್ಟುಹೋದನೆಂದೂ, ಒಂದುವೇಳೆ ಅವನು ತನ್ನ ದೇಶಕ್ಕೆ ಹಿಂದಿರುಗಿ ಬರುವುದಾದರೂ ಅವನನ್ನು ಕುಲಚ್ಯುತನನ್ನಾಗಿ ಮಾಡಬೇಕೆಂದೂ, ಇತರರಾರೂ ಅವನೊಡನೆ ಸದ್ವ್ಯವಹಾರ ಮಾಡಕೂಡದೆಂದೂ, ದುರ್ದಾಂತನಾದ ಜೋಡೀದಾರನು ಯಮಶಾಸನವನ್ನು ಪ್ರಚಾರಪಡಿಸಿದ್ದನು ಆದುದರಿಂದ ಈ ಶಾಸನಕ್ಕನುಗುಣವಾಗಿಯೇ ಆರೂ ವಿನಯನನ್ನು ಮಾತನಾಡಿಸದೇ ಹೋದರು. ಇಷ್ಟು ಬಗೆಯಲ್ಲಿ ವಿನಯನಿಗೆ ತೊಂದರೆಗಳುಂಟಾಗಿದ್ದರೂ, ಸರಳಕುಮಾರಿಯ ದಿವ್ಯಮೂರ್ತಿ ಮಟ್ಟಿಗೆ ಅವನ ಹೃದಯದಿಂದ ಅಳಿಸಿ ಹೋಗಿರಲಿಲ್ಲ ಇಷ್ಟು ಬೇಗನೆ ಅಳಿಸಿ ಹೋಗಲು ಸಾಧ್ಯವೆಂದರೇನು? ಆಕೆಯ ಸ್ವಾರ್ಥರಹಿತವಾದ ಪ್ರೀತಿಯೂ, ಅಕೃತ್ರಿಮವಾದ ರೂಪರಾಶಿಯೂ ಎಂದಿಗಾದರೂ ಮರೆವುದೆಂದರೇನು? ಬಾಲಿಕೆಯಾದ ಸರಳಕುಮಾರಿಯು ವಿನಯನನ್ನು ಹೊರತು ಮತ್ತಾರನ್ನೂ ಕಂಡರಿಯಳು. ವಿನಯನ ಅಭಾವದಲ್ಲಿ ಅವಳು ಕಂಗೆಟ್ಟು ಕೊರಗಿ ಕೊರಗಿ ಸತ್ತುಹೋಗುವುದೇನೋ ನಿಜವಾದುದೇ ಸರಿ. ಸರಳೆಯು ಆರನ್ನು ಸಂಪೂರ್ಣ ಭಾವದಿಂದ ಪ್ರೀತಿಸುವಳೋ, ಅಂತಹ ವಿನಯನನ್ನು ಹತವಿಧಿಯು ಸುಖಶಾಂತಿಹೀನನನ್ನಾಗಿ ನಿರ್ಮಾಣ ಮಾಡಿರುವನು. ಹಾಗಾಗದಿದ್ದರೆ, ಆತನನ್ನೇ ನಂಬಿ ನಿರ್ವ್ಯಾಜವಾದ ಪ್ರೀತಿಯನ್ನು ತೋರಿಸುತ್ತಿರುವ ಸರಳೆಯ ವಿಷಯದಲ್ಲಿ ಇಷ್ಟು ನಿರ್ದಯನಾಗಿರಲು ಕಾರಣವೇನು? ವಿನಯನು ಮತ್ತೊಬ್ಬಳನ್ನು ವಿವಾಹಮಾಡಿಕೊಂಡ

ನೆಂದು ಸರಳೆಗೆ ತಿಳಿದರೆ, ಅವಳು ತನ್ನ ಸಣ್ಣದಾದ ಹೃದಯದ ಮಧ್ಯದಲ್ಲಿ ಎಷ್ಟು ಯಾತನೆಯನ್ನನುಭವಿಸಬೇಕಾದೀತು ? ಇದು ಪುರುಷಮಾತ್ರದವನಿಗೆಂದಿಗೂ ತಿಳಿಯತಕ್ಕ ವಿಷಯವೇ ಅಲ್ಲವು.

ವಿನಯನು ಬಗೆಬಗೆಯ ಸಂಕಟಕ್ಕೊಳಗಾಗಿ, ಆವುದರಿಂದಲೂ ಪಾರಗಾಣದೆ ಮೂಢನಂತೆ ಮನೆಯ ಮುಂಗಡೆಯಲ್ಲಿ ಬಂದು ನಿಂತುಕೊಂಡನು. ಆಗ ಸೇವಕನೊಬ್ಬನು ಬಂದು, ಪತ್ರವೊಂದನ್ನು ವಿನಯನ ಕೈಗೆ ಕೊಟ್ಟು ಹೊರಟುಹೋದನು. ಅದು ಸರಳೆಯು ಬರೆದು ಕಳುಹಿದ ಪತ್ರವಾಗಿದ್ದಿತು. ವಿನಯನು ಅತ್ಯಾದರದಿಂದ ಅದನ್ನು ಬಿಚ್ಚಿ ಓದಲಾರಂಭಿಸಿದನು. ಆಗ ವಿನಯನ ವ್ಯಥೆಯನ್ನು ವರ್ಣಿಸಿ ತೀರದು. ಅವನ ಕಣ್ಣುಗಳಲ್ಲಿ ಕತ್ತಲು ಕವಿಯಿತು, ಕೈಕಾಲುಗಳಲ್ಲಿ ತ್ರಾಣವೇ ಹೋಗಿಬಿಟ್ಟುದು, ಎದೆಯಲ್ಲಿ ಅವಲಕ್ಕಿ ಕುಟ್ಟಿದಂತಾಯಿತು. ಇದಾದ ಕೂಡಲೆ, ತಲೆಯು ತಿರುಗಿದಂತಾಗಿ ವಿನಯನು ಕೆಳಗೆ ಕುಳಿತುಬಿಟ್ಟನು. ವಿನಯನು ಮತ್ತೆ ಮೊದಲಿನಂತೆ ವಿನಯನಾಗುವುದಕ್ಕೆ ಪ್ರಾಯಿಕವಾಗಿ ಒಂದು ಮುಹೂರ್ತಕಾಲ ಹಿಡಿಯಿತು. ತರುವಾಯ ವಿನಯನು ಕೊಂಚಕೊಂಚವಾಗಿ ಚೇತರಿಸಿಕೊಂಡು ಸರಳಕುಮಾರಿಯ ಕಾಗದವನ್ನು ಸಾಂಗವಾಗಿ ಓದಿ ಅದಕ್ಕೆ ಅತಿ ಪ್ರಯಾಸದಿಂದ ಒಂದುತ್ತರವನ್ನು ಬರೆದನು. ನಾವಿಲ್ಲಿ ಅದರ ಪ್ರತಿಯನ್ನು ನಮ್ಮ ಪ್ರಿಯ ಪಾಠಕ ಮಹಾಶಯರ ಅವಗಾಹನೆಗಾಗಿ ತಿಳಿಯಪಡಿಸುವೆವು. ಪತ್ರವು ದೊಡ್ಡದಾದರೂ ವಿಷಯಗರ್ಭಿತವಾದುದರಿಂದ ಎಲ್ಲರೂ ಏಕಭಾವದಿಂದ ಓದತಕ್ಕುದಿದೆ ಈ ಪತ್ರವನ್ನು ಓದುವ ಸುಯೋಗದಿಂದ ಆವ ಸ್ತ್ರೀಪುರುಷರೂ ವಂಚಿತರಾಗಕೂಡದೆಂದು ಗ್ರಂಥಕರ್ತರ ಆಶಯವು.

## ವಿನಯಕುಮಾರನ ಪತ್ರಿಕಾಪ್ರಸಂಗ.

ಪ್ರಾಣಾಧಿಕೆ! ಅತಿ ಪ್ರಯಾಸದಿಂದ ನನ್ನನ್ನು ನಾನೇ ಅವಲಂಬಿಸಿಕೊಂಡು ಈ ಪತ್ರವನ್ನು ಬರೆಯುವೆನು. ಇದರಲ್ಲಿ ನನಗೆ ಪೂರ್ವಾಪರವಾವುದೋ ಗೊತ್ತಿಲ್ಲ, ಗುಣದೋಷಗಳ ಸಂಗತಿಯನ್ನೇ ನಾನರಿಯೆ, ಆದರೂ ನಿನ್ನಲ್ಲಿನ ಪ್ರೀತಿ ಗೌರವಗಳಿಂದ ಉತ್ತೇಜಿತನಾಗಿ ಇಷ್ಟುಮಟ್ಟಿಗಾದರೂ ಪ್ರತ್ಯುತ್ತರವನ್ನು ಬರೆಯಲು ಸಾಹಸವುಳ್ಳವನಾಗಿರುವೆನು.

ಪ್ರಿಯಸಖಿ ! ನಿನ್ನ ವಿಯೋಗದಿಂದ ನನಗೆ ಆಗಬೇಕಾದುದೆಲ್ಲವೂ ಆಗಿಯೇ ಹೋಗಿರುವುದು, ಮತ್ತಾವುದೂ ಉಳಿದಿರಲಿಕ್ಕಿಲ್ಲ. ಮನುಷ್ಯ

ನಾದವನು ಇಹಲೋಕದಲ್ಲಿ ಜನಿಸಿ ಎಷ್ಟರ ಮಟ್ಟಿಗೆ ನರಕಯಾತನೆಯನ್ನು ಅನುಭವಿಸಲು ಸಾಧ್ಯವೋ, ಅಷ್ಟನ್ನೂ ಅನುಭವಿಸಿದೆನು. ನರಕಯಾತನೆ ಯಲ್ಲಿಯೂ ಸ್ವರ್ಗಸುಖವುಂಟೆಂದು ಆರು ತಾನೇ ನಂಬತಕ್ಕವರಾಗಿರುವರು? ಆದರೂ ಈ ಸುಯೋಗವು ನನಗೆ ಮಟ್ಟಿಗೆ ಲಭಿಸಿರುವುದಕ್ಕಾಗಿ ಎಷ್ಟು ಸಂತೋಷಪಟ್ಟರೂ ಸಾಲದು. ನಿರ್ದಯನಾಗಿಯೂ ನಿರ್ಭಾಗ್ಯನಾಗಿಯೂ ಇರುವ ನನ್ನಲ್ಲಿ ನೀನು ಕನಿಕರವಿಟ್ಟು ಬರೆದ ಪತ್ರವು ನನ್ನ ಇಂದ್ರಿಯಗಳಿಗೆ ಎಂತಹ ಸಂತೋಷವನ್ನುಂಟುಮಾಡಿರುವುದೋ ಅದನ್ನು ತಿಳಿಯಪಡಿಸಲು ಭಾಷಾ ಪ್ರಪಂಚದಲ್ಲಿ ಸರಿಯಾದ ಮಾತುಗಳೇ ಇಲ್ಲವು. ನಿನಗೆ ಪರಮಾ ನಂದವುಂಟಾದಲ್ಲಿ ನೀನು ಅದನ್ನು ಆವ ರೀತಿಯಲ್ಲಿ ಅನುಭವಿಸುವೆಯೋ, ಈಗ ನನಗೆ ಅಂತಹ ಸಂತೋಷವುಂಟಾಗಿರುವುದೆಂಬುದನ್ನು ಪರಿಭಾವಿಸಿ ನೋಡು; ಹೀಗಾಗುವುದಾದರೆ, ನನ್ನ ಆನಂದವನ್ನು ಒಂದು ತಿಲಾಂಶದಮ ಟ್ಟಿಗಾದರೂ ತಿಳಿಸಿದಂತಾದೀತು. ನಿನ್ನ ಕಾಗದವನ್ನು ನಾನು ನೂರಾರುಸಲ ಓದಿಯೋದಿ ಆನಂದಪಡುವೆನೆಂದು ನಾನು ಹೇಳಿದರೂ ಅದು ಅತ್ಯುಕ್ತಿಯೆ ನಿಸಲಾರದು. ಪ್ರಿಯತಮೆ! ನನ್ನ ಹೃದಯದಲ್ಲಿ ಈಗ ಉಂಟಾಗುತ್ತಿರುವ ತಾಪವನ್ನು ಆವುದಕ್ಕೆ ಹೋಲಿಸಿ ನೋಡಲಿ? ಬೇಸುಗೆಯ ಬಿಸಲಿನ ತಾಪಕ್ಕೆ ಹೋಲಿಸಬಹುದೇ? ಇಲ್ಲ. ದಗದಗನೆ ಉರಿಯುತ್ತಿರುವ ಬೆಂಕಿಯ ಬಳಿ ಯಲ್ಲಿ ಉಂಟಾಗತಕ್ಕ ಬೇಗೆಯೆಂದು ಹೇಳೋಣವೇ? ಕೂಡದು. ಜಗ ಜ್ಜ್ಯೋತಿಯಾದ ಸೂರ್ಯನನ್ನು ಕಯ್ಯಲ್ಲಿ ಹಿಡಿದುಕೊಳ್ಳುವುದಾದರೆ, ಇಂತಹ ಸಂತಾಪವುಂಟಾಗಬಹುದೇ? ಎಂದಿಗೂ ಇಲ್ಲ. ಹಾಗಾದರೆ ನನ್ನ ಹೃದಯದ ಸಂತಾಪವೇನಿರಬಹುದು? ನನ್ನಂತೆಯೇ ವ್ಯಸನಪಡುತ್ತಿರುವ ಜನರು ಮಟ್ಟಿಗೆ ನನ್ನ ಹೃದಯದಲ್ಲಿ ಈಗ ಉಂಟಾಗಿರುವ ಸಂತಾಪವನ್ನು ಚೆನ್ನಾಗಿಯೂ ಅರಿವರು. ಅಂತಹವರು ಆರಾದರೂ ಇದ್ದಲ್ಲಿ, ಅವರಾದರೂ ನನ್ನ ದುಃಖದಲ್ಲಿ ದುಃಖಿತರಾಗಿ ಕರಗಿ ಕರಗಿ ನೀರಾಗಿ ಹರಿವುದಾದರೆ, ನನ್ನ ಶೋಕಾಗ್ನಿಯ ಜ್ವಾಲೆಯು ಕೊಂಚಮಟ್ಟಿಗೆ ಶಾಂತವಾಗಬಹುದು.

ಪ್ರಿಯೆ! ನಿನ್ನ ಕಾಗದದ ಪ್ರತಿಯೊಂದು ಅಕ್ಷರವೂ, ಪ್ರತಿಯೊಂದು ಶಬ್ದವೂ, ಪ್ರತಿಯೊಂದು ವಾಕ್ಯವೂ, ಅಮೃತಬಿಂದುವಿನಿಂದ ಬರೆಯಲ್ಪಟ್ಟಿ ರುವುದು. ಇದು ನನಗೆ ಚೆನ್ನಾಗಿಯೂ ಗೊತ್ತು. ಆದರೆ, ಶೀತಲವಾದ ಅಮೃತರಸವು ಸಂತಾಪಹಾರಿಯೆಂದು ಪ್ರಸಿದ್ಧವಾಗಿದ್ದರೂ, ನನಗೆ ಮಟ್ಟಿಗೆ

ಸಂತಾಪಕಾರಿಯಾಗಿರುವುದು ನೋಡಿದರೆ ಆಶ್ಚರ್ಯವಾಗುವುದು. ಇದು ಪ್ರಕೃತಿಯ ನಿಯಮವೇ ಆಹುದು. ಮೇಲೆ ಮಟ್ಟಿಗೆ ಶೀತಲವಾಗಿ ತೋರಿ ಬರುವ ಶ್ರೀಗಂಧಲೇಪನವೂ, ಹಿಮಸಂತತಿಯೂ ದೇಹದಲ್ಲಿ ಸಂತಾಪವನ್ನು ಹೆಚ್ಚಿಸುವುದು ಸರ್ವರಿಗೂ ಅನುಭವಸಿದ್ಧವಾದ ವಿಷಯವೇ ಆಗಿರುವುದು. ಅಮೃತವಾದರೋ ಒಳಗೂ ಹೊರಗೂ ಒಂದೇ ಬಗೆಯಾಗಿ ಶಾಂತಿಪ್ರದ ವೆಂದು ನಾನು ತಿಳಿದಿದ್ದೆನು. ಒಳಗಣ ಸ್ವಭಾವವೇ ಒಂದು, ಮೇಲಣ ಆಕಾರವೇ ಒಂದು, ಎಂಬುದಾಗಿ ಕಂಡುಬರುವ ಹೀನ ವಸ್ತುಗಳಲ್ಲಿ, ಈಗೆ ನಾನು ಅಮೃತವನ್ನೂ ಸೇರಿಸಬೇಕಾಗಿರುವುದು ಆರು ಬೇಕಾದರೂ ನನ್ನನ್ನು ನಿಂದಿಸಲಿ. ಇತರರ ಹೇಳಿಕೆಗಿಂತಲೂ ನನ್ನ ಅನುಭವವೇ ನನಗೆ ದೊಡ್ಡದು. ಇದು ಯುಕ್ತವೋ ಅಯುಕ್ತವೋ ಬಲ್ಲವರೇ ಬಲ್ಲರು.

ಪ್ರಾಣಪ್ರಿಯೆ! ನಿನ್ನ ಕವಿತ್ವದ ಮಾಧುರ್ಯವನ್ನು ಏನೆಂದು ವರ್ಣಿಸಲಿ? ಇಂತಹ ಕವಿತ್ವಪರಿಪಾಟಿಯನ್ನು ಕಾಳಿದಾಸನಿಂದ ಇಂದಿನ ವರೆಗೂ ಆರೂ ತಮ್ಮ ಗ್ರಂಥಗಳಲ್ಲಿ ತಿಳಿಸಲಶಕ್ತರಾಗಿರುವರು. ನಾನು ರಘುವಂಶ, ಕುಮಾರಸಂಭವ, ಮೇಘಸಂದೇಶ, ಶಿಶುಪಾಲವಧ, ಕಿರಾತಾರ್ಜುನೀಯ, ನೈಷದ ಮೊದಲಾದ ಮಹಾ ಕಾವ್ಯಗಳನ್ನೂ, ಚಂಪೂರಾಮಾಯಣ, ಚಂಪೂ ಭಾರತ, ಚಂಪೂಭಾಗವತ, ನೀಲಕಂಠವಿಜಯಚಂಪೂ ಮೊದಲಾದ ಚಂಪೂ ಗ್ರಂಥಗಳನ್ನೂ, ಶಾಕುಂತಳ, ಉತ್ತರರಾಮಚರಿತ್ರೆ, ಮಾಲತೀಮಾಧವ, ಮುದ್ರಾರಾಕ್ಷಸ, ಮೃಚ್ಛಕಟಿಕ, ವೇಣೀಸಂಹಾರ, ಬಾಲರಾಮಾಯಣ, ರತ್ನಾವಳೀ, ನಾಗಾನಂದ, ಮಾಲವಿಕಾಗ್ನಿಮಿತ್ರ, ವಿಕ್ರಮೋರ್ವಶೀಯ, ಚಂಡಕೌಶಿಕ ಮೊದಲಾದ ಶ್ಲಾಘ್ಯತರವಾದ ನಾಟಕಗಳನ್ನೂ, ಲಕ್ಷಣಗ್ರಂಥಗಳಲ್ಲಿ ಚಂದ್ರಾಲೋಕ, ಕುವಲಯಾನಂದ, ಪ್ರತಾಪರುದ್ರೀಯ, ಕಾವ್ಯಪ್ರಕಾಶ, ಕಾವ್ಯಾದರ್ಶ, ಕಾವ್ಯಪ್ರದೀಪ, ಕಾವ್ಯಾನುಶಾಸನ, ಸಾಹಿತ್ಯದರ್ಪಣ, ಕಾವ್ಯದರ್ಪಣ, ಅಲಂಕಾರಸರ್ವಸ್ವ, ಸರಸ್ವತೀಕಂಠಾಭರಣ ಮೊದಲಾದ ಪ್ರಾಚೀನ ನವೀನ ಕಾವ್ಯಲಕ್ಷಣ ಮಾರ್ಗಗಳನ್ನೂ, ಭಾಷಾಂತರ ಕವಿಕಾವ್ಯರಚನಾ ಕೌಶಲವನ್ನೂ ಬಾರಿಬಾರಿಗೂ ಓದಿರುವೆನು. ಇವುಗಳೇ ಅಲ್ಲದೆ ಇನ್ನೂ ಅನೇಕಾನೇಕಗಳಾದ ಕ್ಷುದ್ರಕಾವ್ಯ ನಾಟಕಾಲಂಕಾರ ನವನ್ಯಾಸೋಪನ್ಯಾಸಗಳನ್ನೂ ಓದಿನೋಡಿರುವೆನು ಆವುದರಲ್ಲಿಯೂ ನಿನ್ನ ಕವಿತಾಚಮತ್ಕಾರವೂ, ರಚನಾಕೌಶಲ್ಯವೂ, ಅರ್ಥಗಾಂಭೀರ್ಯವೂ, ಶಬ್ದ

ಲಾಲಿತ್ಯವೂ ಕಂಡುಬರುವುದಿಲ್ಲ. ನಿನ್ನ ಪತ್ರವನ್ನು ಓದುವಾಗಲೆಲ್ಲಾ, ನಾನು ನನ್ನನ್ನೇ ಮರೆತು ಗಂಧರ್ವನಗರಿಯಲ್ಲಿದ್ದಂತೆ ಭಾವಿಸಿಕೊಳ್ಳುವೆನು. ಇದು ಆವುದರ ಮಹಿಮೆಯೋ ಆರು ಬಲ್ಲರು ?

ನೀನು ನನ್ನನ್ನು ಪ್ರಾಣನಾಥನೆಂದು ಸಂಬೋಧಿಸಿ ಬರೆದಿರುವೆ. ಇದನ್ನು ನೋಡಿದರೆ, ಕಷ್ಟಸುಖಗಳಲ್ಲಿಯೂ ನಿನ್ನ ಮನೋದಾರ್ಢ್ಯವು ಎಂತಹದಿರಬಹುದು ? ಇದನ್ನು ನಾನು ತಿಳಿದುಕೊಳ್ಳದೇ ಹೋದೆನಲ್ಲಾ! ಹಾ ದೈವವೇ ! ನನ್ನ ಬಾಳನ್ನು ಸುಡು ನಾನು ಇಷ್ಟು ಬೇಗನೆ ಕೃತಘ್ನನಾಗಬಹುದೇ? ನಾನಂತಹ ಗಂಡಸು, ಇಲ್ಲವೆ, ಗಂಡಸರ ಸ್ವಭಾವವೇ ಹೀಗಿರುವುದೇನು? ಸರಳೆ! ನಿನ್ನ ಉಪಕಾರಕ್ಕೆ ಪ್ರತಿಯಾಗಿ ಉಪಕಾರಮಾಡಲು ನನ್ನಲ್ಲಿ ಸಾಮಗ್ರಿಯೇ ಇಲ್ಲದಂತಾಯಿತಲ್ಲಾ ! ಭಾಗ್ಯಹೀನನಾದೆನೆಂಬ ಕೊರತೆಯ ಜತೆಯಲ್ಲಿಯೇ ನಾನು ಹೃದಯಹೀನನಾಗಿಯೂ ಪರಿಣಮಿಸಿದೆನು ಅಕಟಕಟ! ನಾನು ಮಾಡಿದ ಕೆಲಸಕ್ಕೆ ಇಹಲೋಕದಲ್ಲಿ ಉತ್ತಾರಣೆಯೆಂಬುದೇ ಇಲ್ಲದಂತಾಯಿತು ನನಗೆ ವಿದ್ಯೆಯೇಕೆ? ಬುದ್ಧಿಯೇಕೆ? ರೂಪವೇಕೆ? ಯೌವನವೇಕೆ? ಇವೆಲ್ಲವೂ ಗುಣಾಢ್ಯನಾದ ಮತ್ತೊಬ್ಬ ಮನುಷ್ಯನಲ್ಲಿ ಇದ್ದಿದ್ದರೆ, ಎಷ್ಟೋ ಚೆನ್ನಾಗಿ ಶೋಭಿಸುತ್ತಿದ್ದುವು ಅಸೂಯಾಪರನಾದ ನೀಚವಿಧಿಯ ಸೃಷ್ಟಿಯೇ ಹೀಗಿರುವುದು. ಅನೇಕ ಗುಣಗಳನ್ನು ಒಂದೆಡೆಯಲ್ಲಿ ಸೇರಿಸುವ ಸಮಯಕ್ಕೆ ಸರಿಯಾಗಿ, ಆ ಹಾಳು ವಿಶ್ವವಿಧಾತನಿಗೆ ತಲೆ ತಿರುಗಿ ಹೋಗುವುದು ಏನು! ಸೃಷ್ಟಿಕರ್ತನು ಪರರ ಉತ್ಕರ್ಷವನ್ನು ಸಹಿಸತಕ್ಕವನಲ್ಲವೇ? ಎಪಿಎಾ! ನಾನು ಪ್ರಾಚೀನ ಕರ್ಮದ ಬಲದಿಂದ ಕಟ್ಟಲ್ಪಟ್ಟಿರುವಾಗ, ಬಡಪಾಯಿಯಾದ ಬೊಮ್ಮನು ಏನ ತಾನೇ ಮಾಡಬಲ್ಲನು ?

ನನ್ನ ಪ್ರಾಣೇಶ್ವರಿ, ಪ್ರಾಣಕಾಂತೆ, ಪ್ರಾಣಾಧಿಕೆ, ಪ್ರಾಣಪ್ರಿಯೆ, ಪ್ರಾಣಮಣಿ! ನನ್ನ ಹೃದಯ ಕುಟೀರವನ್ನು ಬೆಳಗುವ ಶರತ್ಕಾಲದ ಚಂದ್ರಿಕೆಯೇ ! ಯೌವನದ ಸಹಚರಿ ! ವಾರ್ಧಕದ ಮುಖ್ಯಾವಲಂಬನವೇ ! ಸಂಸಾರಸಾಗರದ ತರಣಿಯೆ! ನನ್ನ ಈ ಲೋಕದ ಸರ್ವಸ್ವವೇ! ಪರಲೋಕದ ಬಂಧುವೇ! ನನ್ನ ಸರ್ವಸ್ವಕ್ಕೂ ಸರ್ವಸ್ವಸ್ವರೂಪಿಣಿ! ನನ್ನ ಆರಾಧ್ಯದೇವತೆ ! ನನ್ನ ಹೃದಯಾಧಿಷ್ಠಾನ ಮಂಗಳಮೂರ್ತಿ ! ನಿನ್ನನ್ನು ನಾನು ಏನೆಂದು ಸಂಬೋಧಿಸಲಿ ? ಪ್ರಪಂಚದಲ್ಲಿ ನಿನ್ನ ಸಂಬೋಧನೆಗೆ ಸರಿಯಾದ

ಮಾತುಗಳೇ ಇಲ್ಲವಲ್ಲ! ಹೀಗಿರುವಲ್ಲಿ, ನಿನ್ನನ್ನು ನಾನು ಏನೆಂದು ಕರೆಯಲಿ? ಇತರರು ಸಂಬೋಧಿಸುವ ಶಬ್ದಗಳನ್ನೇ ಉಪಯೋಗಿಸೋಣವೆಂದರೆ, ನಾನು ಇತರರಂತಿಲ್ಲ. ಇದಕ್ಕೆ ನಾನೇನ ಮಾಡಲಿ? ಸರಳಕುಮಾರಿ! ನನ್ನ ಈ ದುರಂತವಾದ ದೋಷವನ್ನು ಕ್ಷಮಿಸು. ಆವ ರೀತಿಯಿಂದಲೂ ನಾನು ನಿನ್ನವನೇ ಹೊರತು ಬೇರೆಯವನಲ್ಲ.

"ನನ್ನ ಪ್ರಾಣದ ಪದಕವೆ! ನೀನು ನನ್ನನ್ನು ಸಂಪೂರ್ಣವಾಗಿ ಮರೆತುಬಿಟ್ಟಂತಿದೆ," ಎಂದು ನೀನು ಕಾಗದವನ್ನು ಪ್ರಾರಂಭಿಸಿರುವೆ ಸರಳೆ! ನಾನು ನಿನ್ನನ್ನೇ ಮರೆತ ಮೇಲೆ, ಆರಿಗಾಗಿ ನಾನು ಈ ಯಾತನಾರೂಪವಾದ ದೇಹವನ್ನು ಧರಿಸಿರಬೇಕು? ನನ್ನ ದೇಹದಲ್ಲಿ ಪ್ರವಹಿಸುತ್ತಿರುವ ರಕ್ತದ ಒಂದೊಂದು ಕಣದಲ್ಲಿಯೂ ನಿನ್ನ ದಿವ್ಯಮೂರ್ತಿಯು ಉಜ್ಜ್ವಲವಾಗಿ ಅಂಕಿತವಾಗಿರುವಲ್ಲಿ, ನಾನು ಮರವುದೆಂದರೇನು? ಮರವುದರಲ್ಲಿಯೂ ವಿಷಯಾವಿಷಯಗಳಿಲ್ಲವೇ? ನಾನು ನಿನ್ನನ್ನು ಮರೆವುದಾದರ, ನನ್ನನ್ನು ನಾನೇ ಮರೆಯಬಾರದೇತಕೆ?

ನಾನು ಎಷ್ಟೋ ದೇಶಗಳಲ್ಲಿ ಸಂಚಾರಮಾಡಿ ನೋಡಿರುವೆನು ನನ್ನ ಸಂಚಾರದಲ್ಲಿ ಥಳಥಳಿಪ ಎಷ್ಟೋ ರೂಪುಗಳನ್ನು ನೋಡಿರುವೆನು ಇಹಲೋಕವನ್ನೇ ಸ್ವರ್ಗವನ್ನಾಗಿ ಮಾಡಿರುವ ಭೂಲೋಕದ ಲಕ್ಷ್ಮಿಯರನ್ನು ನಾನು ಎಷ್ಟೋ ನೋಡಿರುವೆನು ಅಂತಹವರಿಂದಾಗುವುದೇನು? ನಿನ್ನಲ್ಲಿ ರೂಪ, ಗುಣ, ವಿದ್ಯಾ, ಬುದ್ಧಿ, ಇವೇ ಮುಂತಾದ ಅಸಾಧಾರಣ ಗುಣಗಳು ಒಂದು ಕಡೆಯಲ್ಲಿ ಸೇರಿರುವ ಹಾಗೆ ಮತ್ತೆಲ್ಲಿಯೂ ನಾನು ಕಂಡವನೇ ಅಲ್ಲ. ಈ ಪ್ರಪಂಚವನ್ನು ಸೃಷ್ಟಿಮಾಡಿದ ವಿಚಾರಹೀನನಾದ ವಿಧಿಯು ನಿನ್ನನ್ನು ಎಂದಿಗೂ ಸೃಷ್ಟಿಮಾಡಿರಲಿಕ್ಕಿಲ್ಲ ಇಂತಹ ನಿನ್ನನ್ನು ಒಂದುಸಲವಾದರೂ ಕಣ್ಣಾರೆ ನೋಡುವುದಕ್ಕಿಲ್ಲದ ಹಾಗಿದೆ ದುರ್ದಾಂತರ ಅತ್ಯಾಚಾರವೇ ಇದಕ್ಕೆಲ್ಲಾ ಮೂಲಕಾರಣವು ನಿನ್ನನ್ನು ನಾನು ಹೊಂದಬೇಕೆಂದು ಬಯಸುವಾಗಲೆಲ್ಲಾ, ಸಮಾಜದ ಕಠಿನ ಶಾಸನವು ಜ್ಞಾಪಕಕ್ಕೆ ಬರುವುದು. ಸ್ವಪ್ನದಲ್ಲಿಯಾದರೂ ನೋಡೋಣವೆಂದರೆ, ನನಗೆ ನಿದ್ರೆಯೆಂಬುದೇ ಇಲ್ಲ. ಕಣ್ಣುಗಳಲ್ಲಿ ಆವಾಗಲೂ ನೀರು ತುಂಬಿಕೊಂಡಿರುವುದರಿಂದ, ನಿನ್ನ ಭಾವಚಿತ್ರವನ್ನಾದರೂ ನೋಡಿ ಸಂತೋಷಪಡಲು ನನ್ನ ಹಣೆಯಲ್ಲಿಯೇ ಬರೆದಿಲ್ಲ. ನಿನ್ನ ದಿವ್ಯಮೂರ್ತಿಯನ್ನು ಹೃದಯದಲ್ಲಿ ಧಾರಣಮಾಡಲೇ? ನನಗೆ ಹೃದಯವೇ

ಇಲ್ಲ. ನಿನ್ನನ್ನು ನಾನು ಆವ ತೆರನಾಗಿಯಾದರೂ ಆರಾಧಿಸಬೇಕೆಂದು ಬಯಸುವೆನು. ಹೊಟ್ಟೆಯ ಕಿಚ್ಚಿನಿಂದ ನಾಯುವ ಹತವಿಧಿಯು ನನ್ನ ಮನೋರಥವನ್ನು ಈಡೇರಿಸಲೊಲ್ಲನು. ಇದು ದೈವ ದುರ್ವಿಪಾಕವೋ ಪ್ರೇಮದ ಪರಿಣಾಮವೋ ನನಗಾವುದೂ ತಿಳಿಯಲೊಲ್ಲದು.

ಮನೋಮೋಹಿನಿ ! ನಿನ್ನ ರೂಪಿನಲ್ಲಿ ನಾನು ಮುಗ್ಧನಾಗಿರುವೆನು. ನಿನ್ನ ಅವ್ಯಾಜಮಧುರವಾದ ಕಂಠಸ್ವರವನ್ನು ಕೇಳಲು ನನ್ನಮನವು ತತ್ತರಗುಟ್ಟುತ್ತಿರುವುದು. ನಿನ್ನ ಅಂಗಸ್ಪರ್ಶದ ಮಾತು ಹಾಗಿರಲಿ ಇಂತಹ ಭಾವಗಳು ನನ್ನಲ್ಲಿ ಆವಿರ್ಭಾವವಾಗಲು ಕಾರಣವೇನು ? ನಿಜವಾಗಿಯೂ ನಿನ್ನಲ್ಲಿ ಗುಣಗಳಿರುವುವು ಆದುದರಿಂದಲೇ ನನ್ನ ಇಂದ್ರಿಯಗಳು ಅವುಗಳಲ್ಲಿ ಮುಗ್ಧವಾಗಿರುವುವು ರೂಪಾದಿಗಳು ವಸ್ತುಗಳಲ್ಲಿರುವುವೇ, ಇಲ್ಲವೆ, ನೋಟಕರ ಮನೋಭ್ರಾಂತಿಯ ಪರಿಣಾಮವೇ ? ಪ್ರಿಯೆ! ನೀನೇ ಹೇಳು, ನೋಡುವ ಪುರುಷನು ಸ್ತ್ರೀಯ ರೂಪದಲ್ಲಿ ಮುಗ್ಧನಾಗುವನು ಸ್ತ್ರೀಯು ಪುರುಷನನ್ನು ರೂಪಕ್ಕಾಗಿ ಪ್ರೀತಿಸುವಳೇ ? ಇವೆಂದಿಗೂ ಕಾರಣವಾಗಲಾರದು. ಕವಿಯೊಬ್ಬನು ಈ ರೀತಿಯಾಗಿ ಅಭಿಪ್ರಾಯಪಡುವನು

ಶ್ಲೋಕ || ವ್ಯತಿಷಜತಿ ಪದಾರ್ಥಾನಾಂತರಃ ಕೋಪಿ ಹೇತುಃ |
ನಖಲು ಬಹಿರುಪಾಧೀನ್ ಪ್ರೀತಯಃ ಸಂಶ್ರಯಂತೇ ||
ವಿಕಸತಿ ಹಿ ಪತಂಗಸ್ಯೋದಯೇ ಪುಂಡರೀಕಂ |
ದ್ರವತೀಚ ಹಿಮರಶ್ಮಾವುದ್ಗತೇ ಚಂದ್ರಕಾಂತಃ ||

ತಾತ್ಪರ್ಯವೇನೆಂದರೆ—ಹೃದಯದ ಅನಿರ್ವಚನೀಯವಾದ ಅದೊಂದು ಭಾವವು ಪದಾರ್ಥಗಳನ್ನು ಒಂದಕ್ಕೊಂದು ಸೇರಿಯುವಂತೆ ಮಾಡುವುದು ಪ್ರೀತಿಯೆಂಬುದು ಹೊರಗಣ ವಸ್ತುಗಳನ್ನು ಕಾರಣವಾಗಿಟ್ಟುಕೊಂಡು ಉಂಟಾಗಲಾರದು ಸೂರ್ಯನು ಉದಯಿಸಲಾಗಿ ಕಮಲವು ಅರಳುವುದು, ಚಂದ್ರೋದಯದಲ್ಲಿ ಚಂದ್ರಕಾಂತಶಿಲೆಯು ನೀರ್ಗರೆವುದು.

ನಾನು ಈ ಶ್ಲೋಕದ ಅಭಿಪ್ರಾಯವನ್ನು ಬಲುಹೊತ್ತು ಪರಿಶೀಲಿಸಿ ನೋಡಿದೆನು. ಕವಿಯು ವಸ್ತುಸ್ಥಿತಿಯನ್ನೇ ನುಡಿದಿರುವನೆಂದು ಬೋಧವಾಗುವುದು.

ನೀನು ನನ್ನನ್ನು ಪ್ರೀತಿಸುವುದಕ್ಕೂ, ನಾನು ನಿನ್ನನ್ನು ಪ್ರೀತಿಸುವುದಕ್ಕೂ ಹೊರಗಣ ಆವ ಕಾರಣವೂ ಇರಲಾರದು. ಅವ್ಯಾಜವಾದ ಪರಸ್ಪರ ಪ್ರೀತಿಗೆ ನಾವೇ ಪರಸ್ಪರವಾಗಿ ಕಾರಣವೆನಿಸುವುದಾದರ ನೀನೂ ಧನ್ಯೆ, ನಾನೂ ಧನ್ಯ.

ಬಲುಮಾತಿನಿಂದೇನು! ಪ್ರಿಯತಮೆ! ಈ ಜನ್ಮದಲ್ಲಿ ನಾನು ನಿನ್ನನ್ನು ಎಂದೆಂದಿಗೂ ಮರೆಯಲಾರೆನು. ಸಮಾಜದ ಯಮ ಶಾಸನದಿಂದ ಪಾರ ಗಾಣದೆ ನೀನು ಏಕಾಂತದಲ್ಲಿ ಕುಳಿತುಕೊಂಡು ನಿಶ್ಶಬ್ದದಿಂದ ಕಣ್ಣೀರ ಸುರಿ ಸುತ್ತಿರುವುದನ್ನು ನಾನು ನೋಡಿ ಅದಾವ ದಿನ ಚಿತಾರೋಹಣ ಮಾಡು ವೆನೋ, ಅಂದಿನ ವರೆಗೂ ನಾನು ನಿನ್ನನ್ನು ಮರೆಯಲಾರೆನು, ಆದರೆ ನನ್ನ ದೊಂದು ಪ್ರಾರ್ಥನೆಯಿರುವುದು. ನೀನು ಮಟ್ಟಿಗೆ ವ್ಯಸನಪಡುವುದಾದರೆ, ನನ್ನ ಅಧೀರವಾದ ಹೃದಯವು ಸುಟ್ಟು ಬೂದಿಯಾಗುವುದಲ್ಲದೆ, ನಿನಗೂ ಅಮಂಗಳವಾಗುವುದು. ತಾಪತ್ರಯ ಪರಿಹಾರಕವಾದ ಹರಿನಾಮಸ್ಮರಣೆ ಯನ್ನು ಮಾಡಿಕೊಂಡು ಕಾಲವನ್ನು ಕಳೆ. ಅನಂತಧಾಮದಲ್ಲಿ—ಆವ ಸ್ಥಳ ದಲ್ಲಿ ಸಮಾಜದ ಅತ್ಯಾಚಾರವೆಂಬುದೇ ಕಂಡು ಬರುವುದಿಲ್ಲವೋ, ಅಂತಹ ಅನಂತಧಾಮದಲ್ಲಿ, ನಾವಿಬ್ಬರೂ ಮತ್ತೆ ಸೇರಿಕೊಂಡು ಅನಂತ ಕಾಲದ ವರೆಗೂ ನಮ್ಮ ನಮ್ಮ ಹೃದಯಾಭಿಲಾಷೆಯನ್ನು ಪೂರ್ಣಗೊಳಿಸುವ.

ಇತಿ, ನಿನ್ನ ಹತಭಾಗ್ಯನಾದ ವಿನಯಕುಮಾರ.

ಈ ರೀತಿಯಲ್ಲಿ ಪತ್ರವು ಬರೆದುದಾಯಿತು. ವಿನಯನು ಅದನ್ನು ಒಂದು ಸಲ, ಎರಡು ಸಲ ಮೂರು ಸಲ ಓದಿದನು. ಓದಿದಷ್ಟೂ ಕಣ್ಣುಗ ಳಲ್ಲಿ ನೀರು ತುಂಬಿಕೊಳ್ಳಲು, ವಿನಯನು ಮಗುವಿನಂತೆ ಅತ್ತನು ಮತ್ತೆ ಮತ್ತೆ ಬಿಕ್ಕಿ ಬಿಕ್ಕಿ ಅತ್ತನು ಬಳಿಕ ತನ್ನಲ್ಲಿ ತಾನೇ ಮಾತನಾಡಿಕೊಂಡನು ಅದೆಂತೆಂದರೆ:—

"ಸರಳೆ! ನನ್ನನ್ನು ಏತಕ್ಕೆ ಪ್ರೀತಿಸುವೆ? ನಿನ್ನ ಅವ್ಯಾಜವಾದ ಪ್ರೀತಿಗೆ ಪ್ರತಿಯಾಗಿ ನಾನು ತೋರಿಸಬಲ್ಲೆನೇ! ನೀಚನಾದ ನನ್ನನ್ನು ಪ್ರೀ ತಿಸುವುದರಿಂದ ನಿನಗೆ ಬಂದ ಭಾಗ್ಯವೇನು? ಬೇಡ, ಬೇಡ, ನೀನು ಮಟ್ಟಿಗೆ ನನ್ನನ್ನು ಪ್ರೀತಿಸಬೇಡ. ನಿನ್ನ ಪ್ರೀತಿಯೆಂಬುದೇ ನನ್ನನ್ನು ಮರಣಕ್ಕೆ ಸಜ್ಜುಗೊಳಿಸುತ್ತಿರುವುದು."

ವಿನಯನು ಹೀಗೆ ಕೊಂಚಕಾಲದ ವರೆಗೂ ಮಾತನಾಡಿಕೊಂಡ ಬಳಿಕ ಕಾಗದಕ್ಕೆ ತನ್ನ ನಾಮವನ್ನರ್ಪಿಸಿ ಸರಳಕುಮಾರಿಗೆ ಕಳುಹಿಸಿ ಕೊಟ್ಟು ಮತ್ತೆ ಬಂದು ಹಾಸುಗೆಯ ಮೇಲೆ ಮಲಗಿದವನಾಗಿ ತುದಿ ಮೊದಲಿಲ್ಲದೆಯೇ ಚಿಂತೆಯಲ್ಲಿ ಮುಳುಗಿ ಬಿಟ್ಟನು.



# ಹದಿನಾಲ್ಕನೆಯ ಲಂಬಕ.

## ಪ್ರಲಾಪ.

ರಾತ್ರಿಯು ಬೆಳಗಾಗುವುದರಲ್ಲಿರುವುದು. ಮಂದಮಾರುತವು ತಣ್ಣಗೆ ಬೀಸುತ್ತಿರುವುದು. ಗುಬ್ಬಿಗಳು ಗೂಡುಗಳಲ್ಲಿಯೇ ಕುಳಿತುಕೊಂಡು ಕಿಚಪಿಚನೆ ದನಿಮಾಡುವುದಕ್ಕೆ ಸನ್ನಾಹ ಮಾಡುತ್ತಿರುವುವು. ಕಾಗೆಗಳು ಮನೆಗೆಳ ಮೇಲೂ, ಕೊಂಬೆಗಳ ಕೊನೆಗಳಲ್ಲಿಯೂ ಅಂಗಳಗಳಲ್ಲಿಯೂ ಕುಳಿತುಕೊಂಡು "ಕಾ, ಕಾ," ಎಂದು ಪ್ರಥಮ ಮಂಗಳವಾದ್ಯವನ್ನು ಮಾಡತೊಡಗಿದುವು. ಸದ್ಯೋವಿಕಸಿತವಾದ ಹೂಗಳು ಮಘಮಘಿಸುತ್ತಿರುವುವು. ಸರಳಕುಮಾರಿಯು ತನ್ನ ಕೋಣೆಯಲ್ಲಿ ಹಾಸುಗೆಯ ಮೇಲೆ ಇನ್ನೂ ಕುಳಿತುಕೊಂಡಿರುವಳು. ಅವಳ ಮುಖಕಮಲವು ಬಾಡಿರುವುದು, ಕಣ್ಣುಗಳು ಕೆಂಪೇರಿರುವುವು ದೇಹದ ಚಾಕಚಕ್ಯವು ದೂರ ಸರಿದುಬಿಟ್ಟಿರುವುದು. ಆಕೆಯ ಮುಖದಲ್ಲಿ ಕಾಂತಿಯಿಲ್ಲ, ಹೃದಯದಲ್ಲಿ ರಸವಿಲ್ಲ ಅಂಗಾಂಗಗಳಾದರೋ ಕಡ್ಡಿಯಂತೆ ಕೃಶವಾಗಿ ಹೋಗಿರುವುವು ಸರಳಕುಮಾರಿಯಲ್ಲಿ ಇಷ್ಟರ ಪರಿವರ್ತನೆಗೆ ಕಾರಣವೇನಿರಬಹುದು? ಕಾರಣಕ್ಕೆ ದಾರಿದ್ರ್ಯವೆಲ್ಲಿಯದು? ವಿನಯಕುಮಾರನಲ್ಲಿನ ಪ್ರೇಮಾತಿಶಯವೇ ಸರಳೆಯನ್ನು ದಿನದಿನಕ್ಕೂ ಕ್ಷಯಿಸಿಹೋಗುವಂತೆ ಮಾಡುತ್ತಿರುವುದು

ಸರಳೆಯು ತನ್ನ ಕಯ್ಯಲ್ಲಿ ವಿನಯದಿಂದ ಬಂದ ಕಾಗದವನ್ನು ಹಿಡಿದುಕೊಂಡು ಆ ಅಸ್ಫುಟವಾದ ಬೆಳಕಿನಲ್ಲಿ ಒಂದು ಸಲ ಓದಿದಳು ಅವಳ ಮನಸ್ಸಿಗೆ ತೃಪ್ತಿಯಾಗಲಿಲ್ಲ. ಮತ್ತೊಂದು ಸಲ ಓದಿದಳು, ಆದರೂ ಅವಳ ಮನಸ್ಸಿಗೆ ತೃಪ್ತಿಯಾಗಲಿಲ್ಲ ಬಳಿಕ ಸರಳೆಯು ಹಾಸುಗೆಯಿಂದೆದ್ದು ಕಿಟಕಿಯ ಬಳಿಯಲ್ಲಿ ಬಂದು ನಿಂತುಕೊಂಡು ಓದಿದ ಕಾಗದವನ್ನೇ ಮತ್ತೊಂದು ಸಲ ಓದಿ ನೋಡಿದಳು. ತಟ್ಟನೆ ಅವಳ ಕಣ್ಣುಗಳಲ್ಲಿ ನೀರು ತುಂಬಿಕೊಂಡಿತು. ಸರಳೆಯು "ಉಸ್" ಎಂದು ನಿಟ್ಟುಸಿರ ಬಿಟ್ಟು ತನ್ನೊಳಗೆ ತಾನೇ ಆಲೋಚಿಸಿದಳು.

"ಸ್ವಾಮಿನ್! ನೀನು ನನ್ನನ್ನು ಎಂದೆಂದಿಗೂ ಮರೆಯದಿರು. ನೀನೂ ಮರೆತುಬಿಡುವುದಾದರೆ ನನಗೆ ಮತ್ತಾರಿರುವರು ? ನೀನು ಮರೆತು ಕೈಬಿಡು

ವುದಾದರೆ, ನಾನು ಮತ್ತಾರಿಗಾಗಿ ಈ ಹಾಳು ಪ್ರಾಣವನ್ನು ಕಾಪಿಟ್ಟುಕೊಂಡಿರಬೇಕು? ನೀನೇ ನನ್ನ ಉಪಾಸ್ಯದೇವತೆ. ನೀನು ನನ್ನನ್ನು ಮರೆವುದಿಲ್ಲವೆಂದು ಭರವಸೆ ಕೊಡುವುದಾದರೆ, ನನಗೆ ಅಷ್ಟೇ ಸುಖ ಇದು ಹೊರತು, ನಾನು ಮತ್ತಾವ ಸುಖವನ್ನು ಅನುಭವಿಸುವುದಕ್ಕೂ ಕೇಳಿಕೊಂಡು ಬಂದಿಲ್ಲ. ಪ್ರಾಣಾಧಿಕ ! ನಿನ್ನ ಪಾದ ಮುಟ್ಟಿ ಸೆರಗೊಡ್ಡಿ ಬೇಡಿಕೊಳ್ಳುವೆನು. ನೀನು ಮಟ್ಟಿಗೆ ನನ್ನನ್ನು ಎಂತಹ ಕಾಲದಲ್ಲಿಯಾದರೂ ಮರೆಯಬೇಡ, ಕಂಡೆಯಾ ?"

ಸರಳಕುಮಾರಿಯು ಹೀಗೆಂದು ಚಿಂತಿಸುತ್ತಿರುವಷ್ಟರಲ್ಲಿಯೇ ದಾಸಿಯೊಬ್ಬಳು ಬಂದು,—"ತಾಯೆ! ನಿನಗೆ ಜಡೆ ಹಾಕಲು ಮನೆಯ ಯಜಮಾನಿಯು ನನ್ನನ್ನು ಇಲ್ಲಿಗೆ ಕಳುಹಿರುವರು," ಎಂದಳು.

"ಬೇಡ, ಹೋಗು ನನಗೆ ಜಡೇಗಿಡೇ ಒಂದೂ ಬೇಡ. ನನ್ನ ಕೂದಲು ಹೀಗೆಯೇ ಜಟೆ ಕಟ್ಟಿಕೊಂಡು ಹೋಗಲಿ ನೀನು ಹೊರಡು," ಎಂದು ಸರಳೆಯು ಗದ್ದರಿಸಿದಳು.

ಮನೆಯ ಯಜಮಾನಿಯ ಅಪ್ಪಣೆಯ ಮೇರೆಗೆ ಬಂದಿರುವ ದಾಸಿಯು ಸರಳೆಯ ಮಾತಿಗನುಸಾರವಾಗಿ ಹೊರಟು ಹೋಗದೇ ಅಲ್ಲಿಯೇ ಇದ್ದುಕೊಂಡು ಅವಳ ತಲೆಯ ಕೂದಲನ್ನು ಸರಿಪಡಿಸುವುದಕ್ಕೆ ಯತ್ನಮಾಡಿದಳು. ಸರಳೆಯು ತನ್ನ ಮನೋರಥವು ನೆರವೇರುವುದಿಲ್ಲವೆಂದು ಸುಮ್ಮನಾಗಲು, ದಾಸಿಯು ತನ್ನ ಕೆಲಸದಲ್ಲಿ ಮುಂದುವರಿದಳು. ಆಗ ಸರೋಜಿನಿಯೂ ಬಂದು ಸರಳೆಯ ಪಕ್ಕದಲ್ಲಿ ಕುಳಿತುಕೊಂಡಳು. ಸರಳೆಯು ಸರೋಜಿನಿಯನ್ನು ನೋಡಿ,—ಅತ್ತಿಗ ! ನಮ್ಮಣ್ಣನು ಇನ್ನೂ ಬರಲಿಲ್ಲವೇತಕೆ ? ಎಂದು ಕೇಳಿದಳು.

ಸರೋಜಿನಿ—ನನಗೆ ತಿಳಿಯದು ಅವರು ಸುಸ್ಥರಾಗಿರುವರೋ ಇಲ್ಲವೋ ನನಗಾವುದೂ ಗೊತ್ತಾಗದು

ಸರಳೆ—ಎರಡು ಮೂರು ದಿನಗಳಲ್ಲಿ ಬಂದುಬಿಡುವುದಾಗಿ ಅಣ್ಣನು ಹೇಳಿ ಹೋಗಿ ಇಂದಿಗೆ ಹದಿನೈದು ದಿನಗಳಾದರೂ ಆಗಲಿಲ್ಲವೇ? ಈ ನಡುವೆ ಆತನಿಗೆ ನಾನು ಒಂದೆರಡು ಕಾಗದಗಳನ್ನೂ ಬರೆದಿದ್ದೆನು. ಕಾಗದಗಳು ಕೈಸೇರಿದುವೋ ಇಲ್ಲವೋ ಗೊತ್ತಿಲ್ಲ. ನಮ್ಮಣ್ಣನು ನನಗಾಗಿಯೇ ದೂರ ದೇಶವನ್ನು ಕುರಿತು ತೆರಳಿರುವುದು. ಹೋದ ಕೆಲಸವಾಯಿತೋ ಇಲ್ಲವೋ

ಆರು ಬಲ್ಲರು? ಇಲ್ಲವೆ, ದಾರಿಯಲ್ಲಿ ಮತ್ತೇನಾದರೂ ತೊಂದರೆಯು ಸಂಭವಿಸಿರಬಹುದೇ? ಶಿವಶಿವಾ! ದೇವರು ಅವನಿಗೆ ಮಂಗಳವನ್ನುಂಟುಮಾಡಲಿ. ನನ್ನ ದೌರ್ಭಾಗ್ಯಕ್ಕೆ ಆರೇನ ಮಾಡಬಲ್ಲರು?

ಸರೋಜಿನಿಯು ಈ ಮಾತನ್ನು ಕೇಳಿದ ಕೂಡಲೆ, ಅವಳ ಹೃದಯದಲ್ಲಿ ಒಂದು ಬಗೆಯಾದ ಸಂಕಟವುಂಟಾಗಿ, ಅದನ್ನು ತನ್ನಲ್ಲಿಯೇ ಅಡಗಿಸಿಕೊಂಡು,—ಸರಳೆ! ಅವರ ವಿಷಯದಲ್ಲಿ ನೀನು ಹೀಗೆ ಚಿಂತಿಸಬಾರದು," ಎಂದಳು. ಅದಕ್ಕೆ ಸರಳೆಯು,—"ಹಾಗಾದರೆ, ಇಷ್ಟು ದಿನಗಳಾದರೂ ಅವನೇತಕ್ಕೆ ಬಾರನು? ನಮ್ಮಣ್ಣನ ವಿಷಯದಲ್ಲಿ ನನ್ನ ಪ್ರಾಣವು ಎಷ್ಟರಮಟ್ಟಿಗೆ ತತ್ತರಗುಟ್ಟುವುದೋ ಅದನ್ನು ನೀನು ಬಲ್ಲೆಯಾ?" ಎಂದು ಮರುನುಡಿಗಳನ್ನಾಡಿದಳು

ಸರಳೆಯು ಹೀಗೆ ಮಾತನಾಡುತ್ತಿರುವಾಗ, ಹೊರಗೆ ಆರೋ ಬರುತ್ತಿರುವ ಶಬ್ದವು ಕೇಳಬಂದಿತು ಎಲ್ಲರೂ ಅತ್ತ ಕಡೆ ನೋಡಿದರು. ಹರಮಣಿದಾಸಿಯು ಒಳಗೆ ಬರುತ್ತಿರುವುದನ್ನು ಸರೋಜಿನಿಯು ನೋಡಿ,—"ಹರ! ವಿಷಯವೇನು?" ಎಂದು ಕೇಳಿದಳು.

ಹರಮಣಿ—ಅಂತಹದೇನೂ ಇಲ್ಲ

ಸರೋಜಿನಿ—ಹಾಗಾದರೆ ಬಂದುದೇನು?

ಹರಮಣಿ—ನಿನ್ನೊಡನೆ ಮಾತನಾಡಬೇಕಾಗಿರುವುದು. ಕೊಂಚ ಇತ್ತ ಕಡೆ ಬರಬಲ್ಲೆಯಾ?

ಸರೋಜಿನಿ—ಇಲ್ಲಾರು ಹೊರಗಣವರು ಇರುವರು? ಇಲ್ಲಿ ತಿಳಿಸಲು ಅಡ್ಡಿಯೇನೂ ಇರುವುದಿಲ್ಲವಷ್ಟೇ? ಹಾಗೇನಾದರೂ ಗುಟ್ಟಿನ ಸಂಗತಿಯಿರುವುದಾದರೆ ಹೇಳು, ನಾನು ಹೊರಗೆ ಬರುವೆನು

ಹರಮಣಿ—ಅಂತಹ ಗುಟ್ಟಾದರೂ ಏನಿರುವುದು? ಎಲ್ಲರಿಗೂ ಗೊತ್ತೇ ಇರುವ ವಿಷಯವು ಗುಟ್ಟೆಂದರೇನು? ಇಂದು ಸರಳೆಗೆ ಮದುವೆಯಂತೆ.

ಸರೋಜಿನಿ—(ಆಶ್ಚರಿಯದಿಂದ) ಹಾಗೆಂದರೇನು? ವರನಾರಿರಬಹುದು?

ಹರಮಣಿ—ಮೊದಲು ನಿಶ್ಚಯವಾಗಿದ್ದವನೇ ವರನಂತೆ. ಅವನಿಗಿಂತಲೂ ಅನುಕೂಲನಾದವನು ಮತ್ತಾರುಂಟು? ಬಿಯ್ಯಗರು ಈಗ ತಾನೇ ಬಂದು ತಮ್ಮ ಬೀಡಾರಗಳಲ್ಲಿ ತಂಗಿರುವರು ವಿವಾಹದ ಸಾಮುಗ್ರಿಗಳೆಲ್ಲವೂ ಸಿದ್ಧವಾಗುತ್ತಿರುವುವು. ಬ್ರಾಹ್ಮಣರನ್ನು ಭೋಜನಕ್ಕಾಗಿ ಕರೆಯುವುದಕ್ಕೆ

ಪುರೋಹಿತರೇ ಹೊರಟು ನಿಂತಿರುವರು. ಮನೆಗೆ ಬರುವವರು ಬರುತ್ತಿರುವರು, ಹೋಗುವವರು ಹೋಗುತ್ತಿರುವರು. ಮನೆಯಲ್ಲಿ ಗಲಭೆಯೋ ಗಲಭೆ. ಇದಾವುದೂ ನಿನಗೆ ಗೊತ್ತಿಲ್ಲವೇ ?

ಸರೋಜಿನಿ—(ಬೆಚ್ಚಿ ಬೆದರಿದವಳಾಗಿ) ದೇವರಾಣೆಗೂ ನನಗಿದೊಂದೂ ಗೊತ್ತಿಲ್ಲ.

ಹರಮಣಿ—ನಮ್ಮ ಸರಳೆಯು ಇದೆಲ್ಲವನ್ನೂ ಬಲ್ಲಳು. ಅದಕ್ಕಾಗಿಯೇ ಸರಳೆಯು ದಾಸಿಯ ಕೈಯಿಂದ ಸಿಂಗರಿಸಿಕೊಳ್ಳುತ್ತಾ ಕುಳಿತಿರುವಳು.

ಸರೋಜಿನಿ—ಅವರು ಬಂದರೆ ?

ಹರಮಣಿ—ಆರು? ನಿನ್ನ ಯಜಮಾನನೋ !

ಸರೋಜಿನಿ—ಅಹುದು.

ಹರಮಣಿ—ಇಲ್ಲ ನಾನು ಆವುದೋ ಕೆಲಸವನ್ನು ಮುಂದಿಟ್ಟುಕೊಂಡು ಯಜಮಾನರ ಒಳಿಗೆ ಹೋಗಿದ್ದೆನು ಅಲ್ಲೊಬ್ಬರು ಜಾನಕೀನಾಥನು ಏತಕ್ಕೆ ಬರಲಿಲ್ಲವೆಂದು ಕೇಳಿದರು. ಅದಕ್ಕೆ ಯಜಮಾನರು ಉತ್ತರಕೊಟ್ಟುದೇನೆಂದರೆ—"ಅವನು ಈಗಾಗಳೇ ಬರುವಂತಿಲ್ಲ. ನಾನು ಅವನಿಗೆ ಅಂತಹ ಅಸಾಧ್ಯವಾದ ಕೆಲಸವೊಂದನ್ನು ನೇಮಿಸಿ, ಅವನನ್ನು ದೂರವಾಗಿ ಕಳುಹಿರುವೆನು. ಅವನು ಬಂದುಬಿಡುವುದರೊಳಗಾಗಿಯೇ ಮದುವೆಯ ಕೆಲಸವು ನೆರವೇರಿರಬೇಕೆಂಬುದೇ ನನ್ನ ಸಂಕಲ್ಪವಾಗಿರುವುದರಿಂದ, ಇಷ್ಟು ತ್ವರಿತವಾಗಿ ಕೆಲಸವು ನಡೆಯಿಸಲ್ಪಡಬೇಕಾಗಿದೆ ಅವನನ್ನು ಇಲ್ಲಿಯೇ ಉಳಿಸಿಕೊಂಡು ಮದುವೆ ಮಾಡುವುದು ಅಸಾಧ್ಯವು ಅವನಾದರೋ ಕೋತಿಯಂತಹ ಹುಡುಗ. ಇಲ್ಲಿದ್ದರೆ, ಅವನೇನಾದರೊಂದು ಕಪಿಚೇಷ್ಟೆ ಮಾಡಿಬಿಡುವನು. ಇದೆಲ್ಲವನ್ನೂ ನಾನು ಮೊದಲೇ ಚಿಂತಿಸಿ ಈ ಸಂಧಾನವನ್ನು ಮಾಡಿರುವೆನು."

ಯಜಮಾನರು ಹೇಳಿದ ಮಾತನ್ನು ನಾನೂ ಕಿವಿಯಾರೆ ಕೇಳುತ್ತಾ ಅಲ್ಲಿಯೇ ನಿಂತಿದ್ದೆನು. ನಾನು ಅಲ್ಲಿಗೆ ಹೋಗದಿದ್ದರೆ, ಇದಾವುದೂ ನನಗೆ ಗೊತ್ತಾಗುತ್ತಲೇ ಇರಲಿಲ್ಲ.

ಸರಳೆಯು ಈ ಮರ್ಮವಿದಾರಿಯಾದ ಮಾತನ್ನು ಕೇಳಿದಳು. ಕೂಡಲೆ ಅವಳ ಮೈಯ್ಯೆಲ್ಲವೂ ದಗದಗನೆ ಉರಿದು ಬೂದಿಯಾಗಿ ಬಿಟ್ಟಿತು. ಅವಳ ಕಣ್ಣುಗಳಿಂದ ಬೆಂಕಿಯ ಕೆಂಡಗಳೇ ಉದುರಿದುವು. ತುಟಿಗಳು ಪಟಪಟನೆ

ಅದುರಿದುವು. ಎದೆಯು "ದಢಾಸ್, ದಢಾಸ್" ಎಂದು ಬಡಿದುಕೊಂಡಿತು. ಮನುಷ್ಯನಿಗೆ ತಲೆ ಮೀರಿದ ಕೋಪ ಬಂದರೆ ಆವ ಅವಸ್ಥೆಯುಂಟಾದೀತೋ, ಆದೇ ಅವಸ್ಥೆಯು ಸರಳೆಯಲ್ಲಿಯೂ ಕಾಣಿಸಿಕೊಂಡಿತು. ಸರಳೆಯು ಕೋಪಾವೇಶಪರವಶೆಯಾಗಿ ಅತ್ತಿಗೆಯನ್ನು ಕುರಿತು,—"ತಂದೆಯಾದವನೇ ಮಕ್ಕಳಿಗೆ ವಿಷವನ್ನು ತಂದುಣಿಸಬೇಕೆಂದು ಹಠಹಿಡಿದರೆ ಆರೇನ ಮಾಡ ಬಲ್ಲರು ? ಮೈಮರೆತು ನಿದ್ದೆಯಲ್ಲಿರುವಾಗ, ಶತ್ರುವು ತಲೆಯನ್ನು ಕಡಿದು ಹಾಕುವುದಾದರೆ ಆರ ಯತ್ನವೇನಿರುವುದು ? ವಿದ್ಯಾವಂತರು ಪಾಪ ಕೆಲಸ ದಲ್ಲಿ ತೊಡಗಿದರೆ, ಅವರಿಗೆ ಬುದ್ಧಿಗಲಿಸುವವರಾರು?" ಎಂದು ಹೇಳಿ ಗೋಳೋ ಎಂದು ಅಳತೊಡಗಿದಳು. ಈ ಸಂದರ್ಭವನ್ನು ನೋಡಿದರೆ ಕಲ್ಲಾದರೂ ಅಳುತ್ತಿತ್ತು, ವಜ್ರದಂತೆ ಕಠಿನವಾದ ಹೃದಯವಾದರೂ ಒಡೆದು ಹೋಗು ತ್ತಿತ್ತು. ಸರೋಜಿನಿಯೂ ಕಣ್ಣುಗಳಲ್ಲಿ ನೀರನ್ನು ತಂದುಕೊಂಡು,— "ಮಗು, ಅಳಬೇಡವಮ್ಮ, ಹೆಣ್ಣು ಹೆಂಗಸರೇನ ಮಾಡುವುದಕ್ಕಾದೀತು ? ಹಣೆಯಲ್ಲಿ ಏನು ಬರೆದಿರುವುದೋ ಅದು ನಡೆದು ಹೋಗುವುದು. ಇದನ್ನು ನೀನು ತಿಳಿದಿದ್ದು [illegible] ವುದರಿಂದ ಪ್ರಯೋಜನವೇನು ?" ಎಂದು [illegible] ಸರಳೆಯು,—"ಅತ್ತಿಗೆ, ತಂದೆ [illegible] ಎತ್ತಿ ಹಾಕುವುದರ ಬದಲಾಗಿ, [illegible] ಧಾರಣಮಾಡಿ ಕಾಪಾಡುವರೇ" [illegible], ತನ್ನ ತಲೆಯ ಕೂದಲನ್ನು [illegible] ಬಿಟ್ಟು ಹೊರಳಾಡುತ್ತಾ, "ಹಾ ದೈವವೇ! ಈ ಸಮಯದಲ್ಲಿ ನನ್ನನ್ನು ಆರೂ ಕಾಪಿ ಡುವವರಿಲ್ಲವೇ ? ಅಣ್ಣಾ ! ನೀನೂ ಕಣ್ಮರೆಯಾಗಿ ಹೊರಟು ಹೋಗಬಹು ದೇ ? ಸ್ವಾಮಿನ್! ಒಂದು ಸಲವಾದರೂ ಇಲ್ಲಿಗೆ ಬಂದು, ನಿನ್ನ ಚರಣ ಸೇವೆ ಯು ನನಗೆ ಲಭಿಸುವಂತೆ ಮಾಡಬಾರದೇ ? ಅಯ್ಯೋ! ಆರೂ ನನ್ನ ಸಂಕಟ ವನ್ನು ನೋಡುವುದಿಲ್ಲವಲ್ಲಾ" ಎಂದು ಹಂಬಲಿಸಿದಳು. ಈ ಕರುಣ ಆರ್ತ ನಾದವು ಎಲ್ಲೆಲ್ಲಿಯೂ ಹರಡಿಕೊಂಡಿತು. ಸರಳೆಯ ರೋದನೆಗೆ ಪ್ರತಿಧ್ವ ನಿಯು ಉತ್ತರ ಕೊಟ್ಟಿತೇ ಹೊರತು ಮತ್ತಾರ ಉತ್ತರವೂ ಇಲ್ಲದೇ ಹೋಯಿತು



# ಹದಿನೈದನೆಯ ಲಂಬಕ.

## ವೈ ವಾ ಹಿ ಕ ಪ್ರ ಯ ತ್ನ .

ಪರಮಣಿದಾಸಿಯು ಸರಳೆಯ ರೋದನವನ್ನು ಕೇಳಿ ವಿಸ್ಮಿತೆಯಾಗಿ ಸರೋಜಿನಿಯ ಕಡೆಗೆ ತಿರುಗಿಕೊಂಡು ತನ್ನ ವಾಗ್ವೈಖರಿಯನ್ನು ತೋರ್ಪಡಿಸಿಕೊಂಡಳು. ಅದು ಈ ರೀತಿಯಾಗಿದ್ದುದು.

"ಇದೇನಮ್ಮ ! ನಾಚುಗೆ ಕೇಡು. ಇಂತಹ ಹೆಣ್ಣನ್ನು ನಾನೆಲ್ಲಿಯೂ ನೋಡಿಲ್ಲ ಮುಂದೆ ನೋಡುವುದೂ ಇಲ್ಲ. ಮದುವೆಯೆಂದರೆ ಹುಡುಗಿಯರು ಹಿಗ್ಗಿಹೋಗುವರು ಹೆಂಗುಸಾಗಿ ಹುಟ್ಟಿದ ಮೇಲೆ ಗಂಡನೊಬ್ಬನನ್ನು ಮದುವೆಯಾಗಲೇ ಬೇಕು ಇದು ತಪ್ಪಿದುದೇ ಅಲ್ಲ ಆವ ಹೆಂಗುಸೂ ಹೆಂಗುಸನ್ನು ಆವಾಗಲೂ ಮದುವೆಯಾಗಿಲ್ಲ ಹೀಗಿರುವಲ್ಲಿ, "ನನಗೆ ಇಂತಹವನೇ ಗಂಡನಾಗಬೇಕು ಇವನು ನೋಡುವುದಕ್ಕೆ ಚೆನ್ನಾಗಿಲ್ಲ ಇವನನ್ನು ಕಂಡರೆ ನನಗಾಗುವುದಿಲ್ಲ ನನ್ನ ಮನಸ್ಸಿಗೆ ಒಪ್ಪಿದವನನ್ನು ನಾನು ಮದುವೆಯಾಗುವೆನು, ಇಲ್ಲವಾದರೆ ಪ್ರಾಣಬಿಡುವೆನು," ಎಂದು ಮುಷ್ಕರ ಹಿಡಿಯುವುದು ಕುಲಸ್ತ್ರೀ ಹೆಣ್ಣುಮಗಳು ಮಾಡುವ ಕೆಲಸವೇನು ? ವಿನಯನ ದೇಹವು ಬಂಗಾರದಿಂದ ಮಾಡಿಲ್ಲ, ಮತ್ತೊಬ್ಬನದು ಮಣ್ಣಿನದಲ್ಲ ಎಲ್ಲರ ಅಂಗಾಂಗಗಳೆಲ್ಲವೂ ರಕ್ತಮಾಂಸಗಳಿಂದಲೇ ನಿರ್ಮಿಸಲ್ಪಟ್ಟಿರುವುವು ಹೀಗಿರುವುದಾದರೂ ರೋಗ ಒಂದಿಳಿದಿರುವ ವರನನ್ನು ಮದುವೆಯಾಗುವುದು ನನಗೆ ಸಮ್ಮತವು ಎಂದರೆ—ಈ ವರನು ಆಗರ್ಭ ಶ್ರೀಮಂತನು ಈತನು ಆವಾಗಲೂ ಸಂಪತ್ತಿನಿಂದ ಮೈಯುಬ್ಬಿದವನಾಗಿರುವನು ಈತನು ಪರಸೇವೆಯೆಂಬ ನರಕಯಾತನೆಯನ್ನು ಅರಿಯುತಕ್ಕವನಲ್ಲ ಕಷ್ಟಪಡುವುದೆಂಬುದು ಇವನ ಹಣೆಯಲ್ಲಿಯೇ ಬರೆದಿಲ್ಲ ವಿನಯನಿಗಾದರೋ ಏನಿರುವುದು ? ಬೆಳಗಿನಿಂದಲೂ ಬೈಗಿನ ವರೆಗೂ ನಾಯಿಯಂತೆ ಕಂಡಕಂಡವರನ್ನು ಸೇವಿಸಿ ಮೈಮುರಿದು ಹೋಗುವ ಹಾಗೆ ಕೆಲಸಮಾಡಿದರೆ ಒಪ್ಪತ್ತಿನ ಕೂಳು ದೊರೆವುದೇ ಅತಿ ಪ್ರಯಾಸವೆನಿಸುವುದು ಹುಟ್ಟಿದ ಮೊದಲ್ಗೊಂಡು ಸಾಯುವವರೆಗೂ ಹೊಟ್ಟೆಗಾಗಿಯೇ ಶ್ರಮಪಡುವುದಾದರೆ ಸುಖವನ್ನು ಬಯಸುವುದಾವಾಗ ? ದರಿದ್ರನನ್ನು ಕೈಹಿಡಿದ ನಮ್ಮಗಳ ಬಾಳನ್ನು ನೋಡಿದರೆ

ಗೊತ್ತಾಗುವುದಿಲ್ಲವೇ ? ನಮಗಾದರೋ ಹೊಟ್ಟೆಗಿಲ್ಲ, ಬಟ್ಟೆಗಿಲ್ಲ, ಸುಖವೆಂಬುದು ಮೊದಲೇ ಇಲ್ಲ. ಮೃಗಗಳಾದರೂ ಸುಖದಿಂದಿರುವುವು ಮೃಗಗಳಂತೆ ಸುಖಪಡುವುದಕ್ಕೆ ಬಂತೇ ಭಾಗ್ಯ! ಮನುಷ್ಯನಾಗಿ ಹುಟ್ಟಿದ ಮೇಲೆ ಅನುಭವಿಸಬೇಕಾದ ಸುಖಗಳೇ ಬೇರೆಯಾಗಿರುವುವು ಅವೆಲ್ಲವನ್ನೂ ಅನುಭವಿಸಬೇಕಾದರೆ, ಭಾಗ್ಯವಂತನ ಕೈಯನ್ನು ಹಿಡಿಯಬೇಕೇ ಹೊರತು ದರಿದ್ರನನ್ನು ವರಿಸುವುದರಿಂದ ಆವ ಪ್ರಯೋಜನವೂ ಇರಲಾರದು "

ಹರಮಣಿದಾಸಿಯು ಈ ವರಿ ವಾಗ್ವಿಲಾಸವನ್ನು ತೋರ್ಪಡಿಸಿ ಹೊರಟು ಹೋದಳು ಕಾಲಕ್ರಮದಲ್ಲಿ ಮಧ್ಯಾಹ್ನವು ಕಳೆದು ಸಂಜೆಯಾಗುತ್ತಾ ಬಂದಿತು ದೇವಸ್ಥಾನದಲ್ಲಿ ಸಂಧ್ಯಾಕಾಲ ಸೂಚಕವಾದ ಶಂಖಧ್ವನಿಯಾಯಿತು ಈ ಧ್ವನಿಯು ಗಗನ ಮಂಡಲವನ್ನು ವ್ಯಾಪಿಸುತ್ತಿರುವ ಸಮಯಕ್ಕೆ ಸರಿಯಾಗಿ ಮನೆಯಲ್ಲಿ ಮಂಗಳವಾದ್ಯವೂ ದಾಸದಾಸಿಯರನ್ನು ತ್ವರೆಗೊಳಿಸಿತು ಸರೋಜಿನಿಯು ದೂಂತಹೊತ್ತು ವಾದ್ಯವನ್ನು ಕೇಳುತ್ತಿದ್ದು ಬಳಿಕ ಅಲ್ಲಿಂದೆದ್ದು ಮನೆಯೊಳಗೆ ಹೊರಟು ಹೋದಳು

ಮನೆಯ ಜನರೆಲ್ಲರೂ ತಮ್ಮ ತಮ್ಮ ಕೆಲಸಗಳನ್ನು ಮಾಡಿಕೊಳ್ಳುತ್ತಿರುವಷ್ಟರಲ್ಲಿಯೇ ರಾತ್ರಿಯಲ್ಲಿ ೯ ಗಂಟೆಯು ಹೊತ್ತಾಯಿತು ಒಬ್ಬಳು ಮತ್ತೊಬ್ಬಳನ್ನು ಕೂಗುತ್ತಿರುವಳು, ಒಬ್ಬಳನ್ನು ಕುರಿತು ಮತ್ತೊಬ್ಬಳು "ಅದು ಮಾಡು, ಇದು ಮಾಡು," ಎಂದು ಅಪ್ಪಣೆ ಮಾಡುತ್ತಿರುವಳು. ಮತ್ತೆ ಕೆಲವರು ಕೆಲಸವಿರಲಿ, ಕಲಸವಿಲ್ಲದಿರಲಿ, ಅಲ್ಲಲ್ಲಿ ದಡಬಡನೆ ಓಡಿಯಾಡುತ್ತಿರುವರು ವೃದ್ಧೆಯೊಬ್ಬಳು ಉಗ್ರಾಣದ ರೀತಿನೀತಿಗಳನ್ನು ನೋಡಿಕೊಳ್ಳುತ್ತಿರುವಳು. ಮತ್ತೊಬ್ಬ ವೃದ್ಧೆಯು ಅಡುಗೆಮನೆಯ ಸರ್ವಾಧಿಕಾರವನ್ನು ವಹಿಸಿ ಅಡುಗೆ ಮಾಡುವವರ ಮೇಲೆ ತನ್ನ ಪ್ರತಾಪವನ್ನು ತೋರಿಸುತ್ತಿರುವಳು ಕೆಲಸಮಾಡುವವರು ಮಾಡುತ್ತಲೇ ಇರುವರು ಇಲ್ಲದವರು ತಿರುಗಾಡುತ್ತಲೇ ಇರುವರು ಈ ವಿವಾಹ ಸಮಾರಂಭದಲ್ಲಿ ಒಬ್ಬರ ಮಾತು ಮತ್ತೊಬ್ಬರಿಗೆ ಕೇಳಿಸುತ್ತಿರಲಿಲ್ಲ, ಕೇಳಿಸಿದರೂ ಬೇಕಾಗಿರಲಿಲ್ಲ. ಅಂತೂ ಮನೆಯಲ್ಲಿ ಚಿಕ್ಕವರಿಂದ ದೊಡ್ಡವರ ವರೆಗೂ ತಮ್ಮ ತಮ್ಮ ಶಕ್ತಿಗೂ ಯೋಗ್ಯತೆಗೂ ತಕ್ಕಂತೆ ಸೊಂಟಕಟ್ಟಿಕೊಂಡು ಕೆಲಸಮಾಡಲು ಸಿದ್ಧರಾದರು

ಶಿವರಾಮಪುರದ ನಾರೀಮಣಿಯರೆಲ್ಲರೂ ಒಂದೆಡೆಯಲ್ಲಿ ಕುಳಿತು

ಕೊಂಡು, "ನೀನು ಹಾಡನ್ನು ಹೇಳು, ನೀನು ಹಾಡನ್ನು ಹೇಳು; ನನಗೆ ಬರುವುದಿಲ್ಲ, ನೀನೇ ಹೇಳು, ನೀನು ಹೇಳಿದರೆ ಹೇಳು, ಬಿಟ್ಟರೆ ಬಿಡು, ನಾನಂತೂ ಹೇಳುವುದಿಲ್ಲ," ಎಂದು ಒಬ್ಬರಿಗೊಬ್ಬರು ತಿವಿದಾಡುತ್ತಾ ಕಾಲವನ್ನು ಕಳೆಯುತ್ತಿದ್ದರು. ಮಕ್ಕಳುಗಳು ಹಾಡಿಗೆ ಪ್ರತಿಯಾಗಿ ಅಳುತ್ತಿದ್ದರು, ಕೆಲವರು ಮಕ್ಕಳನ್ನು ಅಳಿಸುತ್ತಿದ್ದರು, ಕೆಲವರು ಚೇಷ್ಟೆಗಳನ್ನು ಮಾಡುತ್ತಿದ್ದರು. ಮತ್ತೆ ಕೆಲವರು ಅಡುಗೆಯ ಮನೆಯಿಂದ ತಿಂಡಿಯನ್ನು ಸವರಿಸಿಕೊಂಡು ಬಂದು ತಮ್ಮ ಪ್ರತಾಪವನ್ನು ತೋರ್ಪಡಿಸುವುದಕ್ಕಾಗಿ ಎಲ್ಲರ ಇದಿರಿನಲ್ಲಿಯೂ ಬಕಬಕನೆ ತಿನ್ನುತ್ತಿದ್ದರು. ಸಣ್ಣ ಸಣ್ಣ ಕೂಸುಗಳು ತಾಯಿಯರ ತೊಡೆಯ ಮೇಲೆ ಮಲಗಿಕೊಂಡು ಹಾಲ ಕುಡಿಯುವುದಕ್ಕಾಗಿ ತಾಯಿಯರಿಗೆ ಚಿತ್ರಹಿಂಸೆ ಮಾಡುತ್ತಿದ್ದುವು.

ಈ ಮಹಾಸಮಾರಂಭದ ಮಧ್ಯದಲ್ಲಿ ವರನು ಬಂದು ಸೇರಿದನು. ಎಲ್ಲೆಲ್ಲಿಯೂ ಆನಂದಸೂಚಕವಾದ ಕೋಲಾಹಲವೆದ್ದಿತು. ಆಗ ಅಚ್ಯುತಾನಂತಗೋವಿಂದ ಶರ್ಮನು ಒಳಗೆ ಬಂದು ವರನಿಗೆ ಅಲಂಕಾರಮಾಡುವಂತೆ ಅಪ್ಪಣೆ ಮಾಡಿದನು. ಅಲ್ಲಿದ್ದ ಹೆಂಗುಸರಲ್ಲಿ ಚದುರೆಯರಾದ ಕೆಲವರು ಸಡಗರದಿಂದ ಸರಳೆಯ ಕೋಣೆಗೆ ಬಂದರು. ಅಲ್ಲಿ ಸರಳೆಯಿರಲಿಲ್ಲ. ಈ ಸುದ್ದಿಯು ಯಜಮಾನನ ಕಿವಿಗೆ ಬೀಳಲು, ಆತನು, "ಸರೋಜಿನಿಯ ಕೋಣೆಯಲ್ಲಿ ನೋಡಿರಿ. ಸರಳೆಯು ಅಲ್ಲಿರಬಹುದು. ಹುಡುಗಿಯು ಈ ಅವೇಳೆಯಲ್ಲಿ ಮನೆಯಲ್ಲಿರದೇ ಮತ್ತೆಲ್ಲಿಗೆ ಹೋದಾಳು" ಎಂದನು. ಹೆಂಗುಸರು ಅಲ್ಲಿಗೂ ಹೋಗಿ ನೋಡಿದರು. ಅಲ್ಲಿಯೂ ಸರಳೆಯಿರಲಿಲ್ಲ. ಎಲ್ಲರಿಗೂ ಭಯವುಂಟಾಗಿ ಮನೆಯೆಲ್ಲವೂ ಹುಡುಕಿದುದಾಯಿತು. ಸರಳಕುಮಾರಿಯು ಸಿಕ್ಕಲೇ ಇಲ್ಲ. ಈ ಸಮಯದಲ್ಲಿ ಅಚ್ಯುತಮಹಾಶಯನ ಮನೋವಿಕಾರಗಳನ್ನು ವರ್ಣಿಸಲಸದಳವು. ಅವನಲ್ಲಿ ಕೋಪ, ವ್ಯಸನ, ಆಶ್ಚರ್ಯ, ಮತ್ತಾವುದೋ ಭಾವಗಳು ಸೇರಿಕೊಂಡು ಅವನನ್ನು ಹೀರಿ ಹಿಪ್ಪೆಮಾಡಿಬಿಟ್ಟುವು. ಕನ್ನೆಯು ಎಲ್ಲಿಯೋ ಹೊರಗೆ ಹೋಗಿರಬಹುದೆಂದು ಸೇವಕರು ಹೊರಗಡೆಯೆಲ್ಲಾ ಹುಡುಕಿದರು. ಎಲ್ಲೆಲ್ಲಿ ನೋಡಿದರೂ ಸರಳೆಯು ಸಿಕ್ಕದಿರಲು, ಎಲ್ಲರೂ ಕಂಗೆಟ್ಟವರಾಗಿ ಮನೆಗೆ ಬಂದು ಸೇರಿದರು. ದುರ್ದಾಂತನಾದ ಅಚ್ಯುತಾನಂತಗೋವಿಂದನಿಗೆ ದಿಕ್ಕು ತೋರದೆಯೇ ಹೋಯಿತು. ಚಿರಕಾಲದಿಂದಲೂ ಸಾಕಿ ಸಲಹಿದ್ದ ಪರಮಹಾಶಯನ ಆಶಾಲತೆಯು

ಒಣಗಿಹೋಯಿತು. ಮಂಗಳಧ್ವನಿಗಳೆಲ್ಲವೂ ಹಾಹಾಕಾರದಲ್ಲಿ ಪರಿಣಮಿಸಿ, ವಿವಾಹ ಮಹೋತ್ಸವಕ್ಕೆ ಕರೆಯಲ್ಪಟ್ಟವರೆಲ್ಲರೂ ಸದ್ದಿಲ್ಲದೆ ತಮ್ಮತಮ್ಮ ಮನೆಗಳಿಗೆ ತೆರಳಿದರು. ಆನಂದದಿಂದ ಪರಿಪೂರ್ಣವಾಗಿದ್ದ ಮನೆಯು ನಿಮಿಷಮಾತ್ರದಲ್ಲಿಯೇ ವ್ಯಸನದಿಂದ ತುಂಬಿಹೋಯಿತು. ಆರ ಬಾಯಲ್ಲಿಯೂ ಮಾತಿಲ್ಲ, ಆರಿಗೂ ಆವುದೂ ಬೇಡ. ಆರಿಗೂ ಊಟಮಾಡದಿದ್ದರೆ ತೀರದು, ಎಲ್ಲರೂ ಬೇಕಾಗಿಯೋ ಬೇಡವಾಗಿಯೋ ಒಂದಿಷ್ಟು ಹೊಟ್ಟೆಗೆ ಹಾಕಿಕೊಂಡು ಭಗ್ನಮನೋರಥರಾಗಿ ಮಲಗಿದರು. ಬೆಳಕು ಹರಿವುದರೊಳಗಾಗಿ ವರಮಹಾಶಯನು ಶಿಶುಪಾಲನಂತೆ ಕಂಗೆಟ್ಟವನಾಗಿ ತನ್ನೂರಿಗೆ ಹೊರಟೇ ಹೋದನು. ಮನೆಯಲ್ಲಿ ರೋದನಕ್ಕ ಮೊದಲಿಟ್ಟಿತು. ಸರಳೆಯ ತಾಯಿ, ಸರೋಜಿನಿ, ದಾಸಿಯರು ಮೊದಲಾಗಿ ಎಲ್ಲರೂ ಎಲ್ಲೆಲ್ಲಿದ್ದರೆ ಅಲ್ಲಲ್ಲಿಯೇ ಗಳಗಳನೆ ಅಳಲಾರಂಭಿಸಿದರು ದುರ್ದಾಂತನಾದ ಅಚ್ಯುತನಾದರೋ, "ಆ ನೀಚನಾದ ವಿನಯನೇ ಈ ಅನರ್ಥಕ್ಕೂ ಮೂಲಕಾರಣವು," ಎಂದು ತಿಳಿದವನಾಗಿ ತುದಿ ಮೊದಲಿಲ್ಲದ ಕೋಪದಿಂದ ಬಡಪಾಯಿಯಾದ ವಿನಯನ ತಲೆಯನ್ನು ಚೆಂಡಾಡುವುದಕ್ಕ ತಕ್ಕ ಉಪಾಯವನ್ನು ಹುಡುಕಲುಜ್ಜುಗಿಸಿದನು.



# ಹದಿನಾರನೆಯ ಲಂಬಕ.



## ಚ ರ ಮ ಪ್ರಾ ರ್ಥ ನೆ,

ಮದುವೆಯ ಸಮಾರಂಭದಲ್ಲಿ ಎಲ್ಲರೂ ತಮ್ಮ ತಮ್ಮ ಕೆಲಸದಲ್ಲಿ ಮೈಮರೆತಿರುವಾಗ, ಸರಳೆಯು ತನ್ನ ಕೋಣೆಯಲ್ಲಿ ಬಿದ್ದುಕೊಂಡು ಪರಿಪರಿಯಾಗಿ ಆಲೋಚಿಸಿದಳೇನೆಂದರೆ —

"ಇಲ್ಲಿ ಬಿದ್ದು ಬಿದ್ದು ಅತ್ತರೆ ಕೇಳುವವರೂ ಇಲ್ಲ, ಆವ ಪ್ರಯೋಜನವಾಗುವುದೂ ಇಲ್ಲ. ಆತ್ಮಸಂರಕ್ಷಣೆಗಾಗಿ ಆವುದಾದರೊಂದು ಉಪಾಯವನ್ನು ಮಾಡಲೇ ಬೇಕು ಆವ ಉಪಾಯವನ್ನು ಅವಲಂಬಿಸಿದರೆ, ಈಗಣ ಮಹಾ ವಿಪತ್ತಿನಿಂದ ಉದ್ಧಾರವಾಗಬಹುದು? ಉಪಾಯವಾವುದೂ ತೋರುವಂತಿಲ್ಲ. ಆವ ಉಪಾಯವೂ ತೋರುವುದಿಲ್ಲವೆಂದು ಇಲ್ಲಿಯೇ ಒಂದೆ

ರಡು ಗಂಟೆಗಳ ಕಾಲವನ್ನು ಕಳೆವುದಾದರೆ, ಅಚ್ಯುತನ ಬಲೆಗೆ ಸಿಕ್ಕಿ ನರಳ ಬೇಕಾಗುವುದು. ಬಳಿಕ ನಾನು ಬದುಕಿ ಫಲವೇನು? ಹೇಗಾದರೂ ಆಗಲಿ. ಮೊದಲು ಈಗ ಬಂದಿರುವ ಕಷ್ಟದಿಂದ ಪಾರಾದರೆ ಮುಂದೆ ಸಾವಕಾಶವಾಗಿ ಚಿಂತಿಸಿ ಕೆಲಸ ಮಾಡಬಹುದು ಇಲ್ಲಿಯೇ ಹುಟ್ಟಿ ಇಲ್ಲಿಯೇ ಬಳೆದು, ಈಗ ತಟ್ಟನೆ ಈ ಸ್ಥಳವನ್ನು ಬಿಟ್ಟು ಹೇಗೆ ಹೋಗಲಿ? ಈ ಸ್ಥಳದಲ್ಲಿಯೇ ನನಗೆ ಲಾಲನ ಪಾಲನವಾಗಿರುವುದು, ಈ ಸ್ಥಳದಲ್ಲಿಯೇ ನನ್ನ ಪ್ರೇಮವು ಅಂಕು ರಿತವಾಗಿರುವುದು. ಇಂತಹ ಸ್ಥಳವನ್ನು ನಾನು ಹೇಗೆ ಬಿಟ್ಟುಬಿಟ್ಟು ಹೋ ಗಲಿ? ಇಲ್ಲಿನ ಪ್ರಕೃತಿಯ ಸೌಂದರ್ಯವು ಅತಿ ರಮಣೀಯವಾಗಿರುವುದು. ನಾನು ಇದನ್ನು ತ್ಯಾಗ ಮಾಡಿ ಹೇಗೆ ಹೊರಟು ಹೋಗಲಿ? ಹೊರಗೆ ಹೊರ ಡಲು ನನಗೆ ಕಾಲೇ ಬರುವುದಿಲ್ಲವಲ್ಲಾ! ನನ್ನ ಎದೆಯಾದರೋ ಡವಡವನೆ ಬಡಿದುಕೊಳ್ಳುತ್ತಿರುವುದು ಈ ಚಿರಪರಿಚಿತವಾದ ಸ್ಥಳವನ್ನು ಬಿಡಬೇ ಕೆಂದು ಆರಿಗೆ ತಾನೇ ಮನವೊಡಂಬಡುವುದು? ಬಿಡದೆಯೇ ಹೋದಲ್ಲಿ ನನಗೆ ಸರ್ವನಾಶವೇ ಆಹುದು "ಆತ್ಮಾರ್ಥೇ ಪೃಥಿವೀಂ ತ್ಯಜೇತ್" ಎಂದು ನೀತಿಕಾರರ ವಚನವಿರುವುದರಿಂದ ಆತ್ಮಸಂರಕ್ಷಣೆಗಾಗಿ ದೇಶತ್ಯಾಗಮಾಡಿ ದರೂ ಚಿಂತೆಯಿಲ್ಲ"

ಸರಳಕುಮಾರಿಯು ಹೀಗೆ ಮನದಲ್ಲಿ ನಿರ್ಧರಮಾಡಿಕೊಂಡು ತೋಟ ವನ್ನೂ, ತೋಟದಲ್ಲಿರುವ ಗಿಡು ಮರ ಬಳ್ಳಿಗಳನ್ನೂ, ಕಲಕಲನಾದಿನಿಯಾದ ನದಿಯನ್ನೂ, ತನ್ನ ಕಿರುಮನೆಯನ್ನೂ ಒಂದು ಸಲವೆ ವಿಶ್ವಾಸದಿಂದ ನೋಡಿದ ಬಳಿಕ ತನ್ನ ತಾಯನ್ನೂ, ಸರೋಜಿನಿಯನ್ನೂ, ತನ್ನ ಸಖಿಯ ರನ್ನೂ, ತನ್ನ ಕುಲದೈವವನ್ನೂ ಮನಸ್ಸಿನಿಂದ ಧ್ಯಾನಮಾಡಿ, ಮತ್ತೊಂದು ಕ್ಷಣಕಾಲವೂ ಅಲ್ಲಿ ನಿಲ್ಲದೆಯೇ ಹೊರಗೆ ಹೊರಟು ಹೋದಳು. ಸರೋಜಿ ನಿಯನ್ನಾದರೂ ಒಂದುಸಲ ನೋಡಿಕೊಂಡು ಹೋಗೋಣವೆಂದು ಒಂದೆ ರಡು ಹಜ್ಜೆಗಳನ್ನು ಹಿಂದಕ್ಕೆ ಇಟ್ಟು, ಈಗ ನೋಡುವುದಾದರೆ ಅಪಾಯ ಸಂಭವಿಸಿದರೂ ಸಂಭವಿಸಬಹುದೆಂದು ತಿಳಿದು ಸರಳೆಯು ಮುಂದೆ ಮುಂದೆ ತೆರಳಿದಳು. ಈಗ ಅವಳಿಗೆ ಆರನ್ನಾದರೂ ನೋಡಬೇಕೆಂಬ ಆಸೆಯು ಅಳಿಸಿ ಹೋಗಿದ್ದಿತು. ಸರಳಕುಮಾರಿಯು ತನ್ನ ಎದೆಯನ್ನು ಕಲ್ಲುಮಾಡಿಕೊಂಡು ಧೈರ್ಯವನ್ನೇ ಅವಲಂಬಿಸಿ ಮನೆಯಿಂದ ಹೊರಟೇ ಹೋದಳು. ಮನೆ ಬಿಟ್ಟು ಎಂದೂ ಹೊರಹೊರಡದ ಕುಲಬಾಲಿಕೆಯಾದ ಸರಳಕುಮಾರಿಯು

ಕಣ್ಣುಗಳಲ್ಲಿ ಧಾರಾಳವಾಗಿ ನೀರನ್ನು ಸುರಿಸುತ್ತಾ, ಸಂಸಾರ ಸಾಗರದ ಅಂತರಾಳದಲ್ಲಿ ತನ್ನ ಜೀವರತ್ನವು ಎಲ್ಲಿ ಅಡಗಿರುವುದೆಂಬುದನ್ನು ಹುಡುಕಲೋಸುಗವೋ ಎಂಬಂತೆ ಹೊರಟು ಹೋದಳು.



# ಹದಿನೇಳನೆಯ ಲಂಬಕ.

## ಬೀದಿಯ ಬಿಕಾರಿ.

ಸರಳೆಯು ಹೊರಟು ಹೋಗಿ ಮೊದಲಿನ ರಾತ್ರಿ ಕಳೆಯಿತು, ಒಂದು ಹಗಲು ಕಳೆಯಿತು, ಮತ್ತೊಂದು ರಾತ್ರಿಯೂ ಕಳೆದುಹೋಯಿತು ಮತ್ತೆ ಬೆಳಗಾಯಿತು ಸೂರ್ಯನು ಎಂದಿನಂತೆಯೇ ಉದಯಿಸಿದನು ಪಕ್ಷಿಗಳೆಲ್ಲವೂ ಎಂದಿನಂತೆಯೇ ಹೊಟ್ಟೆಯ ಪಾಡಿಗಾಗಿ ಹೊರಹೊರಟವು ಜನರು ಎಂದಿನಂತೆಯೇ ತಮ್ಮ ತಮ್ಮ ಕೆಲಸಗಳಲ್ಲಿ ಆಸಕ್ತರಾದರು. ಸೂರ್ಯಕಿರಣದ ಸಂಪರ್ಕದಿಂದ ಜೀವಜಂತುಗಳೆಲ್ಲವೂ ಸಂತಸಗೊಂಡು ಅಲ್ಲಲ್ಲಿ ತಿರುಗಾಡಲಾರಂಭಿಸಿದುವು ಎಲ್ಲಿ ನೋಡಿದರೂ ಸಂತೋಷದ ಮೇಲೆ ಸಂತೋಷವು ಉಕ್ಕಿಬರುತ್ತಿರುವುದು ಈ ಸಂತೋಷದ ಮಧ್ಯದಲ್ಲಿ ಸರಳೆಯೊಬ್ಬಳು ಮಟ್ಟಿಗೆ ದುಃಖಿಸಿ ಎಂದೂ ದೂರ ನಡೆದು ಅಭ್ಯಾಸವೇ ಇಲ್ಲದ ಸರಳೆಗೆ ಕಲ್ಲು ಮುಳ್ಳುಗಳ ದಾರಿಯಲ್ಲಿ ನಡೆವುದರಿಂದುಂಟಾದ ಶ್ರಮವೂ, ಕೇವಲವಾಗಿ ವಿಶ್ವಾಸದಿಂದ ಕಾಪಿಡುತ್ತಿದ್ದ ಸ್ವಜನರನ್ನು ತ್ಯಾಗಮಾಡಿ ಹೊರಟು ಬಂದುದರಿಂದುಂಟಾದ ವ್ಯಸನವೂ, ಅತ್ಯಾಚಾರವನ್ನು ಮಾಡತೊಡಗಿದ ಶತ್ರುರೂಪದಲ್ಲಿನ ತಂದೆಯ ಮೇಲಣ ಆಗ್ರಹವೂ, ದುಃಖಕ್ಕೆ ತೌರೂರಾಗಿಹ ತನ್ನ ಜೀವಿತದಲ್ಲಿನ ವಿರಕ್ತಿಯೂ, ಇವೇ ಮೊದಲಾದ ಬಗೆಬಗೆಯ ಭಾವಗಳು ಸರಳೆಯನ್ನು ತರಳೆಯನ್ನಾಗಿ ಮಾಡಿಬಿಟ್ಟುವು. ಪ್ರಪಂಚವನ್ನರಿಯದ ಪಸುಳೆಯಾದ ಸರಳೆಯ ಹೃದಯವು ಇಂದು ಅಗ್ನಿಮಯಿಯಾದ ಮರುಭೂಮಿ ಅಗ್ನಿಯಂತಿರುವ ಮರುಭೂಮಿಯಲ್ಲಿ, ಅದರಲ್ಲಿಯೂ ಬೆಂಕಿಯ ಕಿಡಿಗಳಂತಿರುವ ಮರಳುಗಳ ರಾಶಿಯ ಮಧ್ಯದಲ್ಲಿ ಶ್ರಮಾಪಹಾರಿಯಾದ ಶೀತಲ ಪ್ರದೇಶವು ದೊರೆವ ಸಂಭವವುಂಟೇನು ?

ಕ್ರಮಕ್ರಮವಾಗಿ ಬಿಸಿಲಿನ ತಾಪವು ಹೆಚ್ಚುತ ಬಂದಿತು. ಸೂರ್ಯನ ಒಂದೆರಡು ಕಿರಣಗಳು ಮರದೆಲೆಗಳ ಸಂದಿಯಿಂದ ಸರಿದು ಬಂದು ಬುಡದಲ್ಲಿ ಕುಳಿತಿದ್ದ ಸರಳೆಯ ಮುಖದ ಮೇಲೆ ಬಿದ್ದುವು. ಬಳಿಕ ವ್ಯಸನದಿಂದ ಸೊಕ್ಕಿ ಸೊರಗಿ ಹೋಗಿದ್ದ ಸರಳೆಯ ಹೃದಯದಲ್ಲಿ ಭಯವುಂಟಾಯಿತು. ಆ ಕೂಡಲೆ ಆಕೆಯು ಸುತ್ತಲೂ ನೋಡಿ ಚಿಂತಿಸಿದಳು:—

"ನಾನು ಈಗ ಎಲ್ಲಿಗೆ ಹೋಗಲಿ? ಎಲ್ಲಿಗೆ ಹೋದರೆ ನನಗೆ ಆಸರೆ ಸಿಕ್ಕುವುದು? ಸಮೀಪದ ಗ್ರಾಮಗಳಲ್ಲಿ ತಿರುಗಾಡುವುದಾದರೆ ವಿಪತ್ತು ಇದ್ದೇ ಇರುವುದು. ಈಗ ಒದಗಿ ಬಂದಿರುವ ವಿಪತ್ತಿನ ಜತೆಗೆ ಹೊಸಹೊಸದಾದ ವಿಪತ್ತುಗಳು ಬಂದು ಸೇರುವುದಾದರೆ ನನ್ನ ಪರಿಣಾಮವೇನು? ಎಡವಿದ ಕಾಲೇ ಮೇಲೆ ಮೇಲೆ ಎಡವುದುಂಟು ನಾನು ಜನರಿದ್ದಲ್ಲಿ ಹೋಗದೇ ಇರಲು ಸಾಧ್ಯವಿಲ್ಲ ಜನರಿಲ್ಲದ ಪ್ರದೇಶಗಳಲ್ಲಿ ವಾಸವಾಗಿರಲು ನನ್ನಿಂದಾಗತಕ್ಕ ಕೆಲಸವಲ್ಲ. ಜನರ ಮಧ್ಯದಲ್ಲಿ ಒಂದು ಬಗೆಯ ದುಃಖವುಂಟು, ಅವರನ್ನು ಬಿಟ್ಟಿರುವುದರಿಂದ ಮತ್ತೊಂದು ಬಗೆಯ ದುಃಖವೂ ಉಂಟು. ನಾನು ಹೊಟ್ಟೆಗೆ ಆಹಾರವನ್ನು ತೆಗೆದುಕೊಂಡು ಈಗ್ಗೆ ಎರಡು ದಿನಗಳಾಗುತ್ತಾ ಬಂದುವು ಉಪವಾಸವಿದ್ದು ಎಷ್ಟು ದಿನಗಳು ತಾನೇ ಬದುಕುವುದಕ್ಕಾದೀತು? ನಾನು ಈ ಕಾಡಿನಲ್ಲಿಯೇ ಇರುವುದಾದರ ನನ್ನ ಅನ್ನಗತಪ್ರಾಣವುಳ್ಳ ದೇಹವು ಬಹುಕಾಲವಿರಲಾರದು ನನ್ನ ಪ್ರಾಣವು ದೇಹವನ್ನು ಬಿಟ್ಟು ತೆರಳುವುದಾದರ ತೆರಳಲಿ ನಾನಾದರೋ ಬದುಕಿ ಫಲವೇನು? ಸರಳೆಯು ಸತ್ತುಹೋದಳೆಂಬುದಾಗಿ ಆರು ತಾನೇ ಸಂಕಟಪಡುವವರು ಇರುವರು? ನಾನು ಸಾಯುವುದಾದರ ಈ ಪ್ರಪಂಚಕ್ಕೆ ನಷ್ಟವೇನೂ ಇರಲಾರದಷ್ಟೇ? ಬದುಕಿ ಬಗೆಬಗೆಯ ಕಷ್ಟನಷ್ಟಗಳನ್ನು ಅನುಭವಿಸುವುದಕ್ಕಿಂತಲೂ ಸತ್ತು ಈ ದುಃಖಗಳಿಂದ ಪಾರಾಗುವುದೇ ಮೇಲು ಶಾಸ್ತ್ರಕಾರರಾದರೋ ಆತ್ಮಹತ್ಯೆಯನ್ನು ನಿಷೇಧಿಸಿರುವರು ಶಾಸ್ತ್ರಕ್ಕೆ ವಿರೋಧವಾಗುವಂತೆಯೂ, ಲೋಕನಿಂದೆಗೆ ಅವಕಾಶವಾಗುವಂತೆಯೂ, ನಾನು ಆತ್ಮಹತ್ಯೆ ಮಾಡಿಕೊಳ್ಳುವುದಾದರ, ಸೂರ್ಯಚಂದ್ರರಿರುವ ವರಗೂ ನಾನು ಅಪವಾದಕ್ಕೆ ಗುರಿಯಾಗುವೆನು. ನಾನು ಈ ಕಷ್ಟವನ್ನು ಸಹಿಸಲಾರದೆ ಕೆಟ್ಟ ಹೆಸರನ್ನು ಬಿಟ್ಟು ಸತ್ತರೂ, ನನಗೆ ಪರಲೋಕವಿಲ್ಲ. ಕಷ್ಟಗಳು ಮನುಷ್ಯನಿಗಲ್ಲದೆ

ಅಪಯಶಸ್ಸಾದರೋ ಇಹತ್ರಯಲ್ಲಿಯೂ ಪರತ್ರಯಲ್ಲಿಯೂ ಅನಂತಾನಂತ ವಾಗಿ ದುಃಖವನ್ನುಂಟುಮಾಡುವುದರಿಂದ ನಮಗೆ ಜನ್ಮಜನ್ಮಾಂತರಕ್ಕೂ ಉತ್ತಾರಣೆಯೆಂಬುದೇ ಇಲ್ಲದಂತಾಗಿ ಹೋಗುವುದು.

ಸುಖದ ಅನಂತರದಲ್ಲಿ ದುಃಖವೂ, ದುಃಖದ ಅನಂತರದಲ್ಲಿ ಸುಖವೂ ಉಂಟೆಂದು ಬಲ್ಲವರು ನುಡಿದಿರುವರು. ಈಗ ನನಗೆ ದುಃಖವು ಒದಗಿಬಂದಿರುವುದು. ಮುಂದೆ ನನಗೆ ಹೆಚ್ಚಿನ ಸುಖವುಂಟಾಗುವುದಕ್ಕಾಗಿಯೇ ಈಗ ಅಪರಿಮಿತವಾದ ಕಷ್ಟವೇತಕ್ಕೆ ಬಂದಿರಬಾರದು ? ಇದಾವುದನ್ನೂ ಪರಿಕಿಸದೆಯೇ ನಾನು ಜನ್ಮವನ್ನು ನೀಗಿಕೊಂಡರೆ ಏನ ಮಾಡಿದಂತಾಯಿತು? ಅಲ್ಪ ಕಷ್ಟವನ್ನು ಹೋಗಲಾಡಿಸುವುದಕ್ಕಾಗಿ ಯತ್ನಮಾಡಿ ಕಷ್ಟಗಳನ್ನು ಇಮ್ಮಡಿಯಾಗಿ ತಂದುಕೊಳ್ಳುವವರಿಗಿಂತಲೂ ಮೂಢರಾರಿರುವರು? ಶಿವಶಿವಾ ! ಈ ಹಾಳುಹೊಟ್ಟೆಗಾಗಿ ಕಷ್ಟಪಟ್ಟೇ ತೀರಬೇಕು ನನ್ನಮನವು ಕಷ್ಟವನ್ನಾದರೂ ಸಹಿಸೀತು, ಆತ್ಮಹತ್ಯೆಯನ್ನು ಮಟ್ಟಿಗೆ ಸಹಿಸಲೊಲ್ಲದು ಇದೇನಚ್ಚರಿ !

ನಾನು ಸಾಯಲಾರ, ಆದುದರಿಂದ ಕಷ್ಟಗಳನ್ನಾದರೂ ಅನುಭವಿಸುವೆನು. ಕಷ್ಟಪಟ್ಟರೆ ಸುಖವುಂಟೆಂದು ಕಾರಣವಾದಿಗಳು ಹೇಳುವರು. ನಾನು ಈಗ ಕಷ್ಟಗಳನ್ನು ಅನುಭವಿಸುವುದಕ್ಕೆ ಮುಂದುವರಿದು ಬಂದಿರುವೆನು, ಆದರೆ ಕಷ್ಟಪಡುವುದು ಹೇಗೆ ? ನಾನು ಎಲ್ಲಿದ್ದುಕೊಂಡು ಕಷ್ಟಪಡಬೇಕು? ಈಗ ನಾನು ಆವ ಕೆಲಸ ಮಾಡಬಲ್ಲೆನು? ಭಿಕ್ಷೆಯೆತ್ತಿ ಬದುಕಲಾದೀತೇ? ಇದರಿಂದ ದೋಷವೇನು ? ನಾನು ಶ್ರೀಮದ್ಗಾಂಭೀರ್ಯದಿಂದ ಕುಳಿತಿರುವುದಾದರೆ, ನನ್ನ ದುರ್ದುದ್ದುವೋಗವನ್ನು ನೋಡಿ ಆರು ತಾನೇ ಹೊಟ್ಟೆಗೆ ತಂದುಹಾಕುವರು" ಅವರವರ ಹೊಟ್ಟೆಯ ಪಾಡು ಅವರವರಿಗೆ ಮಿತಿಮೀರಿರುವುದರಿಂದ, ಆರೂ ನನ್ನ ಯೋಗಕ್ಷೇಮವನ್ನು ವಹಿಸಲೊಲ್ಲರು. ಆದಕಾರಣ ನಾನು ಆರಿಗೂ ತೊಂದರೆ ಕೊಡದೆ ಭಿಕ್ಷೆ ಬೇಡುವೆನು ಜನರಾದರೋ ಇತರರಿಗೆ ಉಪಕಾರ ಮಾಡಲು ಕಯ್ಯಲ್ಲಾಗದಿದ್ದರೂ, ಮನಬಂದಂತೆ ಬಯ್ಯುವರು, ಕೆಲವರು ಪೂರ್ವಾಪರವನ್ನು ಪರಿಶೀಲಿಸದೆಯೇ ಕೇಕೇ ಹಾಕಿಕೊಂಡು ಹೀಯಾಳಿಸುವರು ಇದರಿಂದ ನನಗಾಗುವುದೇನು ? ನಾನು ತ್ರಿಕರಣಶುದ್ಧಿಯಿಂದಲೂ ಎಲ್ಲಿಯ ವರಗೆ ಶುದ್ಧನಾದ ಮನೋಭಾವವುಳ್ಳವನಾಗಿರುವೆನೋ, ಅಲ್ಲಿನ ವರಗೂ ನನಗೆ ಭಯವೆಂದರೇನು? ಜನರು ತೋರಿದ ಹಾಗೆಲ್ಲ ಆಡಿಕೊಳ್ಳುವರು ಅವರನ್ನು ಮಚ್ಚಿಸುವುದು ನನ್ನಿಂದಾಗದಾ

ರದು. ನಾನು ತಿರಿದು ತಿನ್ನುವೆನು. ಹೊಟ್ಟೆಗಾಗಿ ತಿರಿದು ತಿನ್ನುವುದರಿಂದ ಪಾಪವೇನೂ ಬರಲಾರದು."

ಸರಳಕುಮಾರಿಯು ಹೀಗೆ ದೃಢವಾದ ಪ್ರತಿಜ್ಞೆಯನ್ನು ಮಾಡಿಕೊಂಡು ತಾನಿದ್ದ ತಾಣದಿಂದ ಮುಂದಕ್ಕೆ ಪಯಣಮಾಡಿದಳು. ಅನ್ನವಿಲ್ಲದುದರಿಂದ ಮುಂದಕ್ಕೆ ಅಡಿಯಿಡಲು ಕಾಲೇ ಬಾರದುದರಿಂದಲೂ, ಚಿಂತೆಯಿಂದಲೂ, ಭಯದಿಂದಲೂ, ರಾತ್ರಿಯಲ್ಲಿ ನಿದ್ರೆ ಬಾರದೆ ತಲೆ ಸುತ್ತುತಿದ್ದುದರಿಂದಲೂ, ಸರಳೆಯು ಬೀಳುತ್ತಲೂ, ಏಳುತ್ತಲೂ, ಅಡಿಗಡಿಗೆ ಕೊಂಚ ಕೊಂಚವಾಗಿ ವಿಶ್ರಮಿಸಿಕೊಳ್ಳುತ್ತಲೂ, ಬಾರಿಬಾರಿಗೂ ತನ್ನ ದುರ್ದೈವವನ್ನು ನಿಂದಿಸುತ್ತಲೂ, ಚೆದರಿಹೋಗಿದ್ದ ತನ್ನ ಧೈರ್ಯವನ್ನು ಒಟ್ಟುಗೂಡಿಸಿಕೊಂಡು ಸಮೀಪದಲ್ಲಿದ್ದ ಒಂದು ಗ್ರಾಮವನ್ನು ಕುರಿತು ಹೊರಡಲುಜ್ಜುಗಿಸಿದಳು.

ಆ ಸಮಯದಲ್ಲಿ ಅದೇ ಮಾರ್ಗವಾಗಿ ವೈಷ್ಣವಿಯೊಬ್ಬಳು ನೆರೆಯೂರಿಗೆ ಹೋಗಿ ಭಿಕ್ಷೆ ಬೇಡಿಕೊಂಡು ಬರುವ ನಿಮಿತ್ತವಾಗಿ ಹೊರಟಿದ್ದಳು. ಆಕೆಯು ಈ ನಿರ್ಜನ ಪ್ರದೇಶದಲ್ಲಿ ಒಬ್ಬಳೆ ಸಂಚಾರಮಾಡುತ್ತಿದ್ದ ಹುಡುಗಿಯನ್ನು ನೋಡಿ,—"ಮಗು, ನೀನಾರಮ್ಮ? ಇಲ್ಲಿ ಒಬ್ಬಳೇ ಸಂಚರಿಸಲು ಕಾರಣವೇನು ?" ಎಂದು ಕೇಳಿದಳು. ಏನೇನೋ ಚಿಂತಿಸುತ್ತಾ ಹೋಗುತ್ತಿದ್ದ ಸರಳೆಯು ಮನುಷ್ಯರ ಧ್ವನಿಯನ್ನು ಕೇಳಿದ ಕೂಡಲೆ ಬೆಚ್ಚಿ ಬೆದರಿದವಳಾಗಿ,—"ನಾನು ಬೀದಿಯ ಬಿಕಾರಿ," ಎಂದುಸುರಿದಳು.

ವೈಷ್ಣವಿ—ಭಿಕ್ಷೆಗಾಗಿ ಹೊರಟಿರುವೆಯೇನು?

ಸರಳೆ—ಅಹುದು. ನಾನು ಭಿಕ್ಷೆಗಾಗಿ ಹೊರಡಕೂಡದೇನು ?

ವೈಷ್ಣವಿ—ಅದಕ್ಕೇನಮ್ಮ ! ಹೊಟ್ಟೆಗಿಲ್ಲದ ಬಡಬಗ್ಗರು ತಿರಿದು ತಿಂದರೆ ತಪ್ಪೇನು ? ನನ್ನೊಡನೆ ಬರುವೆಯಾ ?

ಸರಳೆಯು ಇದೇ ಸರಿಯಾದ ಸಮಯವೆಂದು ತಿಳಿದು ಅವಳೊಡನೆ ಹೊರಡಲು ಯತ್ನಮಾಡಿದಳು, ಆದರೆ ದೇಹದಲ್ಲಿ ತ್ರಾಣವಿಲ್ಲದುದರಿಂದ ದಾರಿಯಲ್ಲಿ ಒಂದೆರಡು ತಡವೆ ಮುಗ್ಗರಿಸಿ ಬಿದ್ದಳು. ವೈಷ್ಣವಿಯು ಇವಳ ಅವಸ್ಥೆಯನ್ನು ನೋಡಿ ಅಲ್ಲಿ ನಿಂತುಕೊಳ್ಳದೆ ಮುಂದಕ್ಕೆ ನಾಗಿದಳು. ಸರಳೆಯಾದರೋ ಯತ್ನವಿಲ್ಲದೆಯೇ ಒಂದು ಗಿಡದ ಕೆಳಗೆ ವಿಶ್ರಮಿಸಿಕೊಳ್ಳುವುದಕ್ಕಾಗಿ ಕುಳಿತುಬಿಟ್ಟಳು. ಭಿಕ್ಷೆಗಾಗಿ ಅದೇ ದಾರಿಯಲ್ಲಿ ಪಯಣಮಾಡಿ ಬರು

ತ್ತಿದ್ದ ಇನ್ನೂ ಕೆಲವು ಮುದುಕಿಯರು ಸರಳೆಯನ್ನು ಆರೆಂದೂ ವಿಚಾರಿಸದೇ ತಮ್ಮ ತಮ್ಮ ದಾರಿವಿಡಿದು ಹೊರಟೇ ಹೋದರು: ಇದೂ ಅಲ್ಲದೆ, ಇನ್ನೂ ಅನೇಕ ಜನರು ಬರುವವರು ಬರುತ್ತಿದ್ದರು, ಹೋಗುವವರು ಹೋಗುತ್ತಿದ್ದರು. ಇವರಾರೂ ಸರಳೆಯನ್ನು ಗಮನಿಸಲೇ ಇಲ್ಲ. ಅಷ್ಟುಹೊತ್ತಿಗೆ ಮಧ್ಯಾಹ್ನದ ಸಮಯವಾಯಿತು. ಗ್ರಾಮಾಂತರಕ್ಕೆ ಹೋಗಿದ್ದವರೆಲ್ಲರೂ ಒಬ್ಬೊಬ್ಬರಾಗಿ ಹಿಂತಿರುಗಿ ಬರಲಾರಂಭಿಸಿದರು. ಬಂದವರೆಲ್ಲರೂ ಗಿಡದ ಕೆಳಗೆ ಕುಳಿತಿದ್ದ ಹುಡುಗಿಯನ್ನು ಒಂದೆರಡು ಮಾತನ್ನಾಡಿಸಿ ಸರಿಯಾದ ಪ್ರತ್ಯುತ್ತರವು ಬಾರದಿರುವುದನ್ನು ಕಂಡು ತಂತಮ್ಮ ಕೆಲಸದ ಮೇಲೆ ಹೊರಟುಹೋಗುತ್ತಿದ್ದರು. ಕೊಂಚ ಹೊತ್ತಿನಲ್ಲಿಯೇ ಜನರು ಬರುವುದೂ ನಿಂತು ಹೋಯಿತು. ಮಧ್ಯಾಹ್ನವೂ ಕಳೆದು ಅಪರಾಹ್ಣವಾಗಲು, ಮತ್ತೆ ಜನರ ಸಂಚಾರವು ಪ್ರಾರಂಭವಾಯಿತು. ಇನ್ನು ಇಲ್ಲಿರುವುದಾದರೆ ಮತ್ತಾವ ತೊಂದರೆಯುಂಟಾಗುವುದೋ ಎಂದು ತಿಳಿದು ಸರಳೆಯು ಅಲ್ಲಿಂದೆದ್ದು ದೂರವಾಗಿ ಸರಿದು ಹೋಗಿ ಜನರು ಕಾಣದ ಹಾಗೆ ಮತ್ತೊಂದು ಗಿಡದ ಕೆಳಗೆ ಕುಳಿತುಕೊಂಡಳು, ಕುಳಿತುಕೊಂಡು ಮತ್ತೆ ಚಿಂತಿಸತೊಡಗಿದಳು —

"ನಾನು ಹೀಗಿದ್ದರೆ ಮತ್ತೆಷ್ಟು ಕಾಲವನ್ನು ಕಳೆವುದಕ್ಕಾದೀತು? ಆವುದು ಕೇಳಿದರೂ ಹೊಟ್ಟೆ ಕೇಳಲೊಲ್ಲದು ನಾನು [illegible] ಪ್ರದಕ್ಕೆ ಹೋಗಲೇಬೇಕು. ನನಗೆ ಸಂಕೋಚವೇಕೇ? ನನಗೆ ಮಾನಾಪಮಾನವೆಲ್ಲಿರುವುದು? ನನಗೆ ನಾಚುಗೆಯೆಂದರೇನು? ನನಗೆ ಮತ್ತಾರ ಭಯ ತಾನೇ ಇನಿರುವುದು? ನಾನು ಒಂದಾನೊಂದು ಕಾಲದಲ್ಲಿ ರಾಜನ ಮಗಳಂತೆ ಇದ್ದಿರಬಹುದು. ಈಗ ಅದರ ಸುದ್ದಿಯೇಕೆ? ಈಗ ಆ ಕಾಲವಲ್ಲ ಆ ಕಾಲವು ಹೋಗಿ ಈ ಕಾಲವು ಬಂದಿರುವುದು. ಕೋಟೀಶ್ವರನ ಮಗಳಾದರೂ ಹಸಿವಾದ ಕಾಲದಲ್ಲಿ ಒಂದು ತುತ್ತು ಅನ್ನಕ್ಕೆ ಬಾಯಿ ಬಿಡಲೇ ಬೇಕಾಗುವುದು. ಈಗಳಾದರೋ ನನಗೆ ಹಸಿವಿನಿಂದ ಪ್ರಾಣ ಹೋಗುತ್ತಿರುವುದು, ನನಗೆ ಬೇಕಾಗಿರುವುದು ಒಂದು ಹಿಡಿಯನ್ನವು ಅನ್ನ ಹೊರತು ನನಗೆ ಮತ್ತೇನೂ ಬೇಕಿಲ್ಲ. ಆಹಾರ ವ್ಯವಹಾರಗಳಲ್ಲಿ ನಾಚುಗೆ ಪಟ್ಟರೆ ಬದುಕುವುದೆಂದರೇನು? ಹಿಂದೆ ನಾನು ರಾಜಭೋಗವನ್ನು ಅನುಭವಿಸಿದೆನಾದಕಾರಣ, ಈಗ ಈ ಕಷ್ಟಗಳನ್ನು ಅನುಭವಿಸಲಾರೆನೆಂದು ಆರ ಮುಂದೆ ಮೊರೆಯಿಡಲಾದೀತು? ಇರುವ ಕಾಲದಲ್ಲಿ ಎಲ್ಲವೂ ಇದ್ದಿತು, ಅನುಭವಿಸಿಯೂ ಆಯಿತು. ಈಗ ಅವ

ಲ್ಲವೂ ಬೇಕೆಂದರಕ್ಕೆ ಬರುವುವೇ? ಇದ್ದಾಗಲೆಲ್ಲಾ ವೈಭವದಿಂದಲೇ ಇದ್ದೆನು. ಈಗ ಅದಿಲ್ಲವಾಗಿ ನನಗೆ ಸಂಕೋಚವೆಂದರೇನು? ಇನ್ನೂ ನಾನು ತಡಮಾಡುವುದಾದರೆ ಕತ್ತಲೆಯು ಆವರಿಸಿಕೊಂಡು ಬಂದು ನನಗೆ ಊಹಿಸಲಸದಳವಾದ ಪ್ರಾಣಾಪತ್ತುಂಟಾಗುವ ಸಂಭವವಿರುವುದು."

ಸರಳೆಯು ಹೀಗೆ ಚಿಂತಿಸಿದ ಬಳಿಕ ತನ್ನ ದೇಹದಲ್ಲಿ ಹುರಿದುಂಬಿಕೊಂಡು ಹೊರಟಳು. ಆಗ ಕೆಲವು ಮಂದಿ ಭಿಕ್ಷುಕರು ಆ ಮಾರ್ಗವಾಗಿ ಬಂದು ಇವಳನ್ನು ನೋಡಿ,—"ನೀನಾರಮ್ಮ? ನೀನೆಲ್ಲಿಗೆ ಹೊರಟಿರುವೆ?" ಎಂದು ಕೇಳಿದರು.

ಸರಳೆ—ನಾನು ಬೀದಿಯ ಬಿಕಾರಿ.

ಭಿಕ್ಷುಕ—ನೀನೂ ಉಪಾದಾನಕ್ಕೆ ಹೊರಟಿರುವೆಯಾ? ಹಾಗಾದರೆ ನಮ್ಮೊಡನೆ ಬಾ, ಈ ರಾತ್ರಿಯಲ್ಲಿ ಸಮೀಪದ ಗ್ರಾಮದೊಳಗೆ ಒಂದು ದೊಡ್ಡ ಸಮಾರಾಧನೆಯು ನಡೆವುದಂತೆ, ಬಗೆಬಗೆಯ ರುಚಿರುಚಿಯಾದ ಭಕ್ಷ್ಯಭೋಜ್ಯಗಳಂತೆ, ಕೇಳಿಕೇಳಿದ ಹಾಗೆಲ್ಲಾ ಭೋಜನಮಾಡಿಸುವರಂತೆ, ಊಟವಾದ ಕೂಡಲೆ ನಾಲ್ಕು ನಾಲ್ಕು ಆಣೆಯಂತೆ ನೀನೂ ಬಾರಮ್ಮ.

ಸರಳೆಯ ಮನವು ಹಿಂಜರಿಯಿತು ಹೊರಡಲು ಹಿಂದೆ ಮುಂದೆ ನೋಡುತ್ತಿದ್ದ ಹುಡುಗಿಯನ್ನು ನೋಡಿ, ತಡಮಾಡುವುದಾದರೆ, ಊಟಕ್ಕೆ ಸೊನ್ನೆ ಬೀಳುವುದೆಂದು ಎಲ್ಲರೂ ಮುಂದೆ ಮುಂದೆ ತೆರಳಿದರು ಸರಳೆಯೂ ಅತಿ ಪ್ರಯಾಸದಿಂದ ಮೆಲ್ಲಮೆಲ್ಲನೆ ಬಿಕ್ಷುಕರ ಹಿಂದೆ ಹಿಂದೆಯೇ ಹೊರಟಳು. ಕೊಂಚಕಾಲವೆನ್ನುವುದರೊಳಗಾಗಿ ಸಮಾರಾಧನೆಯಾಗುತ್ತಿದ್ದ ಮನೆಯು ಸಮೀಪಿಸಿತು ಎಲ್ಲರೂ "ಜಯ ಶಂಕರ" ಎಂದು ಮನೆಯೊಳಗೆ ಹೋಗಿ ಕುಳಿತರು. ಸರಳೆಯು ಪರರ ಮನೆಯೊಳಗೆ ಪ್ರವೇಶಮಾಡಲು ಕಾಲು ಬಾರದೆ, ನಾಚುಗೆಯಿಂದ ತಲೆವಾಗಿದವಳಾಗಿ ದೂರದಲ್ಲಿಯೇ ಒಂದೆಡೆಯಲ್ಲಿ ನಿಂತುಕೊಂಡಳು. ಭೋಜನದ ಕಾಲವು ಬಂದೊಡನೆಯೇ, ಕಂಗಾಳಿಗಳು "ತಾನು ಮುಂದೆ ತಾನು ಮುಂದೆ" ಎಂದು ಒಬ್ಬರ ಮೇಲೊಬ್ಬರು ಬಿದ್ದು ಮಹತ್ತರವಾದ ಗದ್ದಲವೆಬ್ಬಿಸಿದರು. ಇದನ್ನು ನೋಡಿ ಸರಳೆಯು ಅಂಜಿದವಳಾಗಿ ಮತ್ತಷ್ಟು ದೂರವಾಗಿ ಹೋಗಿ ನಿಂತುಕೊಂಡಳು. ಹತ್ತಿರದಲ್ಲಿದ್ದ ಒಬ್ಬಿಬ್ಬರು ಸರಳೆಯನ್ನು ಮುಂದಾಗಿ ನುಗ್ಗುವುದಕ್ಕೆ ಹೇಳಿದರು. ಸರಳೆಯು ಅವ ಮಾತನ್ನೂ ಆಡದೆ ಸುಮ್ಮನಿದ್ದುಬಿಟ್ಟಳು. ಕೆಲವು ಕಂಗಾಳಿಗಳು

ಇವಳ ದುರುಳತನವನ್ನು ನೋಡಿ ಬಾಯಿಗೆ ಬಂದ ಹಾಗೆ ಬೈದರು. ಸರಳೆಯು ಇದಾವುದನ್ನೂ ಲೆಕ್ಕಿಸದೆ ದೂರದಲ್ಲಿಯೇ ನಿಂತುಕೊಂಡು ಇದೆಲ್ಲವನ್ನೂ ನೋಡುತ್ತಿದ್ದಳು.

ಬಾಲೆಯಾದ ಸರಳೆಗೆ ಇನ್ನೂ ಪ್ರಪಂಚದ ನಿಯಮವು ಗೊತ್ತಿಲ್ಲ. ಕಂಗಾಳಿ ಮೊದಲು ರಾಜನ ವರೆಗೂ ಗಲಭೆ ಮಾಡದೇ ಹೋದಲ್ಲಿ ಆರಿಗೂ ಇಷ್ಟಾರ್ಥಸಿದ್ಧಿಯಾಗಲಾರದು. ಮಕ್ಕಳು ಅತ್ತಲ್ಲಿ, ಮಗುವಿಗೆ ಹಸಿವಾಗುವುದೇನೋ ಎಂದು ತಾಯ್ಗಳು ಹೊಟ್ಟೆಗೆ ಕೊಡುವರು, ಅಳದೇ ಹೋದಲ್ಲಿ, ಮಗುವಿಗೆ ಹೊಟ್ಟೆ ತುಂಬಿರುವುದೆಂದು ತಿಳಿದು ತಾಯಿಯರು ಮುದ್ದಾಡುವುದಕ್ಕೆ ತೊಡಗುವರು. ಬಾಯ ಬಿಡದೆ ಸುಮ್ಮನಿದ್ದವನ ಮನೋರಥವು ಎಂದಿಗೂ ಈಡೇರುವುದಿಲ್ಲ. ಪ್ರಪಂಚದಲ್ಲಿ ಮುಂದಾಳಾಗುವುದಕ್ಕೆ ಧೈರ್ಯವಿರಬೇಕು, ಅದರ ಜತೆಯಲ್ಲಿ ಬಾಯಿಯೂ ಇರಬೇಕು, ಆತ್ಮಸ್ತುತಿ ಪರನಿಂದೆಗಳಿರಬೇಕು, ಮಾನಾಪಮಾನಗಳನ್ನು ಲಕ್ಷ್ಯಕ್ಕೆ ತಾರದಿರಬೇಕು, ಸಮಯದಲ್ಲಿ ಬೈಯಬೇಕು, ಸಮಯದಲ್ಲಿ ಬೈಸಿಕೊಳ್ಳಬೇಕು, ಕುಳಿತವರ ಮೇಲೆ ನಿಂತವರನ್ನೂ, ನಿಂತವರ ಮೇಲೆ ಕುಳಿತವರನ್ನೂ ತಳ್ಳುತ್ತಿರಬೇಕು, ಸುಳ್ಳನ್ನಾಡುತ್ತಿರಬೇಕು, ಆವ ಕೆಲಸ ಮಾಡುವುದಕ್ಕೂ ಹಿಂಜರೆಯದಿರಬೇಕು, ಕೇವಲವಾಗಿ ಆತ್ಮಸುಖದಲ್ಲಿಯೇ ದೃಷ್ಟಿಯಿರಬೇಕು. ಈ ವಿಧದಾದ ಅನಂತಾನಂತ ಮಂಗಳ ಗುಣಗಳನ್ನು ಮುಂದಿಟ್ಟುಕೊಂಡು ಕೆಲಸಮಾಡುವವನೇ ಲೋಕದಲ್ಲಿ ಕೊಂಚಮಟ್ಟಿಗಾದರೂ ಸುಖಪಡುವನು. ಅಯ್ಯೋ! ಪಾಪ! ಸರಳೆಗೆ ಇದೆಲ್ಲವೂ ಹೇಗೆ ತಾನೇ ಗೊತ್ತಾದೀತು! ಮೊದಲಿನಿಂದಲೂ ಅಭ್ಯಾಸ ಮಾಡಿದವರೇ ಒಂದೊಂದು ವೇಳೆ ಹಳ್ಳಕ್ಕೆ ಬೀಳುತ್ತಿರುವಲ್ಲಿ, ಏನನ್ನೂ ಅರಿಯದ ಹೆಣ್ಣು ಹೆಂಗುಸು ಸ್ವಕಾರ್ಯವನ್ನು ಸಾಧಿಸಿಕೊಳ್ಳಲು ಹೇಗೆ ಸಮರ್ಥೆಯಾದಾಳು? ಸರಳೆಯಾದರೋ ಎಂದೂ ಮನೆಯನ್ನು ಬಿಟ್ಟು ಹೊರಗೆ ಬಂದವಳೇ ಅಲ್ಲ. ಆಕೆಯು ಈಗಳಾದರೋ ದುರ್ದೈವದ ದುರ್ಯೋಗದಿಂದ ಮನೆಯನ್ನು ತ್ಯಾಗಮಾಡಿ ಒಂದೇ ಕ್ಷಣವೆಗೆ ಬೀದಿಯ ಬಿಕಾರಿಯಾಗಿ ಪರಿಣಮಿಸಿರುವಳು. ಎಲ್ಲರಿಗೂ ಭಿಕ್ಷೆ ಹಾಕುತ್ತಿದ್ದ ಕುಡುಗೈ, ಈಗ ಭಿಕ್ಷೆಯನ್ನು ಹೇಗೆ ತೆಗೆದುಕೊಳ್ಳಬಲ್ಲುದು? ಅವುದಕ್ಕೂ ಅಭ್ಯಾಸವಿರಬೇಕು.

ಆ ಸಮಾರಾಧನೆಯಲ್ಲಿ ಬಾಯಿದ್ದವರೆಲ್ಲರೂ ತಮ್ಮತಮ್ಮ ಕೆಲಸವನ್ನು ನೆರವೇರಿಸಿಕೊಳ್ಳಲಾರಂಭಿಸಿದರು. ಸರಳೆಯು ಮಟ್ಟಿಗೆ ಇದ್ದಲ್ಲಿಯೇ ನಿಂತುಕೊಂಡು ಇದೆಲ್ಲವನ್ನೂ ನೋಡುತ್ತಿದ್ದಳು. ಇವಳನ್ನು ಆರೂ ಗಮನಿಸ

ದೆಯೇ, ಎಲ್ಲರೂ ಭೋಜನಕ್ಕೆ ಕುಳಿತರು. ಭೋಜನವಾದ ಬಳಿಕ ಎಲ್ಲರೂ ಸಂತೋಷದಿಂದ ತಮ್ಮ ತಮ್ಮ ಮನೆಗಳಿಗೆ ಹೊರಟೂ ಹೋದರು. ಇಂತಹ ಸಮಾರಂಭದಲ್ಲಿಯೂ ಸರಳೆಗೆ ಒಂದು ತುತ್ತು ಅನ್ನವು ಕೂಡ ದೊರೆಯದೇ ಹೋದುದಕ್ಕಾಗಿ ಎಷ್ಟು ವ್ಯಸನಪಟ್ಟುಕೊಂಡರೂ ಸಾಲದುದಾಗಿದೆ. ಆಗ ನಾವು ಭೋಜನಕ್ಕೆ ಹೋಗಿದ್ದಿದ್ದರೆ, ಸರಳೆಯನ್ನು ಭೋಜನ ಮಾಡಿಸದೇ ಬಿಡುತ್ತಿರಲಿಲ್ಲ. ಈಗ ಅದನ್ನು ಕಟ್ಟಿಕೊಂಡು ವ್ಯಸನಪಡುವುದರಿಂದ ಬರುವ ಭಾಗ್ಯವೇನು? ಸರಳೆಗೆ ಊಟಮಾಡಲು ಹಣೆಯಲ್ಲಿ ಬರೆಯದಿರುವಾಗ, ಆರೇನ ಮಾಡಬಲ್ಲರು ? ಸಮಾರಾಧನೆಯಲ್ಲಿ ಬಡ್ಡಿಸುತ್ತಿದ್ದ ಒಬ್ಬಿಬ್ಬರು ಕಿರಾತರು ಸರಳೆಯನ್ನು ನೋಡಿಯೂ ನೋಡದ ಹಾಗೆ ಇದ್ದುಬಿಟ್ಟರು. ಎಲ್ಲರೂ ಬೇಕುಬೇಕಾದ ಹಾಗೆ ಹೊಟ್ಟೆ ಬಿರಿಯುವಂತೆ ಊಟಮಾಡಿ ಮನೆಗಳಿಗೆ ಹೊರಡುತ್ತಿರುವುದನ್ನು ನೋಡಿ ಸರಳೆಯು ಕಣ್ಣುಗಳಲ್ಲಿ ಒಂದೆರಡು ತೊಟ್ಟು ನೀರನ್ನು ತಂದುಕೊಂಡು ತುಟಿಪಿಟಿಕ್ಕನ್ನದೆ ಗ್ರಾಮದ ಹತ್ತಿರದಲ್ಲಿ ಹರಿಯುತ್ತಿದ್ದ ಹೊಳೆಯ ತಡಿಗೆ ಬಂದು ಕುಳಿತಳು. ಅಷ್ಟು ಹೊತ್ತಿಗೆ ಹೊತ್ತು ಮುಳುಗಿ ಎರಡು ಗಳಿಗೆಯಾಗಿದ್ದಿತು. ಸರಳೆಯು ದಣಿದು ಕಾಲು ಸೋತು ತೊಡೆ ನಡುಗಿ ಬಸವಳಿದು ಬಿದ್ದು ಕೊಂಚ ಹೊತ್ತಿನ ಮೇಲೆ ತಾನೇ ಚೇತರಿಸಿಕೊಂಡು ಹೊಳೆಯಲ್ಲಿ ಒಂದೆರಡು ಬೊಗಸೆಯ ನೀರನ್ನು ಕುಡಿದು ಬಳಿಕ ಹತ್ತಿರದಲ್ಲಿದ್ದ ಒಂದು ಗಿಡದ ಬುಡದಲ್ಲಿ ಬಂದು ಮಲಗಿದಳು.

ಆ ಸಮಯದಲ್ಲಿ ವೀಣಾ ಧ್ವನಿಯನ್ನು ಧಿಕ್ಕರಿಪ ಸುಮಧುರವಾದ ಧ್ವನಿಯೊಂದು ಗಾಳಿಯಲ್ಲಿ ತೇಲಿ ಬಂದು ಸರಳೆಯ ಕಿವಿಯೊಳಗೆ ನುಗ್ಗಿತು. ಸರಳೆಯು ಕಳವಳಗೊಂಡು ಎದ್ದು ಕುಳಿತು ಆಲಿಸಿ ಕೇಳಿದಳು. ಆವಳೋ ಸ್ತ್ರೀಯೊಬ್ಬಳು ಮಹಾ ಮಹಿಮನಾದ ಪರಮಾತ್ಮನನ್ನು ಪರಿಶುದ್ಧಭಾವದಿಂದ ಗಾನಮಾಡುತ್ತಿರುವುದಾಗಿ ತಿಳಿಯ ಬಂದಿತು. ಇದ್ದಕ್ಕಿದ್ದ ಹಾಗೆಯೇ ಆ ಗಾನವು ನಿಂತುಹೋದುದನ್ನು ಕೇಳಿ ಸರಳೆಯು ಅಚ್ಚರಿಗೊಂಡವಳಾಗಿ ನಾಲ್ಕು ಕಡೆಗಳಲ್ಲಿಯೂ ದೃಷ್ಟಿಯಿಟ್ಟು ನೋಡುತ್ತಿರುವಷ್ಟರಲ್ಲಿಯೇ, ಹೆಂಗುಸೊಬ್ಬಳು ನದಿಯಲ್ಲಿ ಸ್ನಾನಮಾಡಿ ಒದ್ದೆಯಾದ ಸೀರೆಯೊಡನೆ ಸರಳೆಯಿದ್ದಲ್ಲಿಗೆ ಬರುತ್ತಿದ್ದಳು. ಸರಳೆಯು ಇದನ್ನು ಕಂಡು ಓಡಿಹೋಗೋಣವೆಂದು ಎದ್ದು ನಿಲ್ಲುವಷ್ಟರೊಳಗಾಗಿ, ಆ ಹೆಂಗುಸು ಹತ್ತಿರಕ್ಕೆ ಬಂದು,—"ಮಗು, ನೀನಾರಮ್ಮ?" ಎಂದು ಪ್ರಶ್ನೆಮಾಡಿದಳು.

ಸರಳೆ—(ಕುಗ್ಗಿದ ಧ್ವನಿಯಿಂದ) ನಾನು ಬೀದಿಯ ಬಿಕಾರಿ.

ಹೆಂಗುಸು—ಬಿಕಾರಿ ! ರಾಜರ ಮನೆಯಲ್ಲಿಯೂ ಇಂತಹ ರೂಪವಿರುವುದಿಲ್ಲವೆಂದು ನಾನು ಬಲ್ಲೆನು. ಬಿಕ್ಷೆ ಬೇಡುವವಳಿಗೆ ಇಂತಹ ರೂಪವೇ !

ಹೆಂಗುಸಿನ ಬಾಯಿಯಲ್ಲಿ ಮುಂದೆ ಮಾತು ಹೊರಡದೇ ಹೋಯಿತು. ಅವಳು ಹುಡುಗಿಯ ರೂಪಿನಲ್ಲಿ ಬೆರಗಾಗಿ ನಿಂತುಕೊಂಡು, "ಇಂತಹ ದೇವಯೋಗ್ಯವಾದ ರೂಪವು ಬಾಡಿಹೋಗಲು ಕಾರಣವೇನಿರಬಹುದು ? ಎಂತಹ ನಿಷ್ಕರುಣಿಯಾದ ಪುರುಷನು ಕೂಡ ಈ ಮನೋಮೋಹಕರವಾದ ರೂಪವನ್ನು ಒಣಗಿಹೋಗುವಂತೆ ಮಾಡಲು ಆಸ್ಪದ ಕೊಡಲಾರನಷ್ಟೇ ! ಕಾಡಿನಲ್ಲಿ ಅರಳಿದ ಹೂ ಆರ ಕಣ್ಣಿಗೂ ಬೀಳದಂತೆ, ಈ ರೂಪವೂ ಲೋಕಾರಣ್ಯದಲ್ಲಿ ಪುರುಷಮಾತ್ರದವನ ಕಣ್ಣಿಗೆ ಬಿದ್ದಿರಲಿಕ್ಕಿಲ್ಲವೇ ! ಇದೆಂತಹ ಚೋದ್ಯವಾದ ವಿಷಯವಾಗಿದೆ ! ಹೆಂಗುಸಾದ ನನಗೇ ಮೋಹವನ್ನುಂಟುಮಾಡುವ ಈ ಅಸ್ವಾದ್ಯರೂಪವಾದ ರೂಪವು ಇಲ್ಲಿನ ವರೆಗೂ ಪುರುಷನನ್ನು ಮುಗ್ಧನನ್ನಾಗಿ ಮಾಡಿಲ್ಲವೆಂಬುದು ಸುಳ್ಳಿನ ಸುದ್ದಿಯೇ ಸರಿ. ಇರಲಿ, ಇದರ ತತ್ತ್ವವನ್ನಾದರೂ ಕೇಳಿ ತಿಳಿದುಕೊಳ್ಳುವೆನು," ಎಂದುಕೊಂಡು ಬಾಲಿಕೆಯನ್ನು ಕುರಿತು,—"ಮಗು, ಇಷ್ಟು ಹೊತ್ತಿನಲ್ಲಿ ಈ ಗಿಡದ ಕೆಳಗೆ ಕುಳಿತಿರಲು ಕಾರಣವೇನು ? ನೀನು ಏನ ಕೆಲಸ ಮಾಡುವ ನಿಮಿತ್ತವಾಗಿ ಇಲ್ಲಿಗೆ ಬಂದಿರುವೆ ? ಎಂದು ಕೇಳಿದುದಕ್ಕೆ ಸರಳೆಯು,—"ತಾಯೆ ! ನನಗದಾವುದೂ ಗೊತ್ತಿಲ್ಲ. ನಾನು ಎಲ್ಲಿಗೆ ಹೋಗಬೇಕೋ, ಏನ ಮಾಡಬೇಕೋ ಅದಿನ್ನೂ ನಿಶ್ಚಯವಾಗಿಲ್ಲ. ಒಂದುವೇಳೆ ನಾನು ಯಮನ ರಾಜಧಾನಿಯನ್ನು ಕುರಿತು ಹೊರಟರೂ ಹೊರಡಬಹುದು," ಎಂದು ಸಂಕಟದಿಂದ ಉತ್ತರವಿತ್ತಳು.

ಪ್ರಪಂಚವನ್ನರಿತ ಅಪರಿಚಿತೆಯಾದ ಹೆಂಗುಸು, "ಇದರಲ್ಲಿ ರಹಸ್ಯವೇನೋ ಇರಬೇಕು. ಪಾಪ, ತಾಪ, ಸ್ವಾರ್ಥತೆಗಳಿಂದ ತುಂಬಿ ತುಳುಕುತ್ತಿರುವ ಸಂಸಾರದಲ್ಲಿ ಈಕೆಯು ಬಲು ನೊಂದಿರಬೇಕು. ಇದರಲ್ಲಿ ಆವ ಸಂಶಯವೂ ಇರಲಾರದು" ಎಂದು ಚಿಂತಿಸಿ,—"ಅಮ್ಮ ಮಗು ! ನನ್ನ ಕುಟೀರಕ್ಕಾದರೂ ಹೋಗೋಣ, ಬಾ," ಎಂದು ಕರೆದಳು. ಸರಳಕುಮಾರಿಯು ಆವ ಮರುನುಡಿಯನ್ನೂ ಆಡದೆ ಅಪರಿಚಿತೆಯಾದ ಹೆಂಗುಸಿನ ಹಿಂದೆ ಹಿಂದೆಯೇ ತೆರಳಿದಳು.



# ಹದಿನೆಂಟನೆಯ ಲಂಬಕ.



## ಕುಟೀರದಲ್ಲಿ.

ಸರಳಕುಮಾರಿಯು ಅಪರಿಚಿತೆಯೊಡನೆ ಹೊರಟು ಒಂದು ಮುಹೂರ್ತವೆನ್ನುವುದರೊಳಗಾಗಿ ಆಕೆಯ ಕುಟೀರಕ್ಕೆ ಬಂದು ಸೇರಿದಳು. ಕುಟೀರವು ಗ್ರಾಮದ ಮಧ್ಯದಲ್ಲಿರದೆ, ಊರ ಹೊರಗೆ ಒಂದು ಕಡೆ ನಿರ್ಜನವಾದದೊಂದು ಪ್ರದೇಶದಲ್ಲಿದ್ದಿತು. ಮನೆಯ ಸುತ್ತಲೂ ಸಣ್ಣ ಹೂದೋಟವು ನೋಟಕರಿಗೆ ನಂದನವನದಲ್ಲಿನ ಒಂದಾನೊಂದು ಖಂಡದ ಪರಿಚಯವನ್ನುಂಟುಮಾಡಿಕೊಡುತ್ತಿರುವುದು. ತೋಟದ ಸುತ್ತಮುತ್ತ ಮುಳ್ಳಿನ ಬೇಲಿಯಿದ್ದಿತು. ಕುಟೀರದ ಮುಂಗಡೆಯಲ್ಲಿ ಒಂದು ಮನೋಹರವಾದ ಸಂಪಗೆಯ ಮರ. ಮರದ ಬುಡದಲ್ಲಿ ಕುಳಿತುಕೊಳ್ಳುವುದಕ್ಕೆ ಅಪರಿಚಿತೆಯು ಒಂದು ಅನುಕೂಲವಾದ ಕಟ್ಟೆಯನ್ನು ಕಟ್ಟಿದ್ದಳು ಈ ಕಟ್ಟೆಯ ಮೇಲೆ ಅಪರಿಚಿತೆಯು ಸಂಜೆಯ ಹೊತ್ತಿನಲ್ಲಿ ಆಗಿಂದಾಗ ವಿಶ್ರಾಂತಿಗಾಗಿ ಕುಳಿತುಕೊಳ್ಳುತ್ತಿದ್ದಳು. ಈ ಸ್ಥಳದಲ್ಲಿಯೇ ಬಂದವರೆಲ್ಲರೂ ಆಕೆಯ ದರ್ಶನವನ್ನು ತೆಗೆದುಕೊಂಡು ಹೋಗುತ್ತಿದ್ದರು.

ಅಪರಿಚಿತೆಯು ಸರಳೆಯನ್ನು ಇದೇ ಕಟ್ಟೆಯ ಮೇಲೆ ಕುಳಿತುಕೊಳ್ಳುವಂತೆ ಹೇಳಿ, ತಾನು ಮನೆಯೊಳಗೆ ಪ್ರವೇಶಮಾಡಿ ದೀಪವನ್ನು ಕಚ್ಚಿಸಿದಳು. ಬಳಿಕ ಸರಳೆಯನ್ನು ಒಳಗೆ ಬರುವುದಕ್ಕೆ ಹೇಳಿದ ಮೇಲೆ, ಸರಳೆಯು ಒಳಗೆ ಹೋಗಿ ಒಂದು ಮಂಚದ ಮೇಲೆ ಕುಳಿತುಕೊಂಡು ತನ್ನ ಅದೃಷ್ಟವನ್ನು ಕುರಿತು ಪರಿಪರಿಯಾಗಿ ವಿಚಾರಮಾಡತೊಡಗಿದಳು.

"ವಿಧಿಯು ನನ್ನ ಹಣೆಯಲ್ಲಿ ಏನೇನ ಬರೆದಿರುವನೋ ಬಲ್ಲವರಾರು? ಇಲ್ಲಿಂದ ಮುಂದೆ ನಾನು ಎಲ್ಲಿಗೆ ಹೋಗಬೇಕೋ, ಏನು ಕೆಲಸ ಮಾಡಬೇಕೋ, ನಾನು ಆರಲ್ಲಿಗೆ ಹೋಗಿ ತುತ್ತುತುತ್ತಿಗೂ ಬಾಯ ಬಿಡಬೇಕೋ, ಆರು ನನ್ನಲ್ಲಿ ಕನಿಕರಗೊಳ್ಳುವರೋ, ಇದೊಂದೂ ನನ್ನ ತಲೆಗೆ ಹತ್ತುವುದೇ ಇಲ್ಲ. ಈ ವ್ಯಸನವನ್ನು ನಾನು ಹತ್ತಿಸಿಕೊಂಡು ಪ್ರಯೋಜನವೇನು? ಹಣೆಯಲ್ಲಿ ಬರೆದುದೇ ಫಲಿಸುವುದು. ಈಯಭಿಪ್ರಾಯವನ್ನು ಅನುಭವರಸಿಕನಾದ ಕವಿಯೊಬ್ಬನು ಹೀಗೆ ಹೇಳಿರುವನು.—

ಶ್ಲೋಕ || ವಿಧಿಲಿಖಿತ ವರ್ಣಮಾಲಂ |
ಫಲತಿ ಕಪಾಲಂ ನ ಭೂಪಾಲಃ ||
ಮಾ ಕುರು ಮನೋ ವಿಲೋಲಂ |
ಕಲಯ ಸುಶೀಲಂ ಚಕಾಸ್ತಿ ಮಾಲೋಲಃ ||

ತಾತ್ಪರ್ಯವೇನೆಂದರೆ—ಹಣೆಯಲ್ಲಿ ಬೊಮ್ಮ ಬರೆದ ಬರೆಹವೇ ಫಲಕ್ಕೆ ಬಂದೀತು. ನಿಗ್ರಹಾನುಗ್ರಹ ಸಮರ್ಥನಾದ ನೆಲದೊಡೆಯನಾದರೂ ಅದನ್ನು ಮಾರ್ಪಡಿಸಲಾರನು ಆದುದರಿಂದ ಮನಸ್ಸನ್ನು ಚಂಚಲಮಾಡಿಕೊಂಡು ಕ್ಲೇಶಪಡುವುದರಿಂದ ಆವ ಪ್ರಯೋಜನವೂ ಇರಲಾರದು ಬ್ರಹ್ಮಾಂಡನಾಯಕನಾದ ವಿಶ್ವಂಭರಮೂರ್ತಿಯೆನಿಸಿದ ರಮಾರಮಣನು ಸರ್ವಕಾಲದಲ್ಲಿಯೂ ಸರ್ವರಲ್ಲಿಯೂ ತಾನೇತಾನಾಗಿ ಪ್ರಪಂಚವನ್ನು ಬೆಳಗುತ್ತಿರುವಲ್ಲಿ ಅವ ಆಸ್ತಿಕನೇ ಆಗಲಿ ತನ್ನ ನಡೆನುಡಿಗಳನ್ನು ಮುಟ್ಟಿಗೆ ಕಿಡದಂತೆ ರಕ್ಷಿಸಿಕೊಂಡು ಬರುವುದಾದರೆ ಶಾಶ್ವತವಾದ ಸುಖಸಂಪತ್ತುಗಳುಂಟಾಗುವುವು." ಎಂದು ಚಿಂತಿಸುತ್ತಿರುವಾಗ ಕುಬೇರದ ಒಂದೆಡೆಯಲ್ಲಿ ಕುಳಿತಿದ್ದ ಹಲ್ಲಿಯೊಂದು ಲೊಚ್ ಲೊಚ್' ಎಂದಿತು. ಇದನ್ನು ಕೇಳಿ ಮುದುಗಿಯು ತವಕದಿಂದ ಆಳುತ್ತಾ "ದೇವರೇ! ನನಗೆ ಮುಂದೇನು ಗತಿ ?" ಎಂದು ಹೇಳಿದ ಕೂಡಲೆ, ಹಲ್ಲಿಯು ಮತ್ತೆ 'ಲೊಚ್ ಲೊಚ್' ಲೋಚಾ ಲೊಚ್, ಎಂದು ದನಿಮಾಡಿತು ಅದಕ್ಕೆ ಸರಳೆಯು ಅರ್ಥಮಾಡಿದಳೇನೆಂದರೆ:—

"ಮನುಷ್ಯನಿಗೆ ಮನುಷ್ಯನಲ್ಲದೆ ಮತ್ತಾರು ಆಶ್ರಯದಾತರು ? ಪರಮಾತ್ಮನು ಪ್ರತ್ಯಕ್ಷವಾಗಿ ಬಂದು ದೀನಾನಾಥರಿಗೆ ಆಶ್ರಯವನ್ನು ಕೊಡಬಲ್ಲನೇ! ಮುಂದೆ ನಡೆವುದು ನಮಗೆ ಗೋಚರಿಸದು ಜಗದಾಧಾರನಾದ ಭಗವಂತನು ಎಲ್ಲರ ಯೋಗಕ್ಷೇಮವನ್ನೂ ವಹಿಸಿರುವಲ್ಲಿ, ಮೂಢರಾದ ನಾವುಗಳು ವ್ಯರ್ಥವಾಗಿ ಕ್ಲೇಶಪಟ್ಟುಕೊಂಡು ಸಾಯುವೆವು ನಮ್ಮ ಪ್ರಯತ್ನದ ಬಲದಿಂದ ಪ್ರಯೋಜನವಾಗುವುದು ಅಷ್ಟರಲ್ಲಿಯೇ ಇದೆ ಇದೆಲ್ಲವೂ ನಮಗೆ ಗೊತ್ತಿದ್ದರೂ ನಾವು ಮುಟ್ಟಿಗೆ ಸಲ್ಲದ ಕೂರತೆಯನ್ನು ಹಚ್ಚಿಕೊಂಡು ದುಃಖಪಡುವೆವು"

ಸರಳೆಯು ಹೀಗೆ ಅರ್ಥಮಾಡುತ್ತಿರುವಾಗ, ಅಪರಿಚಿತೆಯು ಅಟ್ಟು ಊಟಕ್ಕೆ ಸಿದ್ಧಪಡಿಸಿದಳು. ಆಕೆಯು ಎಷ್ಟೋ ಬೇಡಿಕೊಂಡುದರ ಮೇಲೆ,

ಸರಳೆಯು ಊಟಕ್ಕೆ ಬಂದು ಕುಳಿತಳು. ಅರೆಗಳಿಗೆಯೊಳಗಾಗಿ ಇಬ್ಬರಿಗೂ ಭೋಜನವಾಯ್ತು. ತರುವಾಯ ಅಪರಿಚಿತೆಯು ಬೇಗಬೇಗನೆ ಮನೆಯ ಕೆಲಸವೆಲ್ಲವನ್ನೂ ತೀರಿಸಿಕೊಂಡು ಸರಳೆಯಿದ್ದಲ್ಲಿಗೆ ಬಂದು ಕುಳಿತ ಮೇಲೆ,-"ಮಗು! ನಿನ್ನ ಹೆಸರೇನಮ್ಮ?" ಎಂದು ಮಿದುನುಡಿಯಾಡಿದಳು.

ಸರಳೆ—ಸರಳಕುಮಾರಿ

ಅಪರಿಚಿತೆ—ನಿಮ್ಮ ಊರಾವುದು?

ಸರಳೆ—ಶಿವರಾಮಪುರ.

ಅಪರಿ—ನೀನು ಮನೆಯನ್ನು ಬಿಟ್ಟು ಬಂದು, ಈ ನದಿಯ ತೀರದಲ್ಲಿ ಗಿಡದ ಕೆಳಗಿರಲು ಕಾರಣವೇನಮ್ಮ? ನಿನ್ನನ್ನು ನೋಡಿದರೆ ಬಿಕಾರಿಯಂತೆ ಕಂಡುಬರುವುದಿಲ್ಲ

ಸರಳೆಯ ಕಣ್ಣುಗಳಿಂದ ದರದರನೆ ನೀರು ಸುರಿಯಿತು. ಆಕೆಯು ತನ್ನ ಸೆರಗಿನಿಂದ ಕಂಬನಿಯನ್ನು ತೊಡೆದುಕೊಳ್ಳುತ್ತಾ ಮೆಲ್ಲಮೆಲ್ಲನೆ ತನ್ನ ವೃತ್ತಾಂತವೆಲ್ಲವನ್ನೂ ಮುಚ್ಚುಮರೆಯಿಲ್ಲದೆ ತಿಳಿಯಪಡಿಸಿದಳು.

ಇದನ್ನು ಕೇಳಿ ಅಪರಿಚಿತೆಯು,—"ನೀನು ಬೀದಿಯ ಬಿಕಾರಿಯಲ್ಲವೆಂದು ನಾನು ನಿನ್ನನ್ನು ನೋಡಲು ನೋಡುತನೆಯೇ ತಿಳಿದುಕೊಂಡೆನು. ಇದು ಹೇಗಾದರೂ ಇರಲಿ ತುಚ್ಛವಾದ ಪ್ರೇಮಕ್ಕಾಗಿ ನೀನು ಮನೆಯನ್ನು ಬಿಟ್ಟು ಬಂದುದೇತಕೆ?" ಎಂದು ಮತ್ತೆ ಪ್ರಶ್ನೆಮಾಡಿದಳು.

ಸರಳೆಯು ನಾಚಿಕೆಯಿಂದ ತಲೆವಾಗಿದವಳಾಗಿ ಗದ್ಗದ ಸ್ವರದಿಂದ, "ನಾನು ಪ್ರೇಮಕ್ಕಾಗಿ ಮನೆಯನ್ನು ತ್ಯಾಗಮಾಡಿದವಳಲ್ಲ ಮನೆಯಲ್ಲಿದ್ದರೆ ನನ್ನ ಧರ್ಮವೂ ನಷ್ಟವಾಗುವುದಲ್ಲದೆ, ನನ್ನ ಪಾತಿವ್ರತ್ಯಕ್ಕೂ ಭಂಗವುಂಟಾಗುವುದು, ಎಂದು ತಿಳಿದು ನಾನು ಮನೆಯನ್ನು ಬಿಟ್ಟು ಬಂದೆನು," ಎಂದು ನುಡಿದಳು

ಅಪರಿ—ಈಗ ಎಲ್ಲಿಗೆ ಹೊರಡಬೇಕೆಂದು ನಿನ್ನ ಅಭಿಪ್ರಾಯವಿರುವುದು?

ಸರಳೆ—ಅದು ನನಗೆ ತಿಳಿಯದು ಈಶ್ವರನು ಎಲ್ಲಿಗೆ ಕರೆದುಕೊಂಡು ಹೋಗುವನೋ, ಅಲ್ಲಿಗೆ ಹೋಗಲು ಇಷ್ಟಪಡುವೆನು

ಅಪರಿ—ಹಾಗಾದರೆ ನನ್ನ ಕುಟೀರದಲ್ಲಿರಬಲ್ಲೆಯಾ?

ಸರಳೆ—ನಿಮ್ಮ ಅಪ್ಪಣೆಯಾಗುವುದಾದರೆ ಇರುವೆನು.

ಅಪರಿ—ನಾನು ಬ್ರಹ್ಮಚಾರಿಣಿ. ನಾನಾದರೋ ಅಡಿಗಡಿಗೆ ಉಪವಾಸ ವ್ರತಾದಿಗಳನ್ನು ಆಚರಿಸುತ್ತಾ ಭಗವಂತನನ್ನು ಆರಾಧಿಸಿಕೊಂಡಿರುತ್ತಿರುವೆನು. ಪ್ರತಿನಿತ್ಯವೂ ಬೆಳಗಿನ ಜಾವದಲ್ಲಿ ಕೋಳಿ ಕೂಗಿದ ಕೂಡಲೆ ಎದ್ದು ಹೊಳೆಯಲ್ಲಿ ಮಿಂದು ಇಷ್ಟದೈವವನ್ನು ಭಕ್ತಿಯಿಂದ ಪೂಜಿಸುವೆನು. ನನ್ನ ಕೆಲಸವೆಲ್ಲವೂ ತೀರಿದ ಮೇಲೆ ದಿನಕ್ಕೊಂದೇ ಸಲ ಭೋಜನ ಮಾಡುವೆನು. ನನ್ನಲ್ಲಿರುವುದಾದರೆ, ನೀನೂ ಹಾಗೆಯೇ ಮಾಡಬೇಕು

ಸರಳೆ—ನನಗೂ ಅದೆಲ್ಲವೂ ಇಷ್ಟವಾದುವುಗಳೇ ಅಹುದು. ನಾನೂ ಅದರಂತೆಯೇ ಆಚರಿಸುವೆನು

ಅಪರಿ—ಮಗು! ಇದು ನೀನು ಮಾಡತಕ್ಕ ಧರ್ಮವಲ್ಲವಮ್ಮ. ನಿನಗಿನ್ನೂ ಮದುವೆಯಾಗಿಲ್ಲ. ಆದುದರಿಂದ ನೀನಿನ್ನೂ ಅಪೂರ್ಣೆಯೆನಿಸಿರುವೆ. ಮದುವೆಯಾದ ಮೇಲೆ ಸ್ತ್ರೀಪುರುಷರಿಬ್ಬರೂ ಸೇರಿಕೊಂಡು ಪೂರ್ಣರೆನಿಸುವರು. ವಿವಾಹಾನಂತರದಲ್ಲಿ ನಿನಗೆ ಪೂರ್ಣತೆಯನ್ನುಂಟುಮಾಡಿಕೊಡುವ ನಿನ್ನ ಸ್ವಾಮಿಯನ್ನು ಪೂರ್ಣಭಾವದಿಂದ ಸೇವಿಸುವುದು ನಿನಗೆ ಪರಮ ಧರ್ಮವೂ ಅಹುದು, ಪರಮ ಮಂಗಳವೂ ಅಹುದು. ನಿನ್ನಂಥವರಿಗೆ ಸ್ವಾಮಿಸೇವೆ ಹೊರತು ಮತ್ತಾವ ಸೇವೆಯೂ ಇರುವುದಿಲ್ಲ. ಪತಿಯನ್ನೇ ದೇವತೆಯೆಂದು ತಿಳಿದು, ಆತನನ್ನೇ ನೆರಳಿನಂತೆ ಆಶ್ರಯಿಸಿಕೊಂಡು ಸರ್ವಪಾಪಹಾರಿಯಾದ ಪತಿವ್ರತಾಧರ್ಮವನ್ನು ಅನುಷ್ಠಾನಿಸುವುದು ಸಾಧ್ವಿಯರಾದ ಸ್ತ್ರೀಯರಿಗೆ ಏಕಮಾತ್ರಲಕ್ಷಣವು. ಪತಿವ್ರತೆಗೆ ಸ್ವಾಮಿ ಸೇವೆ ಬಿಟ್ಟು ವ್ರತನಿಯಮಗಳಿಲ್ಲ, ತೀರ್ಥಕ್ಷೇತ್ರಗಳಿಲ್ಲ, ಸ್ವರ್ಗಾಪವರ್ಗಗಳಿಲ್ಲ (ಅಪವರ್ಗ =ಮೋಕ್ಷ) ಹೀಗೆಂದಮೇಲೆ ಎಲ್ಲವೂ ಸ್ವಾಮಿಸೇವೆಯೊಂದರಿಂದಲೇ ಸಾಧ್ಯವಾಗುವುವೆಂದರ್ಥವು. ಗಂಡನ ಬಲದ ಕಾಲೇ ಪ್ರಯಾಗವು, ಎಡದ ಕಾಲೇ ಪುಷ್ಕರವು. ಸ್ನಾನಮಾಡಿದನಂತರದಲ್ಲಿ ಭಕ್ತಿಯಿಂದ ಸ್ವಾಮಿಯ ಪಾದೋದಕವನ್ನು ಸೇವಿಸಿದಲ್ಲಿ ಸರ್ವತೀರ್ಥಸೇವನೆಯಿಂದುಂಟಾದ ಪರಮ ಪುಣ್ಯವು ಸಂಚಿತವಾಗುವುದು. ಭರ್ತನೇ ಪುಣ್ಯತೀರ್ಥವು, ಭರ್ತನೇ ಪುಣ್ಯಕ್ಷೇತ್ರವು. ಇದಕ್ಕೆ ಸಂದೇಹ ಕೂಡದು. ಯಜ್ಞಯಾಗಾದಿಗಳನ್ನು ಮಾಡುವುದರಿಂದ ಆವ ಪುಣ್ಯ ಬರುವುದೋ, ಅದನ್ನು ಪತಿವ್ರತೆಯು ನಿರಾಯಾಸವಾಗಿ ಪತಿಯ ಸೇವೆಯಿಂದಲೇ ಪಡೆವಳು. ಶಾಸ್ತ್ರಗಳಲ್ಲಿ ಸ್ತ್ರೀಯರಿಗೆ ಪತಿಸೇವೆಯೊಂದು ಹೊರತು ಮತ್ತಾವ ಧರ್ಮವೂ ಉಕ್ತವಾಗಿಲ್ಲ. ಆವಳು ಸ್ವಾಮಿಯನ್ನು

ಬಿಟ್ಟು ಏಕಾಕಿನಿಯಾಗಿರುವಳೋ ಅವಳು ಪೂರ್ಣವೆನಿಸಳು. ಅಲ್ಲದೆಯೂ ಇತರರ ಪ್ರೀತಿ ಗೌರವಗಳಿಗೆ ಪಾತ್ರವೂ ಆಗಲಾರಳು. ಅನೇಕ ಶಾಸ್ತ್ರಗಳನ್ನು ಓದಿ ಧರ್ಮವನ್ನು ಆಚರಿಸುವುದರಿಂದ ಆವ ಫಲ ಬಂದೀತೋ, ಅದು ಪತಿಯ ಸಹವಾಸದಿಂದಲೇ ಲಭಿಸೀತು. ಕಾಶೀ, ಗಯಾ, ಪ್ರಯಾಗ, ಪುಷ್ಕರ, ಜಗನ್ನಾಥ, ಬದರೀನಾಥ, ರಂಗನಾಥ, ದ್ವಾರಕಾನಾಥ, ರಾಮನಾಥ ಮುಂತಾದ ಸ್ಥಳಗಳಿಗೆ ಹೋಗಿ ಪರಮಾತ್ಮನನ್ನು ಸೇವಿಸಿದರೆ ಆವ ಪುಣ್ಯವೋ, ಅದು ಪತಿಯ ದರ್ಶನ ಮಾತ್ರದಿಂದಲೇ ಉಂಟಾಗುವುದರಲ್ಲಿ ಆವ ಸಂದೇಹವೂ ಇರಲಾರದು. ಸ್ವಾಮಿಯ ಸೇವೆಯಿಂದ ಸ್ತ್ರೀಯು ಸುಖ ಸೌಭಾಗ್ಯ ಯಶಸ್ಸು ಮೊದಲಾದ ಮಂಗಳ ಗುಣಗಳಿಗೆ ತೌರುಮನೆಯೆನಿಸುವಳು. ಆವ ಸ್ತ್ರೀಯ ಸೇವೆಯಿಂದ ಪತಿಯು ಸಂತುಷ್ಟನಾಗುವನೋ, ಅಂತಹ ಸ್ತ್ರೀಯನ್ನು ಭೂಲೋಕಕ್ಕೆ ಇಳಿದು ಬಂದ ಸೌಭಾಗ್ಯಲಕ್ಷ್ಮಿಯೆಂದು ಎಲ್ಲರೂ ತಿಳಿದು ಗೌರವಿಸುವರು. ಗಂಡನನ್ನು ಬಿಟ್ಟವಳಿಗೆ ರೂಪ ಯಶಸ್ಸು ಸುಖ ಸದ್ಗತಿ ಮುಂತಾದುವೆಲ್ಲವೂ ನಷ್ಟವಾಗಿ ಹೋಗಿ ಅನಿಷ್ಟ ಮುಚ್ಚಿಕೊಳ್ಳುವುದು ಸ್ವಾಮಿಯು ಸಿಟ್ಟುಗೊಂಡರೆ, ಸರ್ವ ದೇವತೆಗಳೂ ಸಿಟ್ಟುಗೊಳ್ಳುವರು, ಸ್ವಾಮಿಯು ಸಂತಸಗೊಂಡರೆ, ಸರ್ವ ದೇವತೆಗಳೂ ಸಂತಸಗೊಳ್ಳುವರು ಸಿದ್ಧಾಂತವೇನೆಂದರೆ—ಸ್ವಾಮಿಯೇ ಸತಿಗೆ ಪರಗತಿ, ಸ್ವಾಮಿಯೇ ಪರಮಗುರು, ಸ್ವಾಮಿಯೇ ಸಕಲ ತೀರ್ಥವು, ಸ್ವಾಮಿಯೇ ಪುಣ್ಯವು, ಸ್ವಾಮಿಯೇ ಆರಾಧ್ಯದೇವತೆ, ಸ್ವಾಮಿಯೇ ತಪಸ್ಸು, ಸ್ವಾಮಿಯೇ ಸೌಭಾಗ್ಯ, ಸ್ವಾಮಿಯೇ ಭೂಷಣವು, ಸ್ವಾಮಿಯೇ ಸ್ತ್ರೀಜಾತಿಗೆ ಪರಮ ಧರ್ಮಸ್ವರೂಪನು.

ಹೆಂಗುಸಿಗೆ ಸ್ವಾಮಿ ಸೇವೆ ಬಿಟ್ಟು ಬೇರೆಯ ಧರ್ಮವಿಲ್ಲ. ಈ ಧರ್ಮವು ಎರಡು ಬಗೆ. ಒಂದನೆಯದು—ಸ್ವಾಮಿಯು ಬದುಕಿರಲು, ಅವನ ಇಷ್ಟಕ್ಕೆ ಅನುಸಾರವಾಗಿ ನಡೆಯುತ್ತಾ, ಅವನಿಗೆ ಹೇಗೆ ನಡೆದುಕೊಂಡರೆ ಸುಖವಾದೀತೋ ಹಾಗೆ ಮಾಡಿ ನಿತ್ಯವೂ ಆತನಿಗೆ ಹಿತವನ್ನೇ ಬಯಸುತ್ತಿರುವುದರ ಮೂಲಕವಾಗಿ ದೇಹವನ್ನು ಸಾರ್ಥಕಗೊಳಿಸುವುದು. ಎರಡನೆಯದು—ಸ್ವಾಮಿಯ ವಿಯೋಗವುಂಟಾಗಲು, ಪತಿಜೀವಿತೆಯಾದ ಪತಿವ್ರತೆಗೆ ಸಹಗಮನವೇರ್ಪಟ್ಟಿರುವುದು. ಈಗ ಅದು ಅನೇಕ ಕಾರಣಗಳಿಂದ ಸಾಧ್ಯವಾಗತಕ್ಕುದಲ್ಲ ಅದಕ್ಕೆ ಪ್ರತಿಯಾಗಿ ಗಂಡನಿಲ್ಲದವಳು ಯಾವಜ್ಜೀವವೂ ಬ್ರಹ್ಮ

ಚರ್ಯವ್ರತವನ್ನು ಅವಲಂಬಿಸಿಕೊಂಡು ಪತಿಯನ್ನೇ ಧ್ಯಾನಿಸುತ್ತಾ ಜೀವಿತಶೇಷವನ್ನು ಕಳೆವುದು. ಇವೆರಡು ಹೊರತಾಗಿ ನಾರಿಯರಿಗೆ ಮತ್ತಾವ ಧರ್ಮವೂ ಇಲ್ಲ. ಆದುದರಿಂದ ಪ್ರಕೃತದಲ್ಲಿ ನಿನಗೆ ಮೊದಲನೆಯದಾದ ಧರ್ಮದ ಆಚರಣೆಯು ಶ್ರೇಯಸ್ಕರವು. ಅದುಕಾರಣ ನೀನು ವಿವಾಹ ಮಾಡಿಕೊಂಡು ಪತಿಯ ಮತವನ್ನೇ ಅನುಸರಿಸಿ ಉದ್ಧಾರವಾಗುವುದೇ ಯುಕ್ತವಾಗಿ ಕಂಡು ಬರುವುದು.

ಸರಳೆಯು ಅಪರಿಚಿತೆಯ ಧರ್ಮ ತತ್ತ್ವವನ್ನು ಒಂದೇ ಮನದಿಂದ ಕೇಳಿದಳು. ಅವಳ ಕಣ್ಣುಗಳಿಂದ ಸಂತೋಷ ಸೂಚಕವಾದ ಕಂಬನಿಯು ತಟತಟನೆ ಸುರಿಯಿತು. ಕೊಂಚ ಹೊತ್ತಿನ ಮೇಲೆ ಸರಳೆಯು,—"ತಾಯಿ ! ನಾನು ಆರನ್ನು ಪತಿಯೆಂದು ಮನಸ್ಸಿನಿಂದಲೇ ವರಿಸಿರುವೆನೋ, ನಾನು ಆರಿಗಾಗಿ ಈ ಅಪ್ರಯೋಜನವಾದ ಪ್ರಾಣವನ್ನಾದರೂ ಬಿಡಲು ಮುಂದುವರಿದು ಬಂದಿರುವೆನೋ, ಆ ಮಹಾ ಪುರುಷನನ್ನು ಈಗ ನಾನು ಪಡೆಯಲಾರೆನು ಹೀಗಿರುವಲ್ಲಿ ನಾನು ಮದುವೆಯಾಗುವ ಬಗೆ ?" ಎಂದಳು.

ಅಪರಿ—ಆತನನ್ನೇ ಪಡೆಯಲು ಅಡ್ಡಿಯೇನಿರುವುದು ?

ಸರಳೆ—ಆತನನ್ನೇ ನಾನು ಮದುವೆಯಾಗುವುದಾದರೆ, ನನ್ನ ತಂದೆಯು ಆತನನ್ನು ಕೊಲ್ಲದೇ ಬಿಡನು ನನ್ನ ತಂದೆಯಾದರೋ ದುರ್ದಾಂತನಾದ ಅತ್ಯಾಚಾರ ಪರಾಯಣನಾದ ಜೋಡೀದಾರನು ನನ್ನ ಹೃದಯೇಶ್ವರನಂತೂ ಒಪ್ಪೊತ್ತಿನ ಕೂಳಿಗೆ ಮಾರ್ಗವಿಲ್ಲದ ದರಿದ್ರ ಯುವಕನು.

ಅಪರಿ—(ಸುತ್ತಲೂ ನೋಡಿ) ಮಗು ! ಈಗ ಬಲು ಹೊತ್ತಾಯಿತು. ನೀನು ಉಪವಾಸದಿಂದಲೂ ಮಾರ್ಗಾಯಾಸದಿಂದಲೂ ಬಲು ಬಳಲಿರುವುದರಿಂದ ಇಂದು ನೀನು ಸುಖದಿಂದ ನಿದ್ರಿಸು.

ಸರಳೆಯು ಸುಮ್ಮನಾದಳು. ಅಪರಿಚಿತೆಯು ಮಲಗುವುದಕ್ಕೆ ಎರಡು ಹಾಸುಗೆಗಳನ್ನು ಸಿದ್ಧಪಡಿಸಿ ಒಂದರಲ್ಲಿ ಸರಳೆಯನ್ನು ಮಲಗಿಸಿ ಮತ್ತೊಂದರಲ್ಲಿ ತಾನೂ ಮಲಗಿಕೊಂಡು ನಿದ್ರಿಸಿದಳು.



# ಹತ್ತೊಂಭತ್ತನೆಯ ಲಂಬಕ.



## ನಾ ನಾ ಕ ಥೆ

ಇತ್ತ ಕಡೆ ಶಿವರಾಮಪುರದಲ್ಲಿ ಸೇವಕರೆಲ್ಲರೂ ಸರಳೆಯನ್ನು ಹುಡುಕಿದರು. ಎಷ್ಟು ಹುಡುಕಿದರೂ ಸರಳೆಯು ಸಿಕ್ಕಲಿಲ್ಲ ಕೆಲವು ಸೇವಕರು ವಿನಯಕುಮಾರನು ಸರಳೆಯನ್ನು ಎಲ್ಲಿಯಾದರೂ ಅವಿತಿಟ್ಟಿರಬೇಕೆಂದು ಊಹಿಸಿ ವಿನಯನಿದ್ದಲ್ಲಿಗೆ ಬಂದು ತಮ್ಮ ತಮ್ಮ ಬುದ್ಧಿಯೆಲ್ಲವನ್ನೂ ವೆಚ್ಚ ಮಾಡಿನೋಡಿದರು ಅಲ್ಲಿಯೂ ಫಲವಾಗಲಿಲ್ಲ ಹೀಗಿದ್ದರೂ "ಪಾಷಂಡನಾದ ವಿನಯನೇ ಮೋಸಮಾಡಿ ತನ್ನ ಮಗಳನ್ನು ಗುಟ್ಟಾಗಿ ಸಾಗಿಸಲು ಯತ್ನಮಾಡಿರುವನು ಹಾಗಲ್ಲದಿದ್ದರೆ ಏನೂ ಅರಿಯದ ಸರಳೆಯು ಹಠಾತ್ತಾಗಿ ಮನೆಯನ್ನು ಬಿಟ್ಟು ಹೊರಗೆ ಹೋಗಬಲ್ಲವಳಾಗಿದ್ದಳೇ! ದೇವರಾಣೆಗೂ ಈ ಮೋಸದ ಕಾರ್ಯವು ಅವನದೇ ಆಗಿರುವುದು" ಎಂದು ಅಚ್ಯುತಮಹಾಶಯನಿಗೆ ದೃಢವಾದ ನಂಬುಗೆಯಿದ್ದಿತು ಆದುದರಿಂದ ಅಚ್ಯುತನು ವಿನಯನ ಮೇಲೆ ವಿಪರೀತವಾಗಿ ಆಗ್ರಹಮಾಡಿ ಘೋರತರವಾದ ಅಪವಾದವನ್ನು ಅವನ ತಲೆಯ ಮೇಲೆ ಒರಗಿಸಿದನು ಈ ದುರ್ವಾರ್ತೆಯು ಗ್ರಾಮದ ಎಲ್ಲೆಲ್ಲಿಯೂ ವಿಷದ ಗಾಳಿಯಂತೆ ಹಬ್ಬಿತು ಫಲಿತಾಂಶವೇನೆಂದರೆ—ಕೆಲವರು, ಹೊಟ್ಟೆಗಿಲ್ಲದೇ ವಿನಯನು ಬೀದಿಗ ಕಳ್ಳನಾಗಿ ಹೋಗಿರುವನು, ಎಂದರು, ಕೆಲವರು, ವಿನಯನು ಮದ್ಯವನ್ನು ಕುಡಿದು ಆವಾಗಲೂ ಮತ್ತನಂತಿರುವನು, ಎಂದರು, ಕೆಲವರು, ವಿನಯನು ಜಾತಿಕೆಟ್ಟ ಮಾಂಸಾಹಾರಿಯಾಗಿರುವನು, ಎಂದರು, ಕೆಲವರು, ವಿನಯನು ನಾಯಿಯಂತೆ ಕೂಳಿಗ ಮಾರ್ಗವಿಲ್ಲದ ಮೋಚಿಯವರ ಮನೆಯಲ್ಲಾಗಲಿ ತಿನ್ನುವನು, ಎಂದರು, ಕೆಲವರು, ವಿನಯನು ಗ್ರಾಮಗ್ರಾಮಗಳಿಗೆ ನುಗ್ಗಿ ಸಣ್ಣ ಸಣ್ಣ ಹುಡುಗಿಯರನ್ನು ಕದ್ದು ಒಂದೆರಡೆಡೆಗಳಲ್ಲಿ ಒಡವೆಗಳನ್ನೂ ತಿಂದಿರುವನು, ಎಂದರು. ಈ ಸುದ್ದಿಯು ಎಲ್ಲೆಲ್ಲಿಯೂ ಹರಡಿ, ಆರಾರು ವಿನಯನನ್ನು ಪ್ರೀತಿಸುತ್ತಿದ್ದರೋ, ಅವರೆಲ್ಲರೂ ವಿಸಾದದೊಂದು ನೆವಮಾಡಿಕೊಂಡು ವಿನಯನನ್ನು ನಿಂದಿಸಿದ ಹೊರತು ಸಿಪ್ಪೆಮಾಡುತ್ತಿರಲಿಲ್ಲ ಸರೋಜಿನಿಯು "ದೇವತೆಯಂತಿದ್ದ ವಿನಯನೇನಾದರೂ ಜನಗಳು ಆಡಿಕೊಳ್ಳುವಂತೆ

ನಿಜವಾಗಿಯೂ ಆಗಿರಬಹುದೇ ? ಹತವಿಧಿಯ ಲೀಲೆಯು ಆವ ಬಗೆಯಾಗಿರುವುದೋ ಬಲ್ಲವರಾರು?" ಎಂದು ಅಡಿಗಡಿಗೆ ಸಂಕಟಪಟ್ಟುಕೊಳ್ಳುತ್ತಿದ್ದಳು.

ನಮ್ಮ ಪೂರ್ವಪರಿಚಿತನಾದ ಗೌರೀಶಂಕರನು ಈ ಸಂಗತಿಯನ್ನು ಅರಿಯದವನಾಗಿರಲಿಲ್ಲ. ಅವನು ಕಂಡಕಂಡವರ ಮುಂದೆಲ್ಲಾ "ನಾಳೆಯ ದಿನವೇ ವಿನಯನನ್ನು ಒದ್ದು ಒದ್ದು ನಾಯಿಸುವೆನು." ಎಂದು ಕೆಲವರಲ್ಲಿಯೂ, ವಿನಯನು ಈ ದೇಶದಲ್ಲಿರುವುದಾದರೆ, ಮತ್ತಾವ ಅನರ್ಥವುಂಟಾಗುವುದೋ ಗೊತ್ತಾಗುವುದಿಲ್ಲವಾದುದರಿಂದ, ಅವನನ್ನು ಈ ಸೀಮೆಯಿಂದಲೇ ಹೊರಡಿಸಿ ಬಿಡುವೆನು" ಎಂದು ಕಲವರಲ್ಲಿಯೂ, ಮತ್ತಾವುದೋ ವಿಷಯಗಳನ್ನು ಮತ್ತೆ ಕೆಲವರಲ್ಲಿಯೂ ಹೇಳಿಕೊಂಡು ತನ್ನ ಪ್ರತಾಪವನ್ನು ಹೊಗಳಿಕೊಳ್ಳುತ್ತಿದ್ದನು

ಹಳ್ಳಿಗಳಲ್ಲಿ ಬೇಕುಬೇಕಾದ ಪದಾರ್ಥಗಳನ್ನು ಮಾರುವುದಕ್ಕೆ ಅನುಕೂಲಿಸತಕ್ಕ ಅಂಗಡಿಗಳು ವಿಶೇಷವಾಗಿರುವುದಿಲ್ಲ ಆದುದರಿಂದ ಜನರು ಪದಾರ್ಥಗಳನ್ನು ಕೊಳ್ಳುವುದಕ್ಕೆ ಅನುಕೂಲವಾಗಲೆಂದು ವಾರಕ್ಕೊಂದು ದಿನ ಒಂದು ಅನುಕೂಲವಾದ ಸ್ಥಳದಲ್ಲಿ ಊರ ಹೊರಗೆ ಸಂತೆ ಸೇರುವುದುಂಟು ಇಂತಹ ಸಂತೆಗೆ ಸುತ್ತುಮುತ್ತಲೂ ಇರುವ ಗ್ರಾಮದವರೆಲ್ಲರೂ ಒಂದು ವಾರಕ್ಕೆ ಸಾಕಾಗುವಷ್ಟು ಪದಾರ್ಥಗಳನ್ನು ಕೊಳ್ಳುವುದಕ್ಕಾಗಿ ಬರುವರು ಸಂತೆಯು ವಾರದಲ್ಲಿ ಒಂದೆರಡು ದಿನಗಳ ವರೆಗೆ ಕೂಡುವುದುಂಟು ಆಗ ಅಲ್ಲಿಗೆ ಬಂದವರೆಲ್ಲರೂ ಪದಾರ್ಥಗಳನ್ನು ಕ್ರಯಕ್ಕೆ ಕೊಂಡುಕೊಂಡು ತಮ್ಮ ತಮ್ಮ ಗ್ರಾಮಗಳಿಗೆ ತೆರಳುವರು ಇದೇ ರೀತಿಯಲ್ಲಿ ಶಿವರಾಮಪುರಕ್ಕೆ ಸೇರಿದ ಕಂದವರದಲ್ಲಿ ಸೋಮವಾರದ ಸಂತೆಯೊಂದು ಕೂಡಿದ್ದಿತು ಸಂತೆಗಾಗಿ ಜನರು ಮೇಲೆ ಮೇಲೆ ಬರುತ್ತಿದ್ದರು ವಿನಯನೂ ಮನೆಗೆ ಬೇಕಾದ ಪದಾರ್ಥಗಳನ್ನು ಕೊಂಡುಕೊಳ್ಳುವುದಕ್ಕಾಗಿ ಸಂತೆಗೆ ಬಂದನು

ಕಂದವರದಲ್ಲಿ ಸಂತೆಕೂಡುವ ಸ್ಥಳಕ್ಕೆ ಹತ್ತಿರವಾಗಿಯೇ ಒಂದು ಚಾವಡಿ [illegible] ಚಾವಡಿಯಲ್ಲಿ ಪಟೇಲನೂ ಶಾನುಭೋಗನೂ ದೂರದಲ್ಲಿ ಸಾ[illegible]ರು ತೋಟಿಗರೂ ಕುಳಿತುಕೊಂಡು ಗ್ರಾಮದ ಆಡಳಿತವನ್ನು ನೋಡುತ್ತಿ[illegible] ಸಮಯದಲ್ಲಿ ಗೌರೀಶಂಕರನು ಒಂದು ಕುದುರೆಯನ್ನೇರಿ ಸಂತೆಗೆ ಬಂದನು ಪಟೇಲನು [illegible]ನನ್ನು ಕಂಡಕೂಡಲೆ

ಎದ್ದು ಅವನನ್ನು ಚಾವಡಿಗೆ ಕರೆದುಕೊಂಡು ಬಂದು ಒಂದು ಕಂಬಳಿಯ ಮೇಲೆ ಕುಳ್ಳಿರಿಸಿದನು. ಗ್ರಾಮದ ಮರ್ಯಾದೆಗೆ ತಕ್ಕಂತೆ ತಾಂಬೂಲದ ತಟ್ಟೆಯು ಮುಂದಿರಸಲ್ಪಟ್ಟಿತು. ಗೌರೀಶಂಕರನು ತಾಂಬೂಲವನ್ನು ಸೇವಿಸುವುದಕ್ಕೆ ಪ್ರಾರಂಭ ಮಾಡಿದನು. ಆಗ ಚಾವಡಿಯಲ್ಲಿ ಇಷ್ಟು ಜನರು ಮಾತ್ರವೇ ಅಲ್ಲದೆ ಪರದೇಶದವನೊಬ್ಬನು ಜೀವನವನ್ನು ಸಂಪಾದಿಸುವ ನಿಮಿತ್ತವಾಗಿ ಇಲ್ಲಿಗೆ ಬಂದು ಪಟೇಲನನ್ನು ಆಶ್ರಯಿಸುತ್ತಾ ಅವನಿದಿರಿನಲ್ಲಿಯೇ ಕುಳಿತಿದ್ದನು.

ಗೌರೀಶಂಕರನು ತಾಂಬೂಲವನ್ನು ಸೇವಿಸಿ ಆನಂದ ಸಾಗರದಲ್ಲಿ ಮುಳುಗಿ ತೇಲುತ್ತಿರುವಾಗ, ವಿನಯಕುಮಾರನು ಸಂತೆಯಿಂದ ಮನೆಯ ಕಡೆಗೆ ಹಿಂತಿರುಗಿ ಹೋಗುತ್ತಿದ್ದನು. ಗೌರೀಶಂಕರನು ವಿನಯನನ್ನು ನೋಡಿ,—“ವಿನಯಮಹಾಶಯ ! ಬಿಜಯಮಾಡಿಸೋಣವಾಗಲಿ. ಇಲ್ಲಿ ತಾಂಬೂಲವನ್ನು ಸೇವಿಸಿ ಮುಂದಕ್ಕೆ ತೆರಳಬಹುದು,” ಎಂದು ಹೇಳಿದುದನ್ನು ಕೇಳಿ, ವಿನಯನು ‘ದೊಡ್ಡವರು ಕರೆದರೆ ಹೋಗದಿರುವುದು ಗೌರವವಲ್ಲ’ ಎಂದು ಭಾವಿಸಿಕೊಂಡು ಚಾವಡಿಯಲ್ಲಿ ಬಂದು ಕುಳಿತನು ಗೌರೀಶಂಕರನು ತಾಂಬೂಲದ ತಟ್ಟೆಯನ್ನು ಅವನ ಮುಂದಿರಿಸಿ,—“ಮಹಾಶಯ! ನಮ್ಮ ಯಜಮಾನರು ನಿಮ್ಮ ಮೇಲೆ ಅತಿಯಾಗಿ ಕೆಂಡಗೊಂಡಿರುವರು. ನಿಮ್ಮ ದುರುಳತನಕ್ಕೆ ಸರಿಯಾದ ದಂಡವನ್ನು ವಿಧಿಸಬೇಕೆಂದು ಅವರಪ್ಪಣೆಯಾಗಿರುವುದರಿಂದ, ಈಗ ನೀವು ನಮ್ಮ ಹೇಳಿಕೆಯಂತೆ ನಡೆದುಕೊಳ್ಳತಕ್ಕದಿದೆ,” ಎಂದು ಬಿರುನುಡಿಗಳನ್ನಾಡಿದನು.

ವಿನಯ—(ವಿನಯದಿಂದ) ಮಹಾಶಯ! ನನ್ನ ದುರುಳತನವದೆಂಥದು?

ಗೌರೀ—ನೀನು ಮದ್ಯವನ್ನು ಸೇವಿಸಿ ಜನರನ್ನು ಬಾಯಿಗೆ ಬಂದ ಹಾಗೆ ನಿಂದಿಸುತ್ತಿರುವುದೂ ಹೆಂಗುಸರ ಮೇಲೆ ಪರಿಪರಿಯಾದ ಅತ್ಯಾಚಾರವನ್ನು ನಡೆಯಿಸುತ್ತಿರುವುದೂ, ದುರುಳತನವಲ್ಲವೇನು ? ಇದಕ್ಕಿಂತಲೂ ಮತ್ತೇನಾಗಬೇಕು. ನೋಡಿದರೆ ನಿಮ್ಮ ಹಾವಳಿಯು ಮಿತಿಮೀರಿದಂತಿದೆ.

ಈ ಕೆಟ್ಟ ಮಾತುಗಳನ್ನು ಕೇಳಿದ ಕೂಡಲೆ ವಿನಯನ ಹೃದಯವು ಒಡೆದು ಪುಡಿಪುಡಿಯಾಯಿತು. ಆದರೂ ವಿನಯನು ಶಾಂತವಾದ ಮೂರ್ತಿಯನ್ನು ತಾಳಿಕೊಂಡೇ,—“ತಾವು ಹೇಳುವಂತೆ ದುರುಳತನವನ್ನು ಮಾಡಿದವರಾರು? ನಾನಾದರೋ ಆವ ಕೆಟ್ಟಕೆಲಸವನ್ನೂ ಮಾಡಿದವನಲ್ಲ. ತಾವು

ಸಲ್ಲದ ದುರ್ಗುಣವನ್ನು ಆರೋಪಿಸಿ ನನ್ನನ್ನು ನಿಂದಿಸಲು ತಾವಾರು ? ಈ ರೀತಿಯಾಗಿ ಪ್ರತಿಬಂಧಿಸಲು ತಮಗೆ ಅಧಿಕಾರವೇನಿರುವುದು ? ಎಂದು ಮೃದು ಸ್ವರದಲ್ಲಿ ಉತ್ತರಕೊಟ್ಟನು.

ನೀಚಾಶಯನಾದ ಗೌರೀಶಂಕರನು ಈ ಮಾತನ್ನು ಕೇಳಿ ಸಹಿಸದವನಾಗಿ,—"ಹೆಚ್ಚಾಗಿ ಮಾತನಾಡಿದರೆ, ಪಾದರಕ್ಷಾ ಪ್ರಯೋಗಮಾಡೇನು. ಎಚ್ಚರಿಕೆ ! ಎಂದನು.

ವಿನಯ—ಮಹಾಶಯ ! ನಾಲಗೆಯನ್ನು ಸ್ವೇಚ್ಛೆಯಾಗಿ ಬಿಡಲಾಗದು. ಗೌರವಕ್ಕೆ ತಕ್ಕಂತೆ ಮಾತನಾಡುವುದು ದೊಡ್ಡ ಮನುಷ್ಯರಿಗೆ ಯೋಗ್ಯವಾದುದು.

ಗೌರೀ—ತೊತ್ತಿನ ಮಗನೇ ! ತಲೆಯುಬ್ಬಿ ಮಾತನಾಡುವೆಯಾ ? ನಿನ್ನನ್ನು ಚೂರುಚೂರಾಗಿ ಕತ್ತರಿಸಿ ಈ ಗ್ರಾಮದ ನಾಯಿನರಿಗಳಿಗೆ ಹಬ್ಬದೂಟಮಾಡಿಸಿಬಿಡುವೆನು ಬೊಡ್ಡೀಯ ಮಗನೇ ! ನಾನಾರು, ಗೊತ್ತಿಲ್ಲವೇ ಏನು ? ಆರೊಡನೆ ನಿನ್ನ ಪ್ರತಾಪವನ್ನು ತೋರುವೆ ? ಎಚ್ಚರಿಕೆ !

ವಿನಯ—ನಿಮ್ಮ ಯೋಗ್ಯತೆ ಕಂಡುದೇ ಆಗಿದೆ ಆರು ತಾನೇ ನಿಮ್ಮ ಮಂಗಳ ಗುಣಗಳನ್ನು ಅರಿಯರು ? ಇನ್ನಾದರೂ ಕೆಟ್ಟಮಾತುಗಳನ್ನಾಡದಿರಿ. ಮಿತಿಮೀರುವುದಾದರೆ, ರಾಜ್ಯವು ಇನ್ನೂ ಅನಾಯಕವಾಗಿಲ್ಲ ಅಲ್ಲಲ್ಲಿ ನ್ಯಾಯವೆಂಬುದೂ ಇರುವುದು

ಗೌರೀ— (ತೋಟಿಗಳನ್ನು ನೋಡಿ) ಏತಕ್ಕೆ ಸುಮ್ಮನೇ ನೋಡುತ್ತಾ ಕುಳಿತಿದ್ದೀರೋ ? ಅವನ ಮುದ್ದುಮೊಗ ನೋಡಿ ನಮಗೇನಾಗಬೇಕು ? ಕಾಲಿನ ಎಕ್ಕಡ ತೆಗೆದು ಅವನ ಬಾಯಲ್ಲಿ ನೀರು ಬರುವವರೆಗೂ "ರಪಾರಪ್" ಎಂದು ಹೊಡೆಯಿರಿ ಬಿಡಬೇಡಿ, ಬಿಡದೇ ಹೊಡೆಯಿರಿ

ವಿನಯನು ಈ ಮಾತನ್ನು ಕೇಳಿ ಎದ್ದು ನಿಂತುಕೊಂಡು ಪ್ರಲಯ ಕಾಲದ ರುದ್ರನಂತೆ ಕಣ್ಣುಗಳಿಂದ ಬೆಂಕಿಯ ಕಿಡಿಗಳನ್ನು ಸುರಿಸುತ್ತಾ ಗಟ್ಟಿಯಾಗಿ "ಇಲ್ಲಿ ನನ್ನವರಾರೂ ಇಲ್ಲವೇ ? ನ್ಯಾಯಾನ್ಯಾಯಗಳನ್ನು ವಿಚಾರಿಸಿ ಅನ್ಯಾಯಮಾಡಿದವರಿಗೆ ದಂಡಿಸತಕ್ಕ ಮಹನೀಯರಾರೂ ಇಲ್ಲವೇ ? ಹಾ ಜಗದೀಶ !" ಎಂದು ಆರ್ಭಟಿಸಿದನು.

ಚಾವಡಿಯಲ್ಲಿ ಪರದೇಶದವನೊಬ್ಬನು ಕುಳಿತಿದ್ದನೆಂದು ನಾವು ಮೊದಲೇ ತಿಳಿಸಿರುವನಷ್ಟೆ. ಆತನು ಎಲ್ಲವನ್ನೂ ಕಣ್ಣಾರ ನೋಡಿಯೂ ಕಿವಿಯಾರೆ

ಕೇಳಿಯೂ ಗೌರೀಶಂಕರನ ಅತ್ಯಾಚಾರವನ್ನು ತಾಳಲಾರದವನಾಗಿ ಎದ್ದು ನಿಂತುಕೊಂಡು,-"ನಾನಿರುವೆನು, ಮಹಾಸ್ವಾಮಿ! ಇಂತಹ ಅನ್ಯಾಯವನ್ನು ನಾನೆಂದಿಗೂ ಸಹಿಸ ತಕ್ಕವನಲ್ಲ ತಪ್ಪುಮಾಡಿದವನನ್ನು ನಾನು ಪ್ರಾಣದಿಂದ ಬಿಡಲಾರೆನು. ತಮ್ಮ ಅಪ್ಪಣೆಯಾದಲ್ಲಿ ಈ ಖೂಳನನ್ನು ಈ ಗ್ರಾಮದ ದೇವತೆಗೆ ನರಬಲಿ ಕೊಟ್ಟುಬಿಡುವೆನು," ಎಂದು ಕಠಿನೋಕ್ತಿಗಳನ್ನಾಡಿದನು ಗೌರೀಶಂಕರನು ಈ ಮಾತನ್ನು ಕೇಳಿ ಹುಲಿಯಂತೆ ಪರಸ್ಥಳದವನ ಮೇಲೆ ಬಿದ್ದು ಅವನ ಕೆನ್ನೆಯ ಮೇಲೆ ಫಳೀರ್ ಫಳೀರ್ ಎಂದು ಬಲವಾದ ಪೆಟ್ಟುಗಳನ್ನಿತ್ತನು ಈಗ ಪರದೇಶದವನಿಗೆ ಮತ್ತಾರ ಅಪ್ಪಣೆಯೂ ಬೇಕಾಗಿಲ್ಲವೆ, ಅವನು ತನ್ನ ಕಾಲಿನಲ್ಲಿದ್ದ ಎಕ್ಕವಡವನ್ನು ಕಳಚಿಕೊಂಡು ಹಿಂದೆ ಮುಂದೆ ನೋಡದೆ ಗೌರೀಶಂಕರನಿಗೆ ಬಲವತ್ತರವಾದ ಹತ್ತಾರು ಏಟುಗಳನ್ನು ಒಂದೇಉಸಿರಿನಲ್ಲಿ ಹೊಡೆದನು. ಈ ಏಟುಗಳನ್ನು ತಡೆಯಲಾರದೆ ಗೌರೀಶಂಕರನು ಒಂದು ಕ್ಷಣಮಾತ್ರದಲ್ಲಿಯೇ ಮೂರ್ಛೆಗೊಂಡವನಾಗಿ ನೆಲದ ಮೇಲೆ ಬಿದ್ದನು ಉಳಿದವರೆಲ್ಲರೂ ಪರದೇಶದವನ ಕರಾಳ ಮೂರ್ತಿಯನ್ನುನೋಡಿ ಹೆದರಿದವರಾಗಿ ಮೇಲಕ್ಕೆ ಏಳಲು ಕಾಲೇ ಬಾರದೆ, ಚಿತ್ರದ ಬೊಂಬೆಗಳಂತೆ ಇದ್ದಲ್ಲಿಯೇ ಕುಳಿತಿದ್ದು ಬಿಟ್ಟರು ಆರಿಗೂ ಗೌರೀಶಂಕರನನ್ನು ಮುಟ್ಟುವುದಕ್ಕೆ ಕೂಡ ಧೈರ್ಯವಿಲ್ಲದೆಯೇ ಹೋಯಿತು ಪರದೇಶದವನನ್ನು ಆಗಣ ಸ್ಥಿತಿಯಲ್ಲಿ ಆರಾದರೂ ದೃಷ್ಟಿಯಿಟ್ಟು ನೋಡಿದ್ದರೆ, ಅವರು ಗದಾಯುದ್ಧದಲ್ಲಿ ಭೀಮಸೇನನಿಗೆ ಎಂತಹ ವೀರಾವೇಶವುಂಟಾಗಿದ್ದಿರಬಹುದೆಂದು ಕೂಂಚಮಟ್ಟಿಗಾದರೂ ಊಹಿಸುವುದಕ್ಕೆ ಸಾಕಾಗಿದ್ದಿತು. ಇಷ್ಟೆನ್ನುವುದರೊಳಗಾಗಿ ಊರಜನರೆಲ್ಲರೂ ಬಂದು ಸೇರಿದರು ಈ ವ್ಯವಹಾರಕ್ಕೆ ಗೌರೀಶಂಕರನೇ ಮೂಲಕಾರಣವೆಂದು ತಿಳಿದು ಬಂದುದರಿಂದ ಆರೂ ಅಲ್ಲಿ ನಿಲ್ಲದೆಯೇ ತಮ್ಮ ತಮ್ಮ ಕೆಲಸಗಳಮೇಲೆ ಹೊರಟುಹೋದರು. ಬಳಿಕ ವಿನಯನೂ ಅಲ್ಲಿರದೆ ಮನೆಯ ಕಡೆಗೆ ತಿರುಗಿದನು ಪರದೇಶದವನೂ ಮತ್ತಾವ ಮಾತನ್ನೂ ಆಡದೆ, ವಿನಯನ ಹಿಂದೆ ಹಿಂದೆಯೇ ಹೊರಟನು. ತರುವಾಯ ಶಾನುಭೋಗನು ನೀರನ್ನು ತರಿಸಿ ಶೈತ್ಯೋಪಚಾರ ಮಾಡಿದ ಕೂಡಲೆ, ಗೌರೀಶಂಕರನಿಗೆ ಜ್ಞಾನೋದಯವಾಯಿತು. ಗೌರೀಶಂಕರನು ಚೇತರಿಸಿಕೊಂಡು ಎದ್ದು ಕುಳಿತು ಅಲ್ಲಿದ್ದವರನ್ನು ನೋಡಿ,—"ನೀವೆಲ್ಲರೂ ಸೇರಿಕೊಂಡು ನನ್ನನ್ನು ಕೊಲೆಮಾಡಬೇಕೆಂದು ಸನ್ನಾಹಮಾಡಿರುವಿರಾ ! ನೀವೆ

ಲ್ಲರೂ ಸ್ವಾಮಿ ದ್ರೋಹಿಗಳು. ಯಜಮಾನನಿಗೆ ಹೇಳಿ ನಿಮ್ಮ ಅನ್ನಕ್ಕೆ ಕಲ್ಲು ಹಾಕಿಸಿ ತಿನ್ನುವ ಬಾಯಿಗೆ ಮಣ್ಣು ತೂರಿಸುವೆನು. ನನ್ನನ್ನು ಆರೆಂದು ತಿಳಿದಿರುವಿರಿ ? ಸೂಳೆಯ ಮಕ್ಕಳಿರಾ !" ಎಂದು ಅಬ್ಬರಿಸಿದನು

• ಈ ಮಾತನ್ನು ಕೇಳಿ ತೋಟಿಯೊಬ್ಬನು ರೇಗಿದವನಾಗಿ,—"ಸ್ವಾಮಿ! ನೀವು ದೊಡ್ಡವರು, ದೊಡ್ಡ ಮಾತನ್ನಾಡಬೇಕು ನಾವು ನಿಮ್ಮನ್ನೇನಾದರೂ ಕೊಲ್ಲುವುದಕ್ಕೆ ಯತ್ನಮಾಡಿದೆವೇ ? ನೀವೂ ಅವರೂ ಜಗಳಕಾಯುವುದಾದರೆ, ನಾವೇನ ಮಾಡಬೇಕು ? ನಿಮಗೆ ಅಂತಹ ಪ್ರಾಣಾಪತ್ತೇನಾದರೂ ಸಂಭವಿಸುವಂತಿದ್ದರೆ, ನಾವು ಇಲ್ಲಿ ಸುಮ್ಮನೆ ಕುಳಿತುಕೊಂಡಿರುತ್ತಿದ್ದೆವೇ ? ಇದು ನಿಮಗೆ ಗೊತ್ತಾಗಲಿಲ್ಲವೇಕೆ ?" ಎಂದನು

ಮತ್ತೊಬ್ಬನು,—"ಮಹಾಸ್ವಾಮಿ! ನೀವು ನನಗೆ ಸರಿಯಾಗಿ ಅಪ್ಪಣೆ ಮಾಡಲಿಲ್ಲ ತಮ್ಮ ಅಪ್ಪಣೆಯಿಲ್ಲದೆಯೇ ನಾನು ಏನಮಾಡುವುದಕ್ಕಾದೀತು? ಅಪ್ಪಣೆಯಾಗಿದ್ದಿದ್ದರೆ, ಆಮಾತೇ ಬೇರೆ ಈಗ ಮಾತನಾಡಿ ಫಲವೇನು?" ಎಂದನು.

ಇನ್ನೊಬ್ಬನು,—"ನನಗೆ ಪರಸ್ಥಳದವನ ಮೇಲೆ ಅತಿಯಾಗಿ ಕೋಪ ಬಂದಿತು, ಅವನನ್ನು ಅಲ್ಲಿಯೇ ಹೊತುಬಿಡುವಷ್ಟು ಶಕ್ತಿಯೂ ನನ್ನ ದೇಹದಲ್ಲಿ ಉಂಟಾಯಿತು ಆದರೆ ಅವನ ವೀರಾವೇಶವನ್ನು ನೋಡಿದೊಡನೆಯೇ ನನ್ನ ಬಾಯಿ ಒಣಗಿಹೋಯಿತು, ಕೈಕಾಲುಗಳು ಗಡಗಡನೆ ನಡುಗಿದುವು. ನಾನು ಓಡಿಹೋಗುವುದಕ್ಕ ಎಷ್ಟೆಷ್ಟು ಪ್ರಯತ್ನಮಾಡಿದರೂ, ಕುಳಿತ ಸ್ಥಳದಿಂದ ಮೇಲಕ್ಕೆ ಏಳಲು ನನಗೆ ಕಾಲೇ ಬರಲಿಲ್ಲ," ಎಂದನು.

ಕೊನೆಯವನು,—"ಬುದ್ಧೀ! ತಪ್ಪು ಮಾಡಿದವನನ್ನು ದಂಡಿಸುವುದು ಸಹಜವಾದುದು. ತಪ್ಪಿಲ್ಲದವನನ್ನು ಹೇಗೆತಾನೇ ದಂಡಿಸುವುದಕ್ಕಾದೀತು? ಆದುದರಿಂದ ಆತನನ್ನು ದಂಡಿಸುವುದಕ್ಕೆ ನನಗೆ ಕೈಬಾರದೇ ಹೋಯಿತು ಅನ್ಯಾಯವಾಗಿ ನಾವು ಕೆಲಸಮಾಡಿದರ ದೇವರು ಮೆಚ್ಚುವನೇ? ನಾವು ಇನ್ನೂ ಪಾಪಪುಣ್ಯಗಳಿಗೆ ಹೆದರತಕ್ಕವರು. ದೇವರು ಆವಾಗಳೂ ನಮ್ಮ ಕೆಲಸಗಳನ್ನು ನೋಡುತ್ತಲೇ ಇರುವುದರಿಂದ, ಕೆಟ್ಟ ಕೆಲಸಮಾಡಿ ಅವನಲ್ಲಿಗೆ ಹೋದಾಗ ನಾವೇನ ಹೇಳಬೇಕು ? ಬುದ್ಧೀ! ಇಲ್ಲದುದನ್ನು ಮಾಡುವುದಕ್ಕೆ ನಮ್ಮಿಂದಾಗಲಾರದು ನೀವು ಏನಬೇಕಾದರೂ ಮಾಡಬಹುದು," ಎಂದನು.

ಗೌರೀಶಂಕರನು ಆ ಮಾತುಗಳನ್ನು ಕೇಳಿ ಅದಕ್ಕೆ ಪ್ರತಿಯಾಗಿ ಮಾತನಾಡುವುದು ಸರಿಯಲ್ಲವೆಂದು ತಿಳಿದು, "ನನಗೆ ಗಾಡಿಯೊಂದನ್ನು ಮಾಡಿಸಿ ಕೊಟ್ಟರೆ; ನಾನು ಊರನ್ನಾದರೂ ಸೇರಿಕೊಳ್ಳುವೆನು ಈಗ ಕುದುರೆಯ ಮೇಲೆ ಹತ್ತುವುದು ನನ್ನಿಂದಾಗಲಾರದು. ಬೇಗನೆ ಗಾಡಿಯೊಂದನ್ನು ತರಿಸಿ ಕೊಡಿರಿ" ಎಂದು ಹೇಳಿದ ಮಾತನ್ನು ಪಟೇಲನು ಕೇಳಿ ಗಾಡಿಯೊಂದನ್ನು ತರಿಸಿ ಅದರಲ್ಲಿ ಗೌರೀಶಂಕರನನ್ನು ಮಲಗಿಸಿ ಶಿವರಾಮಪುರಕ್ಕೆ ಕಳುಹಿಸಿಕೊಟ್ಟನು. ಗೌರೀಶಂಕರನು ಸಂಧ್ಯಾಕಾಲದೊಳಗಾಗಿ ಊರನ್ನು ತಲಪಿ ಅಚ್ಯುತಾನಂತನನ್ನು ಕಂಡು ಅವನ ಕಾಲುಗಳ ಮೇಲೆ ಬಿದ್ದು ಹೊರಳಾಡುತ್ತಾ, ತನ್ನ ದುರವಸ್ಥೆಯನ್ನು ನಡೆದುದಕ್ಕಿಂತಲೂ ಅತಿಶಯವಾಗಿ ವರ್ಣನೆಮಾಡಿ, ಯಜಮಾನನಿಗೆ ತಲೆಮೀರಿದ ಕೋಪಬರುವಂತೆ ಮಾಡಿದನು ಅಚ್ಯುತನು ಸಾವಕಾಶ ಮಾಡದೇ ವಿನಯನನ್ನು ಬಂದೀಖಾನೆಯಲ್ಲಿ ಇಡಿಸದೇ ಬಿಡುವುದಿಲ್ಲವೆಂದು ಹಠಹಿಡಿದು ಗೌರೀಶಂಕರನನ್ನು ಜತೆಯಲ್ಲಿಯೇ ಕರೆದುಕೊಂಡು ಹೊರಹೊರಟನು ಈ ಸಂಗತಿಯು ಮನೆಯ ಜನರಿಗೆಲ್ಲಾ ಗೊತ್ತಾಗಿ ಎಲ್ಲರೂ ಗುಸಗುಸನೆ ಪಿಸಪಿಸನೆ ಮಾತನಾಡಿಕೊಳ್ಳುವುದಕ್ಕೆ ಮೊದಲು ಮಾಡಿದರು.



# ಇಪ್ಪತ್ತನೆಯ ಲಂಬಕ



## ನೂ ತ ನ ಪ್ರ ಭಾ ತ .

ಅಚ್ಯುತಮಹಾಶಯನು ಆವ ದಿನ ವಿನಯನಿಗೆ ಸರಿಯಾದ ದಂಡನೆಯನ್ನು ವಿಧಿಸುವುದಕ್ಕಾಗಿ ಗೌರೀಶಂಕರನನ್ನು ಕರೆದುಕೊಂಡು ಹೊರಹೊರಟನೋ, ಅದೇ ದಿನದ ರಾತ್ರಿಯಲ್ಲಿ ಜಾನಕೀನಾಥನು ದೂರದೇಶದಿಂದ ಮನೆಗೆ ಬಂದನು ಜಾನಕೀನಾಥನು ಮನೆಗೆ ಬಂದ ಕೂಡಲೆ ಎಲ್ಲರ ಯೋಗಕ್ಷೇಮವನ್ನು ವಿಚಾರಿಸಿ ತನ್ನ ಹೆಂಡತಿಯಾದ ಸರೋಜಿನಿಯನ್ನೂ ನೋಡಿದನು. ಆಕೆಯು ನಡೆದ ಸಂಗತಿಯೆಲ್ಲವನ್ನೂ ನಾಂಗೋಪಾಂಗವಾಗಿ ಗಂಡನಿಗೆ ತಿಳಿಯಪಡಿಸಿದಳು. ಜಾನಕೀನಾಥನು ತನ್ನ ಪರೋಕ್ಷದಲ್ಲಿ ನಡೆದ ವಿಷಯಗಳನ್ನು ಕೇಳಿ ಕತಿಗೊಂಡವನಾಗಿ ಆ ಕೂಡಲೆ ವಿನಯನಿದ್ದಲ್ಲಿಗೆ ಹೊರಟನು. ವಿನಯನು ತನ್ನ ಪರಮ ಮಿತ್ರನು ಬಂದನೆಂದು ಬಲು ಸಂತಸದಿಂದ

ತನ್ನ ಪೂರ್ವ ವೃತ್ತಾಂತವೆಲ್ಲವನ್ನೂ ತಿಳಿಯಪಡಿಸಿದನು. ಜಾನಕೀನಾಥನು ವಿನಯನ ಮಾತನ್ನು ಕೇಳಿ ಇಂತೆಂದನು:—

"ವಿನಯ! ಕೇಳು, ಹೇಳುವೆನು. ನೀಚನಾದ ಗೌರೀಶಂಕರನು ನಮ್ಮ ಮನೆಯನ್ನು ಸೇರಿ ಅಲ್ಲಿಂದಲೇ ವೃದ್ಧಿಯಾಗಿ ಅದನ್ನೇ ಬೆಂಕಿಯಂತೆ ಸುಟ್ಟು ಬೂದಿಮಾಡುತ್ತಿರುವನು. ಹೇಗಾದರೂ ಮಾಡಿ ಅವನನ್ನು ಮನೆಯಿಂದ ಹೊರಡಿಸಿದ ಹೊರತೂ ಉಳಿಬಾಳಿಲ್ಲ. ಅದಂತಿರಲಿ. ಪ್ರಕೃತದಲ್ಲಿ ಆತನು ನಮ್ಮ ತಂದೆಯ ಒತ್ತಾಸೆಯಿಂದ ನಿನ್ನ ಮೇಲೆ ತಪ್ಪನ್ನು ಆರೋಪಿಸುವುದಕ್ಕಾಗಿ ನ್ಯಾಯಸ್ಥಾನದಲ್ಲಿ ವಾದಿಸುವವನಾಗಿರುವನು. ಅದಕ್ಕಾಗಿ ನೀನು ವ್ಯಸನಪಡಬೇಕಾದುದಿಲ್ಲ. ನಿನಗೆ ಎಷ್ಟು ವೆಚ್ಚವಾಗುವುದಾದರೂ ನಾನು ಕೊಡುವೆನು ವ್ಯವಹಾರದಲ್ಲಿ ಗೌರೀಶಂಕರನಿಗೇ ಅಪಾಯವುಂಟಾಗುವುದಕ್ಕೆ ಬೇಕಾದ ಉಪಾಯಗಳನ್ನು ನಾನು ಮಾಡುವೆನು ನೀನು ಅದರ ಚಿಂತೆಯನ್ನಿಟ್ಟುಕೊಳ್ಳಬೇಡ

ವಿನಯ! ಸಂಕಟಕರವಾದ ಸಂಗತಿಯೊಂದನ್ನು ನಿನಗೆ ತಿಳಿಸಲು ಬಂದಿರುವೆನು ಅದೇನೆಂದರೆ—ನನ್ನ ತಂಗೆ ಸರಳೆಯು ಎಲ್ಲಿಯೋ ಓಡಿ ಹೋದಳಂತೆ. ಎಷ್ಟು ಹುಡುಕಿದರೂ ಇಂದಿನ ವರೆಗೂ ಅವಳು ಸಿಕ್ಕಲಿಲ್ಲ. ಇಷ್ಟು ದಿವಸಗಳಾದರೂ ಅವಳು ಸಿಕ್ಕದಿರುವುದು ನೋಡಿದರೆ, ಅವಳು ಜೀವದಿಂದಿರುವಳೋ ಇಲ್ಲವೋ ಸಂಶಯವಾಗಿದೆ. ಅವಳನ್ನು ಕಾಣದೆ ನನ್ನ ಹೃದಯವು ತತ್ತರಗುಟ್ಟುತ್ತಿರುವುದು."

ಜಾನಕೀನಾಥನು ವಿನಯನೊಡನೆ ಹೀಗೆ ಮಾತನಾಡಿಕೊಂಡು ಮನೆಗೆ ಹಿಂತಿರುಗಿದನು. ರಾತ್ರಿಯಲ್ಲಿ ಬಲು ಹೊತ್ತಾಗಿದ್ದುದರಿಂದ ಅವನು ಮತ್ತಾರೊಡನೆಯೂ ಮಾತನಾಡುವುದಕ್ಕೆ ಅವಕಾಶವಿಲ್ಲದೆ ಮಲಗುವುದಕ್ಕೆ ಹೊರಟುಹೋದನು ಸರೋಜಿನಿಯು ಗಂಡನನ್ನು ಕುರಿತು ವಿನಯನ ವಿಷಯವೇನೆಂದು ಕೇಳಲಾಗಿ, ಜಾನಕೀನಾಥನು,—"ಪ್ರಿಯೆ! ವಿನಯನು ದೇವತಾಸ್ವರೂಪನು ನಿರ್ದುಷ್ಟವಾದ ವಸ್ತುವಿನಲ್ಲಿ ದೋಷವಿರುವುದೆಂದರೇನು? ಅಸತ್ಪುರುಷರ ಕಣ್ಣಿಗೆ ಗುಣಗಳೆಲ್ಲವೂ ದೋಷಗಳಾಗಿಯೇ ಪರಿಣಮಿಸುವುವು," ಎಂದು ಹೇಳಿದನು. ಸರೋಜಿನಿಯು ಮುಂದೆ ಮತ್ತಾವ ಮಾತನ್ನೂ ಆಡದೆ ನಿದ್ರಿಸಿದಳು ಜಾನಕೀನಾಥನು ಮುಂದಣ ಕಾರ್ಯಕ್ರಮವನ್ನು ಚಿಂತಿಸುತ್ತಿರುವಷ್ಟರಲ್ಲಿಯೇ ರಾತ್ರಿಯು ಕಳೆದು ಬೆಳಗಾಗುತ್ತಾ ಬಂದಿತು.

ಬೆಳಗಿನ ಜಾವದಲ್ಲಿ ಅಚ್ಯುತಾನಂತನು ದಂಡಾಧಿಕಾರಿಯಲ್ಲಿ ವಿನಯನ ಅತ್ಯಾಚಾರವನ್ನರುಹಿ ಗೌರೀಶಂಕರನೊಡನೆ ಸ್ವಗ್ರಾಮಕ್ಕೆ ಬಂದು ಸೇರಿದನು. ಆ ಬಳಿಕ ಜಾನಕೀನಾಥನು ತಂದೆಗೆ ಕಾಣಿಸಿಕೊಂಡು ಪ್ರಣಾಮವನ್ನು ಮಾಡಿ ವಿವಾದದ ವಿಷಯವೇನೆಂದು ಕೇಳಿದನು. ಅದಕ್ಕೆ ಗೌರೀಶಂಕರನು ಉತ್ತರವಾಗಿ ನಡೆದ ಸಂಗತಿಯೆಲ್ಲವನ್ನೂ ತನಗೆ ಅನುಕೂಲವಾಗುವ ರೀತಿಯಲ್ಲಿಯೇ ತಿಳಿಯಪಡಿಸಿದನು. ಅದನ್ನು ಕೇಳಿ ಜಾನಕೀನಾಥನು ತಂದೆಯನ್ನು ಕುರಿತು,—"ಈ ವಿಚಾರದಲ್ಲಿ ಗೌರೀಶಂಕರನೇ ದೋಷಿಯೆಂದು ತೋರುವುದು. ಎರಡು ಪಕ್ಷವನ್ನೂ ವಿಚಾರಿಸದೆ ಗೌರೀಶಂಕರನ ಹೇಳಿಕೆಯ ಮೇರೆಯೇ ನ್ಯಾಯಸ್ಥಾನದಲ್ಲಿ ವಿವಾದ ಹೂಡಿದ್ದು ಅಷ್ಟು ತೃಪ್ತಿಕರವಾಗಿಲ್ಲ," ಎಂದು ಹೇಳಿದುದನ್ನು ಕೇಳಿ, ಅಚ್ಯುತನು ಹುಬ್ಬು ಗಂಟಿಕ್ಕಿ,—"ನಾನು ಮನೆಗೆ ಯಜಮಾನನು, ಬೇಕಾದ ಹಾಗೆ ಮಾಡಲು ನನಗೆ ಶಕ್ತಿಯುಂಟು. ಅದನ್ನು ಆಕ್ಷೇಪಿಸುವುದಕ್ಕೆ ನೀನಾರು?" ಎಂದನು ಜಾನಕೀನಾಥನು ಅದನ್ನು ತಡೆಯಲಾರದೆ,—"ತಂದೆಯೇ! ದೊಡ್ಡವರೆನಿಸಿಕೊಂಡವರು ಹೀಗೆ ದಾರಿತಪ್ಪಿ ನಡೆಯಬಾರದು ತಪ್ಪಿಲ್ಲದವನ ಮೇಲೆ ತಪ್ಪನ್ನಾರೋಪಿಸುವುದು ಅನರ್ಥಪರಂಪರೆಗೆ ಕಾರಣವು. ಅದರಲ್ಲಿಯೂ ಬಡಪಾಯಿಯಾದ ವಿನಯನನ್ನು ಈ ಬಗೆಯ ಹಿಂಸೆಗೆ ಗುರಿಮಾಡಿದರೆ, ನಿನಗೆ ಬಂದ ಭಾಗ್ಯವೇನು? ಸತ್ಯಸಂಧನಾದ ವಿನಯನನ್ನು ನೀನು ಪರದಿಂದ ಕೆಡಿಸಬೇಕೆಂದು ಯತ್ನಿಸುವುದಾದರೆ, ನಾನು ಅವನ ಪಕ್ಷದಲ್ಲಿ ನಿಂತು ಅವನನ್ನು ಉದ್ಧಾರಮಾಡುವುದಕ್ಕೆ ಪ್ರಯತ್ನಮಾಡಬೇಕಾಗುವುದು ನೀನು ಅವನಿಗೆ ದ್ವೇಷಿಯಾದರೂ ನನಗವನು ಪರಮ ಮಿತ್ರನು," ಎಂದು ಗಂಭೀರಭಾವದಿಂದರುಹಿದನು

ತಂದೆಯು ಇದನ್ನು ಕೇಳಿ ದಿಟ್ಟತನದಿಂದ,—"ಖೂಳ! ನೀನು ಅವನನ್ನು ಉದ್ಧಾರಮಾಡುವ ಹಾಗೆಯೇ ಇದ್ದೀಯೆ! ಒಂದು ವೇಳೆ ನೀನು ಅವನನ್ನು ಉದ್ಧರಿಸುವ ಬಗೆ ಹೇಗೆ?" ಎಂದು ಕೇಳಿದನು

ಜಾನಕೀ—ಹೇಗೋ ಮಾಡುವೆನು ಅವನಿಗಾಗಿ ನನ್ನ ಪ್ರಾಣವನ್ನಾದರೂ ಕೊಡಬಲ್ಲೆನು.

ಅಚ್ಯುತ—ಅದೇನು, ಅವನ ವಿಷಯದಲ್ಲಿ ನಿನಗೆ ಅಷ್ಟು ವಿಶ್ವಾಸವು? ಅವನಿಗಾಗಿ ನೀನು ಪ್ರಾಣಬಿಡುವುದೆಂದರೇನು? ಅವನಾರು, ನೀನಾರು?

ಜಾನಕೀ—ಆತನು ಧಾರ್ಮಿಕನು, ಆತನು ಪರೋಪಕಾರಿ, ಆತನು ಶಾಂತನು, ಆತನು ನಿರ್ಮಲನು, ಆತನೇ ನಮಗೆ ಪರಮ ಬಂಧು, ಆತನೇ ನಮಗೆ ಪೂಜ್ಯನು.

ಎಂದು ಹೇಳುತ್ತಾ ಹೇಳುತ್ತಾ ಜಾನಕೀನಾಥನು ಕಣ್ಣುಗಳಲ್ಲಿ ನೀರನ್ನು ತಂದುಕೊಂಡು ತಂದೆಯ ಪಾದಗಳಿಗೆರಗಿ,—"ಪಿತನೆ! ವಿನಯನಾದರೋ ನಿರ್ಮಲ ಹೃದಯನು. ಅಂತಹವನಿಗೆ ನೀವು ಈ ಪರಿ ಯಾತನೆಯನ್ನುಂಟುಮಾಡಬಾರದು ಈಗ ಮಾಡಿರುವುದೇ ಸಾಕು. ಈಚೆಗೆ ಗೌರೀಶಂಕರನೂ ಮಾಡಿರುವ ಯಾತನೆಯೋ ತಲೆ ಮೀರಿರುವುದು. ತಂದೆ! ಇನ್ನು ಸಾಕು ನೀವು ಅವನಿಗೆ ಹಿಂದೆ ಎಂಥೆಂಥ ಕಷ್ಟಗಳನ್ನು ಕೊಟ್ಟಿರಿ. ಇಂದಿನ ವರಗೂ ಅವನ ಧರ್ಮವಲ್ಲವೇ ಅವನನ್ನು ಕಾಪಿಟ್ಟುದು. ಪ್ರಕೃತದಲ್ಲಿ ಸರಳೆಯು ತಪ್ಪಿಸಿಕೊಂಡು ಹೋದುದಕ್ಕೆ ವಿನಯನೇ ಕಾರಣವೆಂದು ನೀವು ವೃಥಾಪವಾದವನ್ನು ಅವನ ಮೇಲೆ ಹೊರಿಸಿರುವಿರಿ ಅವನಾದರೋ ಈ ಸಂಗತಿಯನ್ನೇ ಅರಿಯನು ನಾನು ಈ ಸಂಗತಿಯನ್ನು ಚೆನ್ನಾಗಿಯೂ ಪರಿಶೀಲಿಸಿ ನೋಡಿದೆನು ಅಯ್ಯೋಪಾಪ! ವಿನಯನಿಗೆ ಇದೊಂದೂ ತಿಳಿಯದು. ನಿಮ್ಮನ್ನು ನಾನು ಬಗಬಗೆಯಾಗಿ ಬೇಡಿಕೊಳ್ಳುವೆನು ನೀವು ಮಟ್ಟಿಗೆ ಅವನ ಮೇಲೆ ವ್ಯರ್ಥವಾಗಿ ಅಪವಾದವನ್ನು ಹೊರಿಸಬೇಡಿರಿ," ಎಂದು ಹೇಳಿದ ವಿನಯೋಕ್ತಿಗಳು ಅಚ್ಯುತನ ಹೃದಯವನ್ನು ಕೊಂಚವಾದರೂ ಮರುಗುವಂತೆ ಮಾಡಲಿಲ್ಲ ಅಚ್ಯುತನ ಕ್ರೋಧವು ಶಾಂತವಾಗುವುದಕ್ಕೆ ಪ್ರತಿಯಾಗಿ ಅಡಿಗಡಿಗೂ ಹೆಚ್ಚುತ್ತ ಬಂದಿತು ಕೋಪಾವೇಶದಿಂದ ಅಚ್ಯುತನು ತನ್ನನ್ನು ತಾನೇ ಮರೆತವನಾಗಿ ಜಾನಕೀನಾಥನನ್ನು ಎಡದ ಕಾಲಿನಿಂದ ಒದೆದೊದೆದು ಉರುಳಿಸಿಬಿಟ್ಟನು ಜಾನಕೀನಾಥನು ಮತ್ತಾವ ಮಾತನ್ನೂ ಆಡದೆ, ಅಲ್ಲಿಂದೆದ್ದು ಮನೆಯೊಳಕ್ಕೆ ಬಂದುಬಿಟ್ಟನು. ಬಳಿಕ ಅಚ್ಯುತನು ತನ್ನ ಕೋಣೆಯಲ್ಲಿ ತಾನೊಬ್ಬನೇ ಕುಳಿತುಕೊಂಡು, "ನಾನು ಆರ ಮಾತನ್ನೂ ಕೇಳಲಾರೆನು ಏನು ತೋರುವುದೋ ನಾನು ಅದರಂತೆಯೇ ಮಾಡತಕ್ಕವನು ಹಣದ ವಿಷಯದಲ್ಲಿ ನಾನು ಆರಿಗೂ ಸೋಲಬೇಕಾದುದಿಲ್ಲ ಈ ವಿವಾದದಲ್ಲಿ ಎಷ್ಟು ಬೇಕಾದರೂ ವೆಚ್ಚವಾಗಲಿ ಚತುರುಪಾಯಗಳನ್ನು ಅವಲಂಬಿಸಿಯಾದರೂ ನಾನು ವಿನಯನನ್ನು ದುರಂತವಾದ ಕಷ್ಟಕ್ಕೆ ಸಿಕ್ಕಿಸಿಯೇ ಬಿಡುವೆನು" ಎಂದು ಚಿಂತಿಸುತ್ತಿರುವಲ್ಲಿ, ಹಠಾತ್ತಾಗಿ

ತೇಜಸ್ವಿಯಾದ ಸನ್ಯಾಸಿಯೊಬ್ಬನು ಕಣ್ಣಿದಿರಿನಲ್ಲಿ ಬಂದು ನಿಂತಂತಾಯಿತು. ಸನ್ಯಾಸಿಯು ಅಚ್ಯುತನನ್ನು ದುರದುರನೆ ನೋಡಿದನು. ಅಚ್ಯುತನು ನಾಚುಗೆಯಿಂದ ತಲೆಯನ್ನು ಬಗ್ಗಿಸಿಕೊಂಡು ಬಿಟ್ಟನು. ಸನ್ಯಾಸಿಯ ಹೆಸರು ಸಚ್ಚಿದಾನಂದ ಸರಸ್ವತಿ.

ಸನ್ಯಾಸಿಯು ಎಲ್ಲಿನವರೆಗೂ ಅಚ್ಯುತನನ್ನು ಎಡಬಿಡದೆ ನೋಡುತ್ತಿದ್ದನೋ, ಅಲ್ಲಿನ ವರೆಗೂ ಅಚ್ಯುತನು ಸುಮ್ಮನಿದ್ದನು. ಸನ್ಯಾಸಿಯು ತನ್ನ ದೃಷ್ಟಿಯನ್ನು ಮತ್ತೊಂದು ಕಡೆಗೆ ತಿರುಗಿಸಲು, ಅಚ್ಯುತನು ಮೊದಲಿನಂತೆ, "ನಾನು ಮಗನ ಮಾತನ್ನು ಎಂದಿಗೂ ಕೇಳತಕ್ಕವನಲ್ಲ ಇಷ್ಟರಲ್ಲಿಯೇ ನಾನು ವಿನಯನನ್ನು ಧ್ವಂಸಮಾಡಿಬಿಡುವೆನು," ಎಂದು ಮಾತನಾಡಿಕೊಂಡನು ಸನ್ಯಾಸಿಯು ಮತ್ತೆ ಅಚ್ಯುತನನ್ನು ನೋಡಲು, ಅಚ್ಯುತನ ಕಣ್ಣುಗಳಿಗೆ ಈ ರೀತಿಯಲ್ಲಿ ಕಾಣಿಸಲಾರಂಭಿಸಿತು.—"ವಿನಯನು ಸದ್ವಂಶಸಂಭೂತನಾಗಿಯೂ ವಿದ್ಯಾವಂತನಾಗಿಯೂ, ಬುದ್ಧಿವಂತನಾಗಿಯೂ, ಸುಂದರನಾಗಿಯೂ, ಕಾಣಿಸಿದನು ಅವನ ಪಕ್ಕದಲ್ಲಿ ಸರಳೆಯು ನಾಚುಗೆಯಿಂದ ತಲೆಯನ್ನು ತಗ್ಗಿಸಿಕೊಂಡು ಕುಳಿತಿರುವಳು." ಅಚ್ಯುತನು ಇದನ್ನು ನೋಡಿ ಸ್ವರ್ಗಸುಖವನ್ನೇ ಅನುಭವಿಸಿದನು ಬಳಿಕ ಅಚ್ಯುತನು ಮತ್ತೆ ನೋಡಿದನು

"ನವದಂಪತಿಗಳಿಬ್ಬರೂ ಸರಸಸಲ್ಲಾಪಗಳನ್ನಾಡುತ್ತಿರುವರು ಆ ಸಮಯದಲ್ಲಿ ಗೌರೀಶಂಕರನು ಆವುದೋ ನೆಪಮಾಡಿಕೊಂಡು ಅವರೊಡನೆ ಜಗಳ ಕಾಯುತ್ತಿರುವನು, ಆಗಿಂದಾಗ ಅವರನ್ನು ಹೊಡೆಯುವುದಕ್ಕೆ ಹೋಗುವನು. ನವದಂಪತಿಗಳು ಖಿನ್ನರಾಗಿ ಗೌರೀಶಂಕರನ ಬಾಧೆಯನ್ನು ತಡೆಯಲಾರದೆ ಗಡಗಡನೆ ನಡುಗುತ್ತಾ ಕಣ್ಣುಗಳಿಂದ ನೀರನ್ನು ಸುರಿಸುವರು."

ಅಚ್ಯುತನು ಇದನ್ನು ನೋಡಿ, ಗೌರೀಶಂಕರನ ಮೇಲೆ ಕೋಪಗೊಂಡು ಗಟ್ಟಿಯಾಗಿ,—"ನೀಚ, ಪರಮ ನೀಚ! ನೀನೇನ ಮಾಡುವೆ? ಜನಗಳು ಸುಖವಾಗಿರುವುದನ್ನು ನೀನು ಸಹಿಸಲಾರೆಯೋ? ಇಲ್ಲವೆ, ಇತರರಿಗೆ ತೊಂದರೆಯನ್ನುಂಟುಮಾಡುವುದೇ ನಿನ್ನ ಸ್ವಭಾವವೋ? ಹೇಗೆ? ನಿನ್ನ ಕೆಲಸಕ್ಕೆ ತಕ್ಕ ಶಿಕ್ಷೆಯನ್ನು ಮಾಡದೇ ಬಿಡೆನು," ಎಂದುಕೊಂಡು,— "ಆರಲ್ಲಿ ಹೊರಗೆ?" ಎಂದು ಕೂಗಿದನು ಸೇವಕನೊಬ್ಬನು ಓಡಿ ಬಂದು "ಏನಪ್ಪಣೆ?" ಎಂದು ಅತಿ ವಿನಯದಿಂದ ಬಿನ್ನೈಸಿದನು.

ಯಜಮಾನನು,—"ಎಲಾ ! ನಮ್ಮ ಮನೆಯಲ್ಲಿ ಉಂಡ ಮನೆಗೆ ಎರಡು ಬಗೆವ ಗೌರೀಶಂಕರನೆಂಬ ನೀಚನಿರುವನು. ಅವನು ನನ್ನ ಮಗಳ ಮೇಲೆ ಅತ್ಯಾಚಾರ ಮಾಡಲು ಸಿದ್ಧನಾಗಿರುವನು. ಈಗಳೇ ಅವನನ್ನು ದೂರ ವಾಗಿ ಕರೆದುಕೊಂಡು ಹೋಗಿ ಅವನ ತಲೆಯನ್ನು ಚೆಂಡಾಡಿ ಬಂದು ನನಗೆ ತಿಳಿಸಬೇಕು," ಎಂದು ಅಪ್ಪಣೆಮಾಡಲಾಗಿ, ಸೇವಕನು "ಅಪ್ಪಣೆಯಾದಂತೆ" ಎಂದು ಹೊರಟು ಬಂದು, "ಇದೇನಚ್ಚರಿ ! ನಮ್ಮ ಯಜಮಾನರು ಆರನ್ನು ಪ್ರಾಣಕ್ಕಿಂತಲೂ ಹೆಚ್ಚಾಗಿ ಪ್ರೀತಿಸುತ್ತಿದ್ದರೋ, ಅಂತಹವನನ್ನು ಕೊಂದು ಹಾಕುವುದಕ್ಕೆ ಅಪ್ಪಣೆ ಮಾಡಿರುವರು. ಇದಕ್ಕೆ ಕಾರಣವೇನಿರಬೇಕು ? ಒಂದು ವೇಳೆ ಸರಳಕುಮಾರಿಯನ್ನು ಗೌರೀಶಂಕರನೇ ಕದ್ದೊಯ್ದು ಗುಟ್ಟಾದ ಸ್ಥಳದಲ್ಲಿ ಇಟ್ಟಿರಬಹುದೇ ? ಹಾಗಿಲ್ಲದಿದ್ದರೆ, ನಮ್ಮ ಯಜಮಾನರ ದಂಡನೆಯು ಇಷ್ಟು ಕ್ರೂರವಾಗಿರಲು ಕಾರಣವೇನಿದ್ದೀತು ?" ಎಂದು ಚಿಂತಿಸುತ್ತಿರುವಲ್ಲಿಯೇ ಗೌರೀಶಂಕರನು ಬಂದುದನ್ನು ನೋಡಿ ಸೇವಕನು ಯಜಮಾನರ ಅಪ್ಪಣೆಯನ್ನು ಅವನಿಗೆ ತಿಳಿಯಪಡಿಸಿ ಅವನನ್ನು ಮನಬಂದಂತೆ ಹೀಯಾಳಿಸಿದನು. ಗೌರೀಶಂಕರನಿಗೆ ತುಂಬಾ ಅಪಮಾನವಾಯಿತು. ಈಯಪಮಾನವನ್ನು ಸಹಿಸಲಾರದೆ ಗೌರೀಶಂಕರನು ಯಜಮಾನನ ಬಳಿಗೆ ಬಂದು ಅಳುತ್ತಾ ನಿಂತುಕೊಂಡನು. ಯಜಮಾನನು ಅವನನ್ನು ಕಂಡೊಡನೆಯೇ ಕಿಡಿಕಿಡಿಯಾಗಿ,—"ಪಾಷಂಡ ! ವಿನಯನ ಮೇಲೆಯೇ ನಿನ್ನ ಅತ್ಯಾಚಾರ! ವಿನಯನು ಆರು? ಅವನು ನನ್ನ ಅಳಿಯನಲ್ಲವೇ ? ಸೇವಕನು ನನ್ನ ಅಪ್ಪಣೆಯಂತೆ ನಿನ್ನ ತಲೆಯನ್ನು ಇನ್ನೂ ಚೆಂಡಾಡಲಿಲ್ಲವೇತಕೆ ? ನೀಚ ! ಇನ್ನು ಇಲ್ಲಿ ನಿಲ್ಲದೆಯೇ ತೊಲಗಿಹೋಗು. ನೀನು ತಡಮಾಡುವುದಾದರೆ ನಿನ್ನನ್ನು ಇಲ್ಲಿಯೇ ಹೂತುಬಿಡುವೆನು," ಎಂದು ಹೇಳಿದ ಕಟೂಕ್ತಿಯನ್ನು ಕೇಳಿ ಗೌರೀಶಂಕರನು ಸದ್ದಿಲ್ಲದೆ ಹೊರಗೆ ಬಂದು "ದೊಡ್ಡವರ ವಿಶ್ವಾಸವು ಎಂದಿದ್ದರೂ ಪ್ರಾಣಕ್ಕೆ ಮೂಲವೇ ಸರಿ," ಎಂದುಕೊಂಡು ತನ್ನ ಪದಾರ್ಥಗಳೆಲ್ಲವನ್ನೂ ತೆಗೆದುಕೊಂಡು ಜೋಡೀದಾರನ ಮನೆಯನ್ನು ಒಂದೇ ತೀವೆಗೆ ತ್ಯಾಗಮಾಡಿ ಹೊರಟೇಹೋದನು.

ಬಳಿಕ ಸನ್ಯಾಸಿಯು ತನ್ನ ದೃಷ್ಟಿಯನ್ನು ಬೇರೊಂದು ಕಡೆಗೆ ತಿರುಗಿಸಿದನು. ಆ ಕೂಡಲೆ ಅಚ್ಯುತನಿಗೆ ಪೂರ್ವ ಸ್ಮರಣೆಯುಂಟಾಗಿ, "ಹ ದೈವವೇ ! ನಾನೆಂತಹ ಕೆಲಸವನ್ನು ಮಾಡಿದೆನು ! ಗೌರೀಶಂಕರ ! ನ

ಗೇನೂ ತಿಳಿಯದು. ನನ್ನಿಂದ ನಿನಗೆ ಹೇಗೆ ಅಪಮಾನವುಂಟಾಯಿತೋ
ಅದು ನನಗೆ ತಿಳಿಯದು. ನನ್ನಮೇಲೆ ನೀನು ಎಂದಿಗೂ ಕೋಪಮಾಡಬೇಡ.
ಮತ್ತೆ ಹಿಂತಿರುಗಿ ಬರುವನಾಗು," ಎಂದು ಬಾಯಿಂದ ಮಾತು ಹೊರಡುತ್ತಿ
ರುವಾಗ, ಸನ್ಯಾಸಿಯು ಅಚ್ಯುತನನ್ನು ನೋಡಿ ಗಂಭೀರ ಧ್ವನಿಯಿಂದ ಹೇಳಿ
ದನೇನೆಂದರೆ :—

"ಮಗು! ನೀನು ಮಾಡುವ ಕೆಲಸವು ನಿನಗೆ ಮಟ್ಟಿಗೆ ಚೆನ್ನಾಗಿ ಕಾಣ
ಬಹುದು. ದೇವರು ನಿನಗೆ ಶಕ್ತಿಕೊಟ್ಟಿರುವನೆಂದು, ನೀನು ಅದನ್ನು ದುರು
ಪಯೋಗಮಾಡುವುದಾದರೆ, ಅದರ ಪ್ರತಿಫಲವು ಎಲ್ಲಿಗೆ ಹೋಗಬೇಕು?
ನಿನಗೆ ಇಷ್ಟು ಸ್ವಾರ್ಥಪರತೆಯೆಂದರೇನು? ದುರ್ಬಲರಲ್ಲಿ ಬಲಪ್ರಯೋಗ
ವೆಂದರೇನು? ಇವೆರಡೂ ನಿನಗೆ ಸುಖದಾಯಕವೇ ಹೇಗೆ? ನಿನ್ನ ಈ ನಡ
ತೆಯು ತಕ್ಕುದಲ್ಲ ನೀನು ಮಾಡುತ್ತಿರುವ ಕೆಲಸವಾದರೋ ಸದ್ವಂಶದವ
ನಾದ ನಿನಗೆ ಎಂದೆಂದಿಗೂ ತಕ್ಕುದಲ್ಲ. ನಿನ್ನ ತಂದೆ ತಾತಂದಿರು ನಿನ್ನಂತೆ
ಯೇ ಜೋಡೀದಾರರಾಗಿದ್ದರು ಅವರು ಸತ್ತು ನಕ್ಷತ್ರಮಂಡಲದಲ್ಲಿದ್ದು
ಕೊಂಡು ಪ್ರಪಂಚವನ್ನು ಬೆಳಗುತ್ತಿರುವರು. ಅವರ ವಂಶದಲ್ಲಿ ನೀನೂ
ಹುಟ್ಟಿರುವೆ? ನೀನು ಹುಟ್ಟಿದುದು ಸಿಂಹದ ಹೊಟ್ಟೆಯಲ್ಲಿ ಹುಟ್ಟಿದ ನರಿಯ
ಹುಟ್ಟಿನಂತಾಯಿತು ನಿನ್ನ ನಡೆನುಡಿಗಳನ್ನು ನೋಡಿದರೆ, ನೀನು ನರಕದ
ಹುಳುವೇ ಸರಿ ಧನದೊಡನೆ ಮಾನವಿರಬೇಕು, ಗುಣವಿರಬೇಕು, ವಿವೇಕವಿ
ರಬೇಕು ನಿನಗಾದರೋ ಧನವಿದೆ, ಮತ್ತಾವುದೂ ಇಲ್ಲ. ನೀನು ಪ್ರತಿಕ್ಷಣ
ದಲ್ಲಿಯೂ ಇತರರ ವಿಷಯದಲ್ಲಿ ಎಣಿಸುತ್ತಿರುವ ಪ್ರತಿಯೊಂದು ಕಿಡುಕೂ
ನಿನ್ನ ಬುಡವನ್ನೇ ಮೇಯುತ್ತಿರುವುದು ಇದು ನಿನಗೆ ತಿಳಿಯದೇ ಹೋಯಿ
ತು ಇನ್ನು ಮೇಲಾದರೂ ಚಿರಾಂಧಕಾರದಿಂದ ತುಂಬಿಹೋಗಿರುವ ನಿನ್ನ
ಹೃದಯವನ್ನು ಜ್ಞಾನವೆಂಬ ದೀಪದಿಂದ ಬೆಳಕುಮಾಡು ಆ ಬೆಳಕೊಂದೆ
ನಿನಗೆ ಉತ್ತರೋತ್ತರದಲ್ಲಿ ಉತ್ತಾರಕವಾಗಿರುವುದು ಆ ಬೆಳಕನ್ನುಮಟ್ಟಿಗೆ
ಆರಿಹೋಗದಂತೆ ನೋಡಿಕೊಳ್ಳು. ನನ್ನ ಉಪದೇಶವನ್ನು ನೀನು ಆವ
ಕಾಲದಲ್ಲಿ ತಿರಸ್ಕರಿಸುವೆಯೋ, ಆಗಳೇ ನಿನಗೆ ವಿನಾಶವುಂಟಾಗಲಿ."

ಸನ್ಯಾಸಿಯು ಹೀಗೆ ಹೇಳಿದಕೂಡಲೆ ಎಲ್ಲಿಯೋ ಮಾಯವಾಗಿಬಿಟ್ಟನು

ಅಚ್ಯುತಾನಂತನು ಪಶ್ಚಾತ್ತಾಪಪೂರಿತನಾಗಿ ಹಾಸುಗೆಯ ಮೇಲೆ
ಹೋಗಿ ಮಲಗಿದನು. ಬೆಳಗಾಗುವುದರೊಳಗಾಗಿಯೇ ಅಚ್ಯುತನ ಹೃದಯ

ದಲ್ಲಿ ಪರಿವರ್ತನೆಯುಂಟಾಗಿ ರಾತ್ರಿಯು ಬೆಳಕಾದಂತೆ, ಆತನಲ್ಲಿ ಅಜ್ಞಾನಾಂಧಕಾರವು ತೊಲಗಿ ಜ್ಞಾನತೇಜಸ್ಸು ಪ್ರಕಾಶಿಸುತ್ತಿತ್ತು. ದುರ್ದಾಂತನಾದ ಅಚ್ಯುತಾನಂತ ಗೋವಿಂದಶರ್ಮನು ಇಂದು ಪ್ರಶಾಂತನಾದ ದಾಂತನಾದ ಜೋಡೀದಾರನಾಗಿ ಪರಿಣಮಿಸಿದನು. ಅಚ್ಯುತ ಮಹಾಶಯನು ತನ್ನ ಜನ್ಮದಲ್ಲಿ ಮೊದಲನೆಯ ಸಲ ಒಂದು ಅಪೂರ್ವವಾದ ನೂತನ ಪ್ರಭಾತವನ್ನು ನೋಡಿದನು. ಅದರ ಫಲವನ್ನು ನಮ್ಮ ಪ್ರಿಯ ಪಾಠಕಮಹಾಶಯರು ಕಥಾಸಂದರ್ಭದಲ್ಲಿ ತಿಳಿದುಕೊಳ್ಳುವರು.



# ಇಪ್ಪತ್ತೊಂದನೆಯ ಲಂಬಕ.



## ದೀಪ ನಿರ್ವಾಣ.

ಅರ್ಧರಾತ್ರವು ಕಳೆಯುತ್ತಾ ಬಂದಿರುವುದು. ಅಂತರಿಕ್ಷವು ಕಾರ್ಮುಗಿಲಿಂದ ಕವಿತುಕೊಂಡು ಮಳೆಯು ಜೊರೋ ಎಂದು ಸುರಿಯುತ್ತಿರುವುದು. ಅಂತರಿಕ್ಷವೇನಾದರೂ ಕಳಚಿ ಬಿದ್ದುಹೋಗುವುದೋ ಎಂದು ಎಲ್ಲರೂ ತಲ್ಲಣಿಸಲಾರಂಭಿಸಿದರು. ಬಲು ಹೊತ್ತು ಮಳೆ ಬಿದ್ದ ಮೇಲೆ ಬಿರುಗಾಳಿಯೆದ್ದಿತು. ಬಿರುಗಾಳಿಯ ಹಾವಳಿಯಿಂದ ನದಿಯ ನೀರೆಲ್ಲವೂ ದಡವನ್ನು ಮೀರಿ ನರ್ತನಮಾಡತೊಡಗಿತು. ಆ ಅವೇಳೆಯಲ್ಲಿ ನದಿಯ ಘೋರವಾದ ಶಬ್ದವನ್ನು ಕೇಳಿದವರೆಲ್ಲರಿಗೂ ಗರ್ಭನಿರ್ಭೇದವಾಗುತ್ತಿತ್ತು ಈ ಮಹಾ ವಿಪತ್ತಿನಲ್ಲಿ ಒಂದು ಸಣ್ಣ ಹಡಗು ಎಲ್ಲಿಂದಲೋ ತೇಲಿಕೊಂಡು ಬಂದು ದಡಕ್ಕೆ ಹೊಡೆಯಿತು. ನಾವಿಕರು ಅತಿ ಪ್ರಯಾಸದಿಂದ ಹಡಗನ್ನು ದಡದಲ್ಲಿ ಕಟ್ಟಿಹಾಕಿ ಚಳಿ ಗಾಳಿ ಮಳೆಗೆ ಹೆದರಿ ನಡುಗುತ್ತಾ ಹಡಗಿನೊಳಗೆ ಹೋಗಿ ಮುದುರಿ ಕುಳಿತುಕೊಂಡರು.

ಭೀಷಣವಾದ ಅಂಧಕಾರವು ಕ್ರಮಕ್ರಮವಾಗಿ ಭೀಷಣತರವಾಗಿ ಪರಿಣಮಿಸಿ, ಹಸಿವಿನಿಂದ ಪೀಡಿತವಾದ ಮೃತ್ಯುದೇವತೆಯು ಪ್ರಪಂಚವೆಲ್ಲವನ್ನೂ ಒಂದೇ ತಡವೆಗೆ ನುಂಗಿಬಿಡುವುದಕ್ಕಾಗಿ ತನ್ನ ಕರಾಳವಾದ ಬಾಯನ್ನು ತೆರೆದುಕೊಂಡಿರುವುದೋ ಎಂಬಂತೆ ಕಾರ್ಗತ್ತಲೆಯು ನೋಟಕರಿಗೆ ಭಯವನ್ನುಂಟುಮಾಡುತ್ತಿದ್ದಿತು. ಕ್ರೂರಾತ್ಮಳಾದ ಮೃತ್ಯುದೇವ

ತೆಯು ತನ್ನ ಕಾರ್ಯಸಾಧನೆಗಾಗಿ ಸಾಸಿರಾರು ಕೈಗಳಿಂದ ಬಳುಕುತ್ತಿರುವ ಕತ್ತಿಗಳನ್ನು ಹಿಡಿದುಕೊಂಡು ಪ್ರಾಣಿಗಳನ್ನು ಸಂಹರಿಸುವುದಕ್ಕೆ ಯತ್ನ ಮಾಡುತ್ತಿರುವಳೋ ಎಂಬಂತೆ ಮಿಂಚುವಳ್ಳಿಗಳು ಎಲ್ಲೆಲ್ಲಿಯೂ ಹೊಳೆಯುತಿದ್ದುವು. ಕೆಲವೆಡೆಗಳಲ್ಲಿ ಬಿರುಗಾಳಿಯು ತೀರದಲ್ಲಿದ್ದ ದೊಡ್ಡದೊಡ್ಡ ಮರಗಳನ್ನು ಬುಡದಿಂದ ಕಿತ್ತು ಬಿಸುಡುತ್ತಿದ್ದುವು, ಕೆಲಕೆಲವೆಡೆಗಳಲ್ಲಿ ಗಗನವನ್ನು ಮುಟ್ಟುವಂತಿದ್ದ ವೃಕ್ಷಗಳು ಸಿಡಲಿಗೆ ಸಿಕ್ಕಿ ಹೊತ್ತಿಕೊಂಡು ದಗೆದಗನೆ ಉರಿಯುತ್ತಿದ್ದುವು.

ಇಂತಹ ವಿಪತ್ತಿನ ಮಧ್ಯದಲ್ಲಿ ಸಣ್ಣದಾದ ಹಡಗಿಗೆ ಉಳಿಬಾಳೆಂದರೇನು? ಬಲವತ್ತರವಾದ ಬಿರುಗಾಳಿಯ ಹಾವಳಿಯನ್ನು ತಡೆಯಲಾರದೆ ಹಡಗು ಒಂದೇ ತಡವೆಗೆ ನೀರಿನಲ್ಲಿ ಮೊಗಚಿಕೊಂಡಿತು. ಹಡಗಿನಲ್ಲಿದ್ದವರು ನೀರಿನಲ್ಲಿ ಮುಳುಗಿ ಸಾಯುವುದಕ್ಕಿಂತಲೂ ದಡದ ಮೇಲೆ ಬಂದು ಸಾಯುವುದು ಲೇಸೆಂದು ತಿಳಿದು ಅತಿ ಪ್ರಯಾಸದಿಂದ ಈಸಿ ದಡಕ್ಕೆ ಬಂದು ಸೇರಿದರು. ದಡಕ್ಕೆ ಬಂದವರಲ್ಲಿ ಕೆಲವರು "ಪ್ರಾಣವಿದ್ದರೆ ಇರಲಿ, ಹೋದರೆ ಹೋಗಲಿ, ಮಾಡಬಹುದಾದ ಪ್ರಯತ್ನವೆಲ್ಲವನ್ನೂ ಮಾಡಿ ನೋಡುವ," ಎಂದು ತಮತಮಗೆ ತೋರಿಬಂದ ಸ್ಥಳಕ್ಕೆ ಓಡಿದರು. ಹೀಗೆ ಓಡಿಹೋಗುತ್ತಿದ್ದವರಲ್ಲಿ ಒಬ್ಬನು ಹತ್ತಿರದಲ್ಲಿ ಒಂದು ಸಣ್ಣ ದೀಪವನ್ನು ಕಂಡು ಅಲ್ಲಿ ಆರೋ ಜನರಿರಬಹುದೆಂಬ ಭರವಸೆಯಿಂದ ಅಲ್ಲಿಗೆ ಬಂದು ಸೇರಿದನು. ಆತನು ಕೊಂಚವೂ ತಡಮಾಡದೆ ಮನೆಯ ಬಾಗಿಲನ್ನು ತಟ್ಟಿ, "ಒಳಗೆ ಆರಿದ್ದರೂ ಸರಿ, ಬಾಗಿಲನ್ನು ತೆರೆಯಬೇಕು," ಎಂದು ಬೆಸಸುಯ್ದನು. ಆ ಮನೆಯಾದರೋ ಅಪರಿಚಿತೆಯದಾಗಿದ್ದಿತು. ಅದೇ ಸ್ಥಳದಲ್ಲಿಯೇ ಸರಳಕುಮಾರಿಯೂ ಆಶ್ರಯವನ್ನು ಹೊದ್ದಿ ತನ್ನ ಪ್ರಾಣವನ್ನು ರಕ್ಷಿಸಿಕೊಳ್ಳುತಿದ್ದಳು.

ಆಗಂತುಕನು ಆ ಕುಟೀರದ ಬಾಗಲಿಗೆ ಬಂದು ನಡುಗುತ್ತಾ "ನನಗೆ ಪ್ರಾಣಹೋಗುತ್ತಿರುವುದು, ಬಾಗಿಲನ್ನು ತೆರೆದು ನನ್ನನ್ನು ಕಾಪಿಡಿರಿ. ಒಳಗೆ ಆರಿದ್ದರೂ ಸರಿ, ಈಗ ಯುಕ್ತಾಯುಕ್ತವನ್ನು ವಿವೇಚಿಸುವುದಕ್ಕೆ ಕಾಲವಲ್ಲ. ಬೇಗನೆ ಬಾಗಿಲ ತೆರೆಯಿರಿ," ಎಂದು ಗಟ್ಟಿಯಾಗಿ ಕೂಗಿಕೊಂಡನು. ಆಗ ಮನೆಯೊಳಗೆ ಇಬ್ಬರು ಹೆಂಗುಸರು ಹಾಸುಗೆಯ ಮೇಲೆ ಮಲಗಿಕೊಂಡು ಆವಾವುದೋ ಮಾತುಗಳನ್ನಾಡಿಕೊಳ್ಳುತಿದ್ದರು. ಅಪರಿಚಿತೆಯು

ಈ ಆರ್ತನಾದವನ್ನು ಕೇಳಿ ದಡಬಡನೆ ಎದ್ದು ಬಂದು ಬಾಗಿಲನ್ನು ತೆರೆದಳು. ಬಾಗಿಲು ತೆರೆದೊಡನೆಯೇ ಹೊರಗಣ ಶೀತದ ಗಾಳಿಯು ಮನೆಯೊಳಗೆ ನುಗ್ಗಿ ಮಿಣಕು ಹುಳದಂತೆ ಮಿನುಗುತ್ತಿದ್ದ ದೀಪವು ನಿರ್ವಾಣವನ್ನು ಹೊದ್ದಿತು.

ಅಪರಿಚಿತೆಯು ದೀವಿಗೆಯನ್ನು ಕಚ್ಚಿಸುವುದಕ್ಕೆ ಏನೇನೋ ಯತ್ನ ಮಾಡಿದಳು. ಎಲ್ಲೆಲ್ಲಿಯೂ ನೀರು ತುಂಬಿದ್ದುದರಿಂದ, ದೀಪವನ್ನು ಕಚ್ಚಿಸುವುದಕ್ಕೆ ಅನುಕೂಲಿಸದೇ ಹೋಯಿತು. ಅಪರಿಚಿತೆಯು ಇಂದಿನ ಬೆಳಗ್ಗೆ ಆರ ಮುಖವನ್ನು ನಾನು ನೋಡಿದೆನೋ, ಮನೆಗೆ ಬಂದ ಅತಿಥಿಯನ್ನು ಸತ್ಕರಿಸುವುದಕ್ಕೆ ಒಂದು ದೀಪ ಕೂಡ ಇಲ್ಲದ ಹಾಗಾಯಿತು. ನನ್ನ ಪ್ರಾಚೀನ ಕರ್ಮವನ್ನು ಕುರಿತು ಎಷ್ಟೆಂದು ನಿಂದಿಸಲಿ?" ಎಂದು ಹೇಳಿಕೊಳ್ಳುತಿದ್ದುದನ್ನು ಆಗಂತುಕನು ಕೇಳಿ,—"ತಾಯೆ! ನನಗೆ ನೀವು ಎಲ್ಲಾ ವಿಷಯದಲ್ಲಿಯೂ ಸತ್ಕಾರಮಾಡಿದಂತೆಯೇ ಸರಿ. ನನಗೆ ಒಂದು ಒಣಗಿದ ಬಟ್ಟೆಯನ್ನು ಕೊಟ್ಟು ಕಾಪಿಟ್ಟರೆ ನಿಮಗೆ ಅನಂತಾನಂತ ಲೋಕವುಂಟು. ನನಗೆ ಈಗ ಊಟ ಗೀಟ ಏನೂ ಬೇಕಾಗಿಲ್ಲ," ಎಂದನು. ಅಪರಿಚಿತೆಯು ಆ ಕೂಡಲೆ ಒಣಗಿದ ಬಟ್ಟೆಯನ್ನೂ ಹಾಸುಗೆಯೊಂದನ್ನೂ ತಂದುಕೊಟ್ಟಳು. ಆಗಂತುಕನು ಬಲು ಸಂತೋಷಪಟ್ಟವನಾಗಿ ಒಂದುಕಡ ಮಲಗಿಕೊಂಡನು. ಅಪರಿಚಿತೆಯು ಮನೆಯ ಒಳಬಾಗಿಲನ್ನು ಹಾಕಿಕೊಂಡು ಬಂದು ಸರಳ ಕುಮಾರಿಯ ಪಕ್ಕದಲ್ಲಿ ಮಲಗಿ,—"ನಾನೇನ ಹೇಳುತ್ತಿದ್ದೆ?" ಎಂದು ಕೇಳಿದಳು.

ಸರಳೆ—ಹೆಂಗುಸರಿಗೆ ಸ್ವಂತವಾಗಿ ಮಾಡತಕ್ಕ ಆವ ಕೆಲಸವೂ ಇರುವುದಿಲ್ಲವೆಂದು ಹೇಳುತ್ತಿದ್ದಿರಿ

ಅಪರಿಚಿತೆ—ಸರಿಸರಿ! ಹೆಂಗುಸಾದವಳು ತನ್ನ ಸ್ವಂತಕ್ಕಾಗಿ ಆವ ಕೆಲಸ ಮಾಡುವಳೋ, ಅದು ನಿಷ್ಫಲವಾಗುವುದಲ್ಲದೆ, ಅವಳೂ ಪಾಪಿಷ್ಠೆಯಾಗುವಳು. ಊಟ ಉಪಚಾರ, ಹಣ ಕಾಸು, ಉಡುಗೆ ತೊಡುಗೆ, ಮಕ್ಕಳು ಮರಿಗಳು ಇವೇ ಮೊದಲಾದ ಹೆಂಗುಸಿನ ಸಂಪತ್ತೆಲ್ಲವೂ ಗಂಡನದಾಗಿಯೇ ಇರುವುದು. ಅನೇಕ ದಿನಗಳು ಯಜ್ಞಯಾಗಾದಿಗಳನ್ನು ಮಾಡಿ ಅದರ ಫಲವನ್ನು ಶ್ರೀಕೃಷ್ಣಪರಮಾತ್ಮನಿಗೆ ಅರ್ಪಣ ಮಾಡದೇ ಹೋದಲ್ಲಿ ಎಲ್ಲವೂ ಹೇಗೆ ನಿಷ್ಫಲವಾಗುವುದೋ, ಹಾಗೆಯೇ ಹೆಂಗುಸಾದವಳು ತನಗೆ

ಬೇಕುಬೇಕಾದ ಕೆಲಸಮಾಡಿ ಗಂಡನ ಪಾದಮೂಲದಲ್ಲಿ ಸಮರ್ಪಣ ಮಾಡ ದಿದ್ದಲ್ಲಿ ಅಂತಹವಳು ಮಾಡಿದುದೆಲ್ಲವೂ ಬೂದಿಯಲ್ಲಿ ಹೋಮಮಾಡಿದಂ ತಾಗುವುದು. ಇದೀಗ ಧರ್ಮದ ಮರ್ಮವು. ಆವ ಹೆಂಗುಸು ಒಡವೆ ವಸ್ತು ಗಳಿಗಾಗಲಿ, ಬಟ್ಟೆ ಬರೆಗಾಗಲಿ, ಊಟ ನೋಟಗಳಿಗಾಗಲಿ ಗಂಡನನ್ನು ತೊಂದರೆಪಡಿಸಿ ಅವನನ್ನು ಮೂತಿ ಮೂತಿ ತಿವಿದು ಸ್ವಸುಖಕ್ಕಾಗಿ ಕೆಲಸ ಮಾಡುವಳೋ ಅಂಥವಳು ಶಾಸ್ತ್ರದಲ್ಲಿ ಅಸತಿಯೆಂದೂ, ಮಾರಿಯೆಂದೂ, ಪತಿವ್ರತೆಯಲ್ಲವೆಂದೂ, ದುರ್ಭಗಳೆಂದೂ ಪರಿಗಣಿತೆಯಾಗಿರುವಳು. ಅಂಥ ವಳಿಗೆ ಇಹಪರಗಳಲ್ಲಿ ಗತಿಯಿಲ್ಲ. ಪತಿಯು ಬಡವನೋ ಭಾಗ್ಯವಂತನೋ ಅದನ್ನು ಲೆಕ್ಕಿಸದೆ, ಆವ ಹೆಂಗುಸು ದೇವರು ಕೊಟ್ಟುದರಲ್ಲಿ ತೃಪ್ತಿಪಟ್ಟು ಕೊಂಡೂ, ಆವ ತೆರನಾಗಿ ಗಂಡನಿಗೆ ಸುಖವುಂಟಾಗುವುದೋ, ಆವುದ ರಿಂದ ಗಂಡನಿಗೆ ತೊಂದರೆಯುಂಟಾಗಲಾರದೋ ಅಂತಹ ಕೆಲಸವನ್ನು ಮಾಡಿಕೊಂಡೂ ಗಂಡನಲ್ಲಿ ಭಕ್ತಿವಿಶ್ವಾಸಗಳಿಂದ ತಗ್ಗಿ ನಡೆದುಕೊಳ್ಳು ವಳೋ ಅಂಥವಳೇ ಮನೆಗೆ ಸೌಭಾಗ್ಯಲಕ್ಷ್ಮಿ, ಅಂಥವಳೇ ಪತಿವ್ರತಾ ಶಿರೋಮಣಿ, ಅಂಥವಳೇ ಸರ್ವಮಂಗಳ ಸ್ವರೂಪಿಣಿಯಾದ ಹೃದಯಾಧಿ ದೇವತೆ. ಅಂಥವಳ ದರ್ಶನದಿಂದ ಸಮಸ್ತ ಪಾಪವೂ ಪರಿಹಾರವಾಗಿ ಪುಣ್ಯವು ಕೈಸೇರುವುದು

ಸರಳೆ—ಹೆಂಗುಸಿಗೆ ಪಾಪಪುಣ್ಯಗಳಿಲ್ಲವೇ ?

ಅಪರಿ—ಪತಿಯ ಇಷ್ಟಕ್ಕೆ ಅನುಸಾರವಾಗಿ ನಡೆವುದೇ ಹೆಂಗುಸಿಗೆ ಪುಣ್ಯವು; ಆತನ ಇಷ್ಟಕ್ಕೆ ವಿರೋಧವಾಗಿ ನಡೆವುದೇ ಪಾಪವು ಸ್ವಾರ್ಥತೆ ಯಿಂದ ಮಾಡಿದ ಕೆಲಸವೆಲ್ಲವೂ ಹಾಳು ಸ್ವಾರ್ಥತ್ಯಾಗದಿಂದ ಮಾಡಿದ ಕೆಲಸವೆಲ್ಲವೂ ಇಹಪರಗಳಲ್ಲಿಯೂ ಗತಿಪ್ರದವು ಸ್ತ್ರೀಯು ಸ್ವತಂತ್ರೆಯಲ್ಲ. ಆದುದರಿಂದ ಆಕೆಯು ಆತನ ಅಧೀನದಲ್ಲಿಯೇ ಇದ್ದುಕೊಂಡು ಆತನಿಗೆ ಅವಿ ರೋಧವಾಗಿ ಮಾಡಿದ ಕೆಲಸವೇ ಫಲಿಸುವುದು. ಲೋಕದಲ್ಲಿ ಬಲುಮಂದಿ ನೀಚರಾದ ಹೆಂಗುಸರು ತಮ್ಮ ಮನಬಂದಂತೆ ಕೆಲಸ ಮಾಡುವುದನ್ನು ನಾನು ನೋಡಿರುವೆನು. ಅಂಥವರು ಪತಿವ್ರತೆಯರೆನಿಸಲಿಕ್ಕಿಲ್ಲ. ಅವರ ಸುದ್ದಿಯೂ ನಮಗೆ ಹಾನಿಯನ್ನುಂಟುಮಾಡದಿರದು.

ಈ ರೀತಿಯಾಗಿ ಹೆಂಗುಸರಿಬ್ಬರೂ ಒಳಗೆ ಮಲಗಿಕೊಂಡು ಮಾತನಾ ಡುತಿದ್ದುದನ್ನು ಆಗಂತುಕನು ಹೊರಗಡೆಯಿಂದಲೇ ಕೇಳುತ್ತಿದ್ದನು. ಅವ

ನಿಗೆ ಹುಡುಗಿಯ ಕಂಠಸ್ವರವು ಹಿಂದೆ ಕೇಳಿದ್ದ ಹಾಗೆ ತಿಳಿದುಬಂದು ಆಕೆ ಆರಿರಬಹುದೆಂದು ಆಲೋಚಿಸತೊಡಗಿದನು. ಅವುದೂ ಮನಸ್ಸಿಗೆ ಸರಿಯಾಗಿ ಗೋಚರಿಸದಿರಲು, ಆಗಂತುಕನು ಅಪರಿಚಿತೆಯನ್ನು ಕುರಿತು,—"ತಾಯೆ ! ಒಂದು ವೇಳೆ ಪಾಪ ಮಾಡಿದರೆ, ಅಂತಹ ಪಾಪಕ್ಕೆ ಪ್ರಾಯಶ್ಚಿತ್ತವೇನಾದರೂ ಇರುವುದಾದರೆ ತಿಳಿಸಬೇಕು," ಎಂದು ವಿನಯದಿಂದ ಬೇಡಿದನು.

ಸರಳೆಯು ಈ ಮಾತನ್ನು ಕೇಳಿದಳು. ಕೇಳಿದ ಕೂಡಲೆಯೇ ಅವಳ ಹೃದಯವು ನಡುಗಿತು ಇದರ ಕಾರಣ ಮಟ್ಟಿಗೆ ಅವಳಿಗೆ ತಿಳಿಯದೇ ಹೋಗಿ ಸುಮ್ಮನಾಗಿಬಿಟ್ಟಳು ಅಪರಿಚಿತೆಯು ಆಗಂತುಕನನ್ನು ಕುರಿತು,- "ಮಹಾಶಯಾ! ಅನುತಾಪ, ಪಾಪಕಾರ್ಯದಿಂದ ನಿವೃತ್ತಿ, ಪುಣ್ಯಕಾರ್ಯದಲ್ಲಿ ಪ್ರವೃತ್ತಿ, ಈಶ್ವರೋಪಾಸನೆ ಇವೇ ಅದಕ್ಕೆ ನಿವಾರಣೋಪಾಯವು," ಎಂದು ಹೇಳಿದುದನ್ನು ಕೇಳಿ, ಆಗಂತುಕನು ತನ್ನಲ್ಲಿ ತಾನೇ, "ಅನುತಾಪ, ಪಾಪದಿಂದ ನಿವೃತ್ತಿ, ಪುಣ್ಯದಲ್ಲಿ ಪ್ರವೃತ್ತಿ, ಈಶ್ವರೋಪಾಸನೆ," ಎಂದು ಧ್ಯಾನಿಸುತ್ತಾ ಮಲಗಿದನು

ಈ ಮಾತು ನಡೆದ ಮೇಲೆ ಆರೂ ಮಾತನಾಡಲಿಲ್ಲ. ಎಲ್ಲರೂ ನಿದ್ರೆಗೆ ಪರವಶರಾಗಿ ಮಲಗಿದರು.



# ಇಪ್ಪತ್ತೆರಡನೆಯ ಲಂಬಕ.



## ಕಂಠಾಭರಣಂ.

ಬೆಳಗಿನ ಜಾವದಲ್ಲಿ ಅಪರಿಚಿತೆಯು ಎದ್ದು ಹೊರಗೆ ಬಂದು ನೋಡಿದಳು. ಆಗಂತುಕನು ಅಲ್ಲಿರದೆ, ಹಾಸುಗೆಯು ಮಟ್ಟಿಗೆ ಅಲ್ಲಿ ಬಿದ್ದಿದ್ದಿತು. ಅಪರಿಚಿತೆಯು ಬಲು ವ್ಯಸನಪಟ್ಟುಕೊಂಡು, "ರಾತ್ರಿ ಬಂದ ಅತಿಥಿಗೆ ಉಪಚರಿಸಲು ರಾತ್ರಿಯಲ್ಲಿ ಅನುಕೂಲಿಸಲಿಲ್ಲ. ಈಗಳಾದರೂ ಆತನಿಗೆ ಭೋಜನವನ್ನಾದರೂ ಮಾಡಿಸಿ ಕಳುಹಿಸಬೇಕೆಂದಿದ್ದೆನು. ಅಷ್ಟರೊಳಗಾಗಿಯೇ ಆತನು ಎಲ್ಲಿಯೋ ಮಾಯವಾಗಿಬಿಟ್ಟನು. ನಾನು ಎಂತಹ ಪಾಪಿಯುಸಿಯಾಗಿರಬೇಕು," ಎಂದು ಚಿಂತಿಸುತ್ತಾ ಮನೆಯ ಸಮೀಪದಲ್ಲಿ ಆತನನ್ನು

ಹುಡುಕಿ ಹುಡುಕಿ ಸಾಕಾಗಿ ತನ್ನ ಮನೆಯ ಕೆಲಸದಲ್ಲಿ ತೊಡಗಿದಳು. ಸರಳೆಯೂ ಆಕೆಯೊಡನೆ ಕೆಲಸಮಾಡುವುದಕ್ಕೆ ನಿಂತಳು.

ಕೊಂಚ ಹೊತ್ತಿನಲ್ಲಿ ಚೆನ್ನಾಗಿ ಬೆಳಗಾಯಿತು. ಪ್ರಕೃತಿ ದೇವಿಯು ತನ್ನ ಕರಾಳರೂಪವನ್ನು ತೆಗೆದುಹಾಕಿ ಶಾಂತಭಾವವನ್ನು ತಾಳಿದ್ದಳು. ಸೂರ್ಯನು ತನ್ನ ಸಹಸ್ರ ಕಿರಣಗಳನ್ನೂ ತಡೆಯಿಲ್ಲದೆ ಪ್ರಪಂಚದಮೇಲೆ ಬೀರಿದನು. ಜನಗಳೆಲ್ಲರೂ ಆನಂದದಿಂದ ತಮ್ಮ ತಮ್ಮ ಕೆಲಸಗಳ ಮೇಲೆ ತೆರಳಿದರು. ಇಷ್ಟು ಹೊತ್ತಿಗೆ ದೊಡ್ಡಮನುಷ್ಯನೊಬ್ಬನು ಆ ಕುಟೀರದ ಬಾಗಿಲಲ್ಲಿ ಬಂದು ನಿಂತು ಅಪರಿಚಿತೆಯನ್ನು ಕಂಡು,—"ತಾಯೆ ! ರಾತ್ರಿಯಲ್ಲಿ ನನ್ನ ಹಡಗು ನದಿಯಲ್ಲಿ ಮುಳುಗಿಹೋಯಿತು. ನಾವಿಕರೆಲ್ಲರೂ ದಿಕ್ಕುದಿಕ್ಕಿಗೆ ಚೆದರಿಹೋದರು. ಅವರ ಗತಿ ಏನಾಗಿರುವುದೆಂದು ತಿಳಿಯುವುದಕ್ಕಾಗಿ ನಾನು ಅಷ್ಟು ಬೇಗನೆ ಹೊರಟುಹೋಗಬೇಕಾಯಿತು. ಇದನ್ನು ನಿಮಗೆ ತಿಳಿಸುವುದಕ್ಕಾಗಿಯೇ ನಾನೀಗ ಇಲ್ಲಿಗೆ ಬಂದುದು," ಎನಲಾಗಿ, ಅಪರಿಚಿತೆಯು ರಾತ್ರಿಯಲ್ಲಿ ಬಂದಿದ್ದವರು ಇವರೇ ಇರಬಹುದೆಂದು ತಿಳಿದು, "ಮಹಾಶಯ! ಎಲ್ಲರೂ ಕ್ಷೇಮವಷ್ಟೇ ?" ಎಂದಳು

ಆಗಂತುಕ—ಎಲ್ಲರೂ ಕ್ಷೇಮದಿಂದಿರುವರು. ನಾವಿಕರು ಮುಳುಗಿಹೋಗಿದ್ದ ಹಡಗನ್ನೂ ಮೇಲಕ್ಕೆ ಎತ್ತಿರುವರು. ಇನ್ನು ನಾನು ತೆರಳುವೆನು. ರಾತ್ರಿಯಲ್ಲಿ ನೀವು ಮಾಡಿದ ಉಪಕಾರಕ್ಕೆ ನಾನು ಎಂದೆಂದಿಗೂ ಋಣಿಯಾಗಿರುವೆನು.

ಅಪರಿ—ನೀವು ಈಗ ಹೊರಡಕೂಡದು ರಾತ್ರಿಯಲ್ಲಿಯೂ ನೀವು ನನ್ನ ಆತಿಥ್ಯವನ್ನು ಸ್ವೀಕರಿಸಲಿಲ್ಲ. ಈಗಲೂ ಊಟಮಾಡದೆಯೇ ಹೊರಡಕೂಡದು. ಬ್ರಹ್ಮಚಾರಿಣಿಯ ಆತಿಥ್ಯವನ್ನು ಸ್ವೀಕರಿಸಿ ನೀವು ತೆರಳುವುದಾದರೆ, ನೀವೇ ಹಿಂದೆ ಒಪ್ಪಿಕೊಂಡಿರುವ ಋಣದಿಂದ ಮುಕ್ತರಾಗುವಿರಿ.

ಆಗಂತುಕ—ನಾನು ಒಂದು ಕ್ಷಣವೂ ಇಲ್ಲಿರುವುದಕ್ಕಾಗಲಾರದು. ನನ್ನ ಕೆಲಸವಾದರೋ ಗುರುತರವಾಗಿರುವುದು. ನಾನು ಸಂಸಾರ ಭಾರವನ್ನು ಹೆಂಗುಸರ ಮೇಲೆ ಹೊರಿಸಿ ಮನೆಯನ್ನು ಬಿಟ್ಟು ತುಂಬಾ ದಿನಗಳಾದುವು. ಅಲ್ಲಿ ಅವರ ಗತಿಯೇನಾಗಿರುವುದೋ ಅದು ತಿಳಿಯುವ ವರೆಗೂ ನನ್ನ ಮನಸ್ಸಿಗೆ ಶಾಂತಿಯಿಲ್ಲ.

ಆಗಂತುಕನು ಈ ಮಾತನ್ನು ಆಡುತ್ತಿದ್ದಾಗ, ಸರಳೆಯು ನದಿಯಲ್ಲಿ ಸ್ನಾನಮಾಡುವುದಕ್ಕೆ ಹೋಗಿದ್ದವಳು, ತಲೆಯ ಮೇಲೆ ನೀರಿನ ಗಡಿಗೆ

ಂದನ್ನು ಹೊತ್ತುಕೊಂಡು ಮನೆಯ ಕಡೆಗೆ ಬರುತ್ತಿದ್ದಳು. ಅವಳು ಂತುಕನನ್ನು ನೋಡಿದೊಡನೆಯೇ ನೀರಿನ ಗಡಿಗೆಯನ್ನು ದೂರ ಬಿಸುಟು ಂತಳುತೆ ಆಗಂತುಕನ ಕಾಲುಗಳ ಮೇಲೆ ಬಿದ್ದು,—"ಅಪ್ಪ ! ನೀನಾ ಗೆ ಇಲ್ಲಿಗೆ ಬಂದುದು? ಎಂದಳು.

ಆಗಂತುಕನೇ ನಮ್ಮ ಜೋಡೀದಾರನಾದ ಅಚ್ಯುತಾನಂತ ಗೋವಿಂದ ರ್ಣನೆಂದು ತಿಳಿಸಬೇಕಾದುದೇನೂ ಇರಲಾರದು. ಅಚ್ಯುತನು ಮಗಳನ್ನು ೀಡಿದ ಕೂಡಲೆ ಆನಂದದಿಂದ ಕಣ್ಣೀರ ಸುರಿಸುತ್ತಾ,—"ಮಗು ಸರಳೆ! ಲ್ಲಿರುವೆಯಾ ? ನಾನು ನಿನಗೆ ಎಂತಹ ಕಷ್ಟಗಳನ್ನು ಕೊಟ್ಟೆನಮ್ಮಾ! , ಮನೆಗೆ ಹೋಗೋಣ. ನಿನ್ನ ವಿನಯನು ಸುಖದಿಂದಿರುವನು ನಿನ್ನ ಕರೆದುಕೊಂಡು ಹೋಗಿ ವಿನಯನ ತೊಡೆಯ ಮೇಲೆ ಕುಳ್ಳಿರಿಸುವನು. ಗೆ ಈ ವಯಸ್ಸಿನಲ್ಲಿ ತಾಪಸಿಯ ವೇಷವೆಂದರೇನಮ್ಮಾ? " ಎಂದು ಮಾತ ಡಿಸಿದನು.

ಅಪರಿಚಿತೆಯು ಇದರ ಮರ್ಮವನ್ನು ಅರಿತವಳಾಗಿ,— " ಮಹಾ ು ! ಅಮೂಲ್ಯವಾದದೊಂದು ಕಂಠಾಭರಣವನ್ನು ಧರಿಸಬೇಕೆಂದು ಈ ತವನ್ನು ಕೈಕೊಂಡಿರುವಳು ಎಲ್ಲಾ ಹೆಂಗುಸರೂ ತಮ್ಮ ಜನ್ಮದಲ್ಲಿ ದುಸಲವಾದರೂ ಈ ವ್ರತವನ್ನು ಅವಲಂಬಿಸಲೇ ಬೇಕು," ಎಂದಳು

ಅಚ್ಯುತ—(ಗದ್ಗದ ಸ್ವರದಿಂದ; ಮನುಷ್ಯಮಾತ್ರದವನು ಚಿಂತಿಸುವುದೇ ದು, ದೈವ ಲೀಲೆಯೇ ಒಂದುವಿಧವಾಗಿರುವುದು ಸರಳೆಗೆ ಸಂಸಾರದಲ್ಲಿ ದ್ಧಿಗಲಿಸುವುದಕ್ಕಾಗಿಯೇ ನನಗೆ ಇಷ್ಟು ದುರ್ಬುದ್ಧಿಯುಂಟಾಯಿತು. ಮ್ಮ ಮಗು ತಾಪಸಿ ! ನಡೆ, ಮನೆಗೆ ಹೋಗುವ. ನಾನು ನಿನಗೆ ನುವ ದ ಬೆಲೆಯುಳ್ಳ ಕಂಠಾಭರಣವನ್ನು ತಂದು ಕೊಡುವೆನು, ಬಳಿಕ ನಿನ್ನ ನೋರಥವೆಲ್ಲವನ್ನೂ ನೆರವೇರಿಸುವೆನು.

ಅಪರಿಚಿತೆಯು ಅಚ್ಯುತಮಹಾಶಯನನ್ನು ನೋಡಿ,—"ನನ್ನ ಕಂಠಾ ಣವಾದರೋ ನೀವು ತಂದು ಕೊಡುವನೆಂದು ಹೇಳಿದ ಬಂಗಾರದ ಒಡ ಮಲ್ಲ, ಮದುವೆಯ ಕಾಲದಲ್ಲಿ ಗಂಡನು ಹೆಣ್ಣಿನ ಕುತ್ತಿಗಯಲ್ಲಿ ಕಟ್ಟ ದಾರವು ಮೊದಲೇ ಅಲ್ಲ. ಪಾತಿವ್ರತ್ಯವೆಂಬ ಕಂಠಾಭರಣವು ಆವ ಲದಲ್ಲಿಯೂ ಹೆಂಗುಸರ ಕುತ್ತಿಗೆಯಲ್ಲಿ ಶೋಭಿಸುತ್ತಿರಬೇಕು. ಅದು ದು ಕಿತ್ತುಹೋಗುವುದೋ, ಅಂದು ಹೆಂಗುಸು ಪತಿತೆಯಾಗುವಳು.

ಮಗು, ಸರಳಕುಮಾರಿ ! ಇತ್ತ ಬಾ. ನಿನಗೆ ಮಂಗಳಾಶೀರ್ವಾದವನ್ನು ಮಾಡುವೆನು. ನೀನು ಆವಾಗಲೂ ಈ ಬ್ರಹ್ಮಚಾರಿಣಿಯಿಂದ ಆಶೀರ್ವದಿಸಿ ಕೊಡಲ್ಪಟ್ಟ ಕಂಠಾಭರಣವನ್ನು ನಿನ್ನ ಕುತ್ತಿಗೆಯಲ್ಲಿ ರಕ್ಷಿಸುತ್ತಾ ಉಭಯ ಕುಲವನ್ನೂ ಪವಿತ್ರವನ್ನಾಗಿ ಮಾಡಿ ಸುಖದಿಂದ ಬಾಳು. ಪರಮಾತ್ಮನು ನಿನಗೂ ನಿನ್ನ ಪತಿಗೂ ದೀರ್ಘಾಯುರಾರೋಗ್ಯೈಶ್ವರ್ಯಾಭಿವೃದ್ಧಿಯನ್ನುಂಟುಮಾಡಲಿ," ಎಂದು ಹರಸಿ ಸರಳಕುಮಾರಿಯನ್ನು ಅಪ್ಪಿಕೊಂಡಳು. ಅಚ್ಯುತನು ಇದನ್ನು ಕೇಳಿ ಕಣ್ಣುಗಳಿಂದ ಆನಂದಾಶ್ರುವನ್ನು ಸುರಿಸುತ್ತಾ ಕುಳಿತುಬಿಟ್ಟನು ಅಪರಿಚಿತೆಯು ಬೇಗಬೇಗನೆ ಮನೆಯ ಕೆಲಸಗಳನ್ನು ತೀರಿಸಿ ಎಲ್ಲರಿಗೂ ಭೋಜನಕ್ಕೆ ಸಿದ್ಧಪಡಿಸಿದಳು. ಎಲ್ಲರೂ ಆನಂದದಿಂದ ಭೋಜನಮಾಡಿದರು. ಸಂಧ್ಯಾಕಾಲದಲ್ಲಿ ಅಚ್ಯುತನು ಅಪರಿಚಿತೆಯ ಅಪ್ಪಣೆಯನ್ನು ಪಡೆದುಕೊಂಡು ಸರಳಕುಮಾರಿಯೊಡನೆ ಹಡಗನ್ನೇರಿ ಎರಡು ಮೂರು ದಿನಗಳೊಳಗಾಗಿ ತನ್ನ ಗ್ರಾಮಕ್ಕೆ ಬಂದು ಸೇರಿದನು ಗ್ರಾಮದವರೆಲ್ಲರೂ ತಪ್ಪಿಸಿಕೊಂಡಿದ್ದ ಸರಳೆಯು ಸಿಕ್ಕಿದುದಕ್ಕಾಗಿ, ಪರಮಾನಂದಭರಿತರಾದರು. ಅಚ್ಯುತನು ತಾನೇ ರಾಮವಾಡಿಗೆ ಹೋಗಿ ವಿನಯನನ್ನು ಕರೆದುಕೊಂಡು ಬಂದು ಒಂದು ಶುಭಮುಹೂರ್ತದಲ್ಲಿ ಸರಳೆಯನ್ನು ವಿನಯನಿಗೆ ಕೊಟ್ಟು ವಿವಾಹಮಹೋತ್ಸವವನ್ನು ಅತಿ ವಿಜೃಂಭಣೆಯಿಂದ ನಡೆಯಿಸಿದನು.

ಮದುವೆಯಾದ ಕೆಲವು ದಿನಗಳಲ್ಲಿಯೇ ಸರಳಕುಮಾರಿಯು ತನ್ನ ಗಂಡನಾದ ವಿನಯಕುಮಾರನ ಮನೆಗೆ ಬಂದಳು ಬಹುಕಾಲದ ವರೆಗೂ ವಿರಹವನ್ನು ಅನುಭವಿಸಿ ಪಡಬಾರದ ಸಂಕಟಗಳಿಗೀಡಾದ ಬಳಿಕ, ವಿನಯಕುಮಾರನೂ ಸರಳಕುಮಾರಿಯೂ ಇಂದು ಒಂದೆಡೆಯಲ್ಲಿ ಸೇರಿರುವರು. ಇದರಿಂದ ಅವರವರ ಸಂತೋಷವೆಂತಹದೋ ಅದನ್ನು ನಮ್ಮ ಸಾಮಾನ್ಯವಾದ ಲೇಖನದಿಂದ ವರ್ಣನೆಮಾಡಲು ಸಾಧ್ಯವಲ್ಲ. ವಿನಯನಿಗೆ ಎರಡನೆಯ ವಿವಾಹವಾಗುವುದಕ್ಕೆ ಮೊದಲು ತರಳಕುಮಾರಿಗೆ ಪುತ್ರಸಂತಾನವಾಗಿದ್ದಿತು. ಸರಳೆಯು ಆ ಮಗುವನ್ನು ತನ್ನದೆಂದೇ ತಿಳಿದು ಲಾಲನ ಪಾಲನಮಾಡುತ್ತಲೂ, ಗಂಡನನ್ನು ಸಂತೋಷಪಡಿಸುತ್ತಲೂ, ಅತ್ತೆಯನ್ನು ಸೇವಿಸುತ್ತಲೂ, ತನ್ನ ಸಪತ್ನಿಯನ್ನು ಅಕ್ಕನೆಂದು ತಿಳಿದು ಪ್ರೀತಿಸುತ್ತಲೂ ಕಾಲವನ್ನು ಕಳೆಯಲಾರಂಭಿಸಿದಳು.

—

ಮನೆಯ ಕೆಲಸವೆಲ್ಲವೂ ಸರಳೆಯ ತಲೆಯ ಮೇಲೆ ಬಿದ್ದಿತು. ಸರಳೆಯು ಒಂದಕ್ಕೂ ವಿರೋಧವಿಲ್ಲದಂತೆ ಮನೆಯ ಕೆಲಸಗಳೆಲ್ಲವನ್ನೂ ಮಾಡುತ್ತಾ ಎಲ್ಲರ ಪ್ರೀತಿವಿಶ್ವಾಸಗಳಿಗೂ ಪಾತ್ರವಾಗುತ್ತಾ ಬಂದಳು. ಸರಳೆಯು ಅತ್ತೆಗೆ ಸ್ನಾನ ಭೋಜನಾದಿಗಳನ್ನು ಮಾಡಿಸದೆ ತಾನು ಭೋಜನ ಮಾಡಳು. ತರಳೆಗೆ ಅಲಂಕಾರ ಮಾಡದೆ ತಾನು ಅಲಂಕಾರಮಾಡಿಕೊಳ್ಳಲು ಇಷ್ಟಪಡಳು. ಮನೆಯಲ್ಲಿ ಆವ ಕೆಲಸ ಮಾಡಬೇಕಾದರೂ ತರಳೆಯನ್ನು ಕೇಳಿ ಮಾಡುವಳು. ಸದಾಕಾಲದಲ್ಲಿಯೂ ತರಳಕುಮಾರಿಯು ಮಗುವನ್ನು ಕೌಂಕುಳಲ್ಲಿ ಎತ್ತಿಕೊಂಡು ಅದನ್ನು ಮುದ್ದಾಡುತ್ತಿರುವಳು. ವಿನಯನು ತಿಂಗಳಲ್ಲಿ ೧೫ ದಿನ ಮನೆಯಲ್ಲಿಯೂ, ೧೫ ದಿನ ತನ್ನ ಮಾವನ ಮನೆಯಲ್ಲಿಯೂ ವಾಸವಾಗಿರುವಂತೆ ಏರ್ಪಡಿಸಿಕೊಂಡನು. ಸರಳಕುಮಾರಿಯು ಆಗಿಂದಾಗ ತನ್ನ ಗಂಡನ ಮನೆಗೆ ಬಂದು ಅತ್ತೆಗೂ ಸವತಿಗೂ ಬೇಕುಬೇಕಾದ ಕೆಲಸಗಳನ್ನು ಮಾಡಿಕೊಟ್ಟು ತನ್ನ ತವರೂರಿಗೆ ಹೊರಟು ಬರುತ್ತಿದ್ದಳು. ಒಂದೊಂದು ವೇಳೆ ಗಂಡನು ತನ್ನಲ್ಲಿ ಹೆಚ್ಚಿನ ದಿನಗಳು ನಿಲ್ಲುವ ಹಾಗಿದ್ದರೆ, "ಸ್ವಾಮಿನ್! ತಾವು ಇಲ್ಲಿಯೇ ನಿಲ್ಲುವುದಾದರೆ ತರಳಕುಮಾರಿಯೂ ವೃದ್ಧೆಯಾದ ನಮ್ಮ ಅತ್ತೆಯವರೂ ಅತಿಯಾಗಿ ಕತಿಗೊಳ್ಳುವರು. ಅವರಿಗೆ ಸಂಕಟವುಂಟಾಗುವುದಾದರೆ ನನಗೂ ಸಂಕಟವಾಗುವುದು. ನಮ್ಮಕ್ಕನು ಸಂತೋಷದಿಂದಿರುವುದಾದರೆ ನನಗೂ ಸಂತೋಷ," ಎಂದು ಹೇಳಿ ಗಂಡನನ್ನು ಅವಳಲ್ಲಿಗೆ ಕಳುಹಿಸಿಕೊಡುತ್ತಿದ್ದಳು.



# ಇಪ್ಪತ್ತನಾಲ್ಕನೆಯ ಲಂಬಕ.



## ತತ್ತ್ವೋಪದೇಶ.

ಸರಳಕುಮಾರಿಯು ಮನೆಯ ಜನರೆಲ್ಲರನ್ನೂ ಏಕರೀತಿಯಾಗಿ ಪ್ರೀತಿಸುತ್ತಲೂ ತನ್ನದು ಇತರರದು ಎಂಬ ಭೇದವಿಲ್ಲದೆ ಎಲ್ಲರಲ್ಲಿಯೂ ಒಂದೇ ಸಮನಾಗಿ ವರ್ತಿಸುತ್ತಲೂ ಎಲ್ಲರ ಪ್ರೀತಿಗೂ ಪಾತ್ರವೆನಿಸಿ ಸುಖದಿಂದ ಕಾಲವನ್ನು ಕಳೆಯುತ್ತಿದ್ದಳು. ಸವತಿಯಿಂದ ತನಗಾಗಲಿ, ತನ್ನ ಗಂಡನಿಗಾಗಲಿ

ತೊಂದರೆಯೇನಾದರೂ ಸಂಭವಿಸೀತೆಂಬ ಶಂಕೆಯಿಂದ, ಸರಳೆಯು ತರಳ ಕುಮಾರಿಯನ್ನು ಎಲ್ಲರಿಗಿಂತಲೂ ಹೆಚ್ಚಾಗಿ ಪ್ರೀತಿಸುತ್ತಾ ಅವಳ ಕೆಲಸ ವನ್ನೇ ಮೊದಲು ಮಾಡುವವಳಾಗಿದ್ದಳು. ವಿನಯನು ಈ ಅನ್ಯಾದೃಶವಾದ ಸರಳೆಯ ಸ್ವಭಾವವನ್ನು ನೋಡಿ ತನ್ನಲ್ಲಿ ತಾನೇ ಸ್ವರ್ಗಸುಖವನ್ನು ಅನು ಭವಿಸಲಾರಂಭಿಸಿದನು. ಮನೆಯ ಅತ್ತೆಗೂ ಎಂದೂ ಕಾಣದ ಸುಖವೇರ್ಪ ಟ್ಟಿತು. ಮಗುವಾದರೋ ತಾಯನ್ನು ಬಿಟ್ಟು ಮೂರು ಹೊತ್ತೂ ಸರಳೆಯ ಕೌಂಕುಳಲ್ಲಿಯೇ ಇರಲಾರಂಭಿಸಿತು. ಅಕ್ಕಪಕ್ಕದ ಗ್ರಾಮಮಹಿಳೆಯರೆಲ್ಲರೂ ಸರಳೆಯನ್ನು ನೋಡದ ದಿನವೇ ದುರ್ದಿನವೆಂದು ತಿಳಿದು ದಿನಕ್ಕೊಂದು ಸಲವಾದರೂ ಸರಳೆಯೊಡನೆ ಮಾತನಾಡಿಕೊಂಡು ಹೋಗುತ್ತಿದ್ದರು.

ವಿನಯನು ಹೆಂಡತಿಯರೊಡಗೂಡಿ ಸ್ವರ್ಗಸಂಸಾರವನ್ನು ಮಾಡ ತೊಡಗಿದನು. ಸುಖಮಯವಾದ ದಿನಗಳು ಒಂದರ ಮೇಲೊಂದು ಕಳೆಯ ಲಾರಂಭವಾದುವು. ದಿನಗಳು ಕಳೆದ ಹಾಗೆಲ್ಲಾ ಸಂಸಾರದಲ್ಲಿ ಸುಖವೆಂ ಬುದು ಹೆಚ್ಚುತಲಿದ್ದಿತೆಂದು ಹೇಳಬೇಕಾದುದೇನೂ ಇರಲಿಲ್ಲ ತರಳಕುಮಾ ರಿಯು ಇದೆಲ್ಲವನ್ನೂ ಏಕಾಂತವಾಗಿ ನೋಡಿದಳು ಮನೆಯಲ್ಲಿ ಆನಂದವು ಹೆಚ್ಚಿದ ಹಾಗೆಲ್ಲಾ, ಅವಳ ಮುಖದಲ್ಲಿ ವಿಷಾದ ರೇಖೆಯು ಕಾಣಿಸಲಾರಂಭ ವಾಯಿತು.

ಲೋಕದಲ್ಲಿ ಸವತಿಯರು ಒಬ್ಬರಿಗೊಬ್ಬರು ಅನುಕೂಲೆಯಾಗಿರುವ ರೆಂಬುದು ಕಂಡು ಕೇಳಿದ ವಿಷಯವೇ ಅಲ್ಲ ಸವತಿಯರು ಮೇಲೆ ಮಟ್ಟಿಗೆ ವಿಶ್ವಾಸವುಳ್ಳವರಂತೆ ನಟಿಗೆ ಮಾಡಿದರೂ, ಒಳಗೆ ದ್ವೇಷಾಸೂಯೆಗಳು ಹೊಗೆಯಾಡುತ್ತಲೇ ಇರುವುವು. ಇದಕ್ಕೆ ಕಾರಣವು ಸವತಿಯರಿಗೆ ಗೊತ್ತೇ ಹೊರತು ಇತರರಿಗೆ ಗೊತ್ತಾಗಲು ಕಾರಣವಿರುವುದಿಲ್ಲ. ಪ್ರಕೃತದಲ್ಲಿ ಹೇಳು ವುದಕ್ಕೆ ಬಂದುದೇನೆಂದರೆ—ತರಳಕುಮಾರಿಯು ಸರಳಕುಮಾರಿಯನ್ನು ಅಂತರ್ಯದಲ್ಲಿ ದ್ವೇಷಿಸಲು ಪ್ರಾರಂಭಿಸಿದಳು ಸರಳೆಯ ಒಳ್ಳೆಯ ನಡತೆ ಯೆಲ್ಲವೂ ಸವತಿಯ ಮತ್ಸರವನ್ನು ಹೆಚ್ಚಿಸುವುದಕ್ಕಾಯಿತೇ ಹೊರತು, ಸಂ ಸಾರದ ಆನಂದವನ್ನು ಹೆಚ್ಚಿಸುವುದರಲ್ಲಿ ಶಕ್ತಿಯಿಲ್ಲದುದಾಗಿ ಪರಿಣಮಿಸಿತು. ಕ್ರಮಕ್ರಮವಾಗಿ ತರಳೆಯ ದ್ವೇಷಾನಲವು ಪ್ರಜ್ವಲಿತವಾಗಿ ಕಾಳ್ಕಿಚ್ಚು ಕಾಡನ್ನು ಸುಡುವಂದದಿ ಸಂಸಾರದ ಸುಖವನ್ನು ಸುಡಲಾರಂಭಿಸಿತು. ತರ ಳೆಯು ತನ್ನ ದ್ವೇಷಾಗ್ನಿಯಿಂದ ತಾನೇ ದಗ್ಧವಾದ ಹೃದಯವುಳ್ಳವಳಾಗಿ,

"ನನ್ನ ಸ್ವಾಮಿ ಈ ನಡುವೆ ನನ್ನನ್ನು ಮೊದಲಿನಂತೆ ಪ್ರೀತಿಸುತ್ತಿಲ್ಲ. ಅವರಿಗಾದರೋ ಸರಳೆಯೇ ಸರ್ವಸ್ವವೂ ಆಗಿರುವಳು. ಅವರು ಮೇಲೆ ಮಟ್ಟಿಗೆ ನನ್ನನ್ನು ಪ್ರೀತಿಸುತ್ತಿರುವಂತೆ ನಟನೆ ಮಾಡುವರೇ ಹೊರತು, ಅವರಿಗೆ ಅಂತರ್ಯದಲ್ಲಿ ನನ್ನ ಮೇಲೆ ಇರುವ ಪ್ರೀತಿಯು ಅಷ್ಟರಲ್ಲಿಯೇ ಇರುವುದು. ಸರಳೆಯು ಎಂತಹ ಬೆಡಗುಗಾತಿಯಿರಬೇಕು. ಅವಳ ನಟನೆಯಂತೂ ಹೇಳಲೇ ಕೆಲಸವಿಲ್ಲ. ಇತರ ಹೆಂಗುಸರಿಗೆ ಏನು ಬಂದಿರುವುದು? ಅವರೂ ಅವಳ ಬಲೆಗೆ ಬಿದ್ದು ಸಾಯುತ್ತಿರುವರಲ್ಲಾ ! ಸರಳೆಯು ಮಾಟಗಾತಿಯೋ ಪಿಶಾಚಿಯೋ ಒಂದೂ ಗೊತ್ತಾಗಲೊಲ್ಲದು. ಅವಳಾದರೋ ಕಾಲ ಕಂಡ ಹೆಂಗುಸೇ ಸರಿ. ಇದು ಕೃತ್ರಿಮುಗಳಿಗೆ ಕಾಲವೇ ಹೊರತು ನನ್ನಂತಹ ಏನೂ ಅರಿಯದವರಿಗೆ ಇದೆಂದಿಗೂ ಕಾಲವಲ್ಲ ಬಲು ಮಾತಿನಿಂದೇನು ? ಬೆಳ್ಳಗಿರುವುದೆಲ್ಲವೂ ಹಾಲೆಂದು ನಂಬತಕ್ಕ ನನ್ನಂತಹವರಿಗೆ ಉಂಟಾಗುವ ಗತಿಯೇ ಹೀಗೆ ? ನಾನು ಒಳಗೆ ಕೊರಗುತ್ತಾ ಇನ್ನೆಷ್ಟು ದಿನಗಳು ಹೀಗೆಯೇ ಸಹಿಸಿಕೊಂಡಿರಲಿ ! ನಾನು ಎಷ್ಟು ದಿನಗಳು ಸುಮ್ಮನಿದ್ದರೂ ನನಗೆ ಈ ದುರವಸ್ಥೆ ಬೇರೆ ತಪ್ಪುವಂತಿಲ್ಲ ಆದುದರಿಂದ ನಾನು ಇದಕ್ಕೆ ತಕ್ಕ ಪ್ರತೀಕಾರಮಾಡಲೇ ಬೇಕು. ನಾನು ಹಾಗೆ ಮಾಡದಿದ್ದರೆ, ನನ್ನ ಸ್ವಾಮಿಯು ಕೈತಪ್ಪಿ ಹೋಗುವ ಸಂಭವವುಂಟು ಬಳಿಕ ನಾನು ಬದುಕಿ ಫಲವೇನು ? ನಾನು ಬದುಕಿರಬೇಕಾದರೆ, ನನ್ನ ಸ್ವಾಮಿಯು ನನ್ನ ವಶದಲ್ಲಿರಬೇಕು ಬಳಿಕ ನನ್ನ ರೊಟ್ಟಿ ಜಾರಿ ತುಪ್ಪದಲ್ಲಿ ಬಿದ್ದಂತಾಗುವುದು ಆ ಮೇಲೆ ನನಗೆ ಭಯವೆಂದರೇನು? ಆದುದರಿಂದ ಏನಾದರೊಂದುಪಾಯವಮಾಡಿ ನನ್ನ ಉದ್ದೇಶವನ್ನು ಸಫಲಗೊಳಿಸಬೇಕು ನಮ್ಮ ಪಕ್ಕದ ಮನೆಯ ಹೆಂಗುಸು ಕೃಷ್ಣಕಾಮಿನಿಯು ಮಂತ್ರತಂತ್ರಗಳಲ್ಲಿ ಚದುರೆಯೆಂದು ನಾನು ಕೇಳಿರುವೆನು. ಗ್ರಾಮದವರೆಲ್ಲರೂ ಆಕೆಯಲ್ಲಿಗೆ ಬಂದು ಅನೇಕ ಸಂಗತಿಗಳನ್ನು ತಿಳಿದುಕೊಂಡು ಹೋಗುತ್ತಿರುವರು ನಾನೂ ಅಲ್ಲಿಗೆ ಹೋಗಿ ನನ್ನ ಸಂಗತಿಯೆಲ್ಲವನ್ನೂ ತಿಳಿಸಿ ಗಂಡನನ್ನು ವಶಮಾಡಿಕೊಳ್ಳುವುದಕ್ಕೆ ಬೇಕಾದ ಔಷಧಗಳನ್ನು ಸಂಪಾದಿಸಿಕೊಂಡು ಬರುವೆನು ಇದಕ್ಕಾಗಿ ಅವಳಿಗೆ ಎಷ್ಟು ಹಣ ಬೇಕಾದರೂ ನಾನು ಕೊಡಬಲ್ಲೆನು, " ಎಂದು ದೂರಾಲೋಚನೆಯಿಲ್ಲದ ದುರಾಲೋಚನೆಯನ್ನು ಮಾಡಿ ಗುಟ್ಟಾಗಿ ಕೃಷ್ಣಕಾಮಿನಿಯ ಮನೆಗೆ ಹೋಗಿ ತನ್ನ ಸಂಕಟವನ್ನು ಮೊದಲಿನಿಂದ ಕೊನೆಯ ವರೆಗೂ ತಿಳಿಸಿದಳು. ಆ ಕೆಟ್ಟ ಮೋರೆಯ

ಕೃಷ್ಣಕಾಮಿನಿಯು ಹಣದಾಸೆಗಾಗಿ ಔಷಧವನ್ನು ಕೊಟ್ಟಳು. ತರಳಕುಮಾರಿಯು ಬಲು ಸಂತೋಷದಿಂದ ಮನೆಗೆ ತೆಗೆದುಕೊಂಡು ಬಂದು ಗಂಡನ ಹೊಟ್ಟೆಗೆ ಹಾಕುವುದಕ್ಕೆ ಸರಿಯಾದ ಸಮಯವನ್ನು ನಿರೀಕ್ಷಿಸಿಕೊಂಡಿರುತ್ತಿದ್ದಳು. ಒಂದು ಸೋಮವಾರದ ದಿನ ಅಮಾವಾಸ್ಯೆಯು ಒದಗಿ ಬಂದಿರಲು, ತರಳೆಯು ಅಡುಗೆಯ ಮನೆಯಲ್ಲಿ ಕುಳಿತುಕ್ಕೊಂಡು ಔಷಧವನ್ನು ಅರೆಯುತ್ತಿದ್ದಳು. ಅದೇ ಹೊತ್ತಿಗೆ ಸರಳಕುಮಾರಿಯು ಅವುದೋ ಕೆಲಸದ ನೆಪದಿಂದ ತರಳೆಯನ್ನು ನೋಡುವುದಕ್ಕಾಗಿ ಬಂದು ನೆಟ್ಟಗೆ ಅಡುಗೆಯ ಮನೆಗೆ ನುಗ್ಗಿದಳು. ಅಲ್ಲಿ ತರಳೆಯು ಏನನ್ನೋ ಅರೆಯುತ್ತಿದ್ದುದನ್ನು ನೋಡಿ ಸಂಶಯದಿಂದ ಬೆಚ್ಚಿಬೆದರಿದವಳಾಗಿ,—"ಅಕ್ಕ ! ಗಂಡನನ್ನು ವಶಮಾಡಿಕೊಳ್ಳುವುದಕ್ಕಾಗಿ ಈ ಔಷಧವನ್ನು ಅರೆಯುವಂತಿದೆ, ಇದರಿಂದ ಗಂಡನು ವಶನಾಗುವುದಿಲ್ಲ ನನ್ನ ಹತ್ತಿರದಲ್ಲಿ ಸಿದ್ಧವಾದ ಔಷಧವೊಂದಿರುವುದು. ನಿನಗೂ ಅದರಿಂದ ಪ್ರಯೋಜನವುಂಟೆಂದು ನನಗೆ ಮೊದಲೇ ತಿಳಿದಿದ್ದರೆ, ಆಗಳೇ ನಾನದನ್ನು ನಿನಗ ಕೊಡುತ್ತಿದ್ದೆನು ಈಗಳಾದರೇನು ? ನಾನು ನಿನಗೆ ಅದನ್ನು ಕೊಡುವೆನು ನನ್ನಲ್ಲಿರುವ ಔಷಧವಾದರೊ ಅಮೂಲ್ಯವಾದುದು. ಈಗಣ ಪಂಡಿತರಾರೂ ಅಂತಹ ಔಷಧವನ್ನು ಮಾಡುವುದಕ್ಕೆ ನಾಗದು ಈ ಔಷಧವನ್ನು ನನ್ನಗಂಡನಲ್ಲಿ ಮೊದಲೇ ಪ್ರಯೋಗಮಾಡಿ ಆತನನ್ನು ಸ್ವಾಧೀನಪಡಿಸಿಕೊಂಡಿರುವೆನು ನೀನೂ ಅದೇ ಔಷಧವನ್ನು ಪ್ರಯೋಗಮಾಡಿ ಗಂಡನನ್ನು ಬುಟ್ಟಿಯಲ್ಲಿ ಹಾಕಿಕೊಳ್ಳು. ಒಂದು ಔಷಧವನ್ನು ಪ್ರಯೋಗ ಮಾಡಿದ ಮೇಲೆ ಮತ್ತೊಂದು ಔಷಧವು ಕೆಂದುವುದಿಲ್ಲ ಆದುದರಿಂದ ಈ ಹಾಳು ಔಷಧವನ್ನು ದೂರವಾಗಿ ಬಿಸುಟು ಬಿಡು," ಎಂದು ಹೇಳಿದುದನ್ನು ಕೇಳಿ ತರಳೆಯು ತನ್ನೊಳಗೆ, "ನಾನು ಗುಟ್ಟಾಗಿ ಮಾಡಿದ ಕೆಲಸವು ಇವಳಿಗ ಗೊತ್ತಾದ ಬಗೆ ಹೇಗೆ ? ಇವಳಿಗೆ ಆರೋ ತಿಳಿಸಿರಬೇಕು ಈ ಹಾಳು ಮನೆಯಲ್ಲಿ ಗುಟ್ಟಿನಲ್ಲಿ ಏನು ಕೆಲಸ ಮಾಡುವುದಕ್ಕೂ ಆಗುವುದಿಲ್ಲ," ಎಂದು ಕೊಂಡು ಮುಖವನ್ನು ಅಲುಗಾಡಿಸುತ್ತಾ,—"ಸರಳೆ ! ಹಾಗಾದರೆ—" ಎಂದಳು

ಸರಳೆಯು,—"ಎಲ್ಲಿ ನಿನ್ನ ಔಷಧವನ್ನು ಕೊಡು. ನಾನು ಅದನ್ನು ಬೀಸಾಡಿ ನಿನಗೆ ನನ್ನ ಔಷಧವನ್ನೇ ಕೊಡುವೆನು. ನಾನು ಕೊಡುವ ಔಷಧವನ್ನು ಗುಟ್ಟಾಗಿ ನೀನು ಸ್ವಾಮಿಯಲ್ಲಿ ಉಪಯೋಗಿಸಿದೊಡನೆಯೇ

ನಿನ್ನ ಇಷ್ಟಾರ್ಥವು ಈಡೇರುವುದು. ಇದಕ್ಕಾಗಿ ನೀನು ಇಷ್ಟು ಶ್ರಮಪಡ ಬೇಕೆ ? " ಎಂದು ಸವಿನುಡಿಗಳನ್ನಾಡಿದಳು. ತರಳೆಯು ಆ ಔಷಧವನ್ನು ದೂರವಾಗಿ ಬೀಸಾಡಿ ಬಂದು ಸರಳೆಯ ಬಳಿಯಲ್ಲಿ ಕುಳಿತಳು. ಸರಳೆಯು,—ಅಕ್ಕ ! ಗಂಡನನ್ನು ವಶಮಾಡಿಕೊಳ್ಳತಕ್ಕ ವಿಷಯದಲ್ಲಿ ನಾನು ಆವುದೋ ಪುರಾಣದಲ್ಲಿ ಒಂದು ಕತೆಯನ್ನು ಓದಿರುವೆನು. ಮೊದಲು ಅದನ್ನು ನಿನಗೆ ತಿಳಿಯ ಹೇಳಿದ ಬಳಿಕ—ಔಷಧವನ್ನು ಕೊಡುವೆನು. ನಾನು ಹೇಳುವುದನ್ನು ಮಟ್ಟಿಗೆ ನೀನು ಮನಸ್ಸಿಟ್ಟು ಕೇಳಬೇಕೆಂದು ಪ್ರಾರ್ಥನೆ, " ಎಂದು ಹೇಳಿ, ಒಂದು ಪೌರಾಣಿಕ ಕಥೆಯನ್ನು ಕಲ್ಪಿಸಿಕೊಂಡು ಹೇಳತೊಡಗಿದಳು.

" ಒಂದಾನೊಂದು ಕಾಲದಲ್ಲಿ ಶ್ರೀಕೃಷ್ಣಪರಮಾತ್ಮನು ದ್ವಾರಕೆ ಯಲ್ಲಿ ರುಕ್ಮಿಣೀ ಸತ್ಯಭಾಮೆಯರೊಡಗೂಡಿ ರಾಜ್ಯವನ್ನು ಪರಿಪಾಲಿಸುತ್ತಿ ದ್ದನು. ಪಾಂಡವರು ದ್ರೌಪದಿಯೊಡಗೂಡಿ ಶ್ರೀಕೃಷ್ಣನ ದರ್ಶನವನ್ನು ತೆಗೆದುಕೊಂಡು ಹೋಗುವುದಕ್ಕಾಗಿ ದ್ವಾರಕೆಗೆ ಬಂದರು. ಪ್ರಿಯಬಂಧುಗ ಳಾದ ಪಾಂಡವರು ಬಂದರೆಂದು ಶ್ರೀಕೃಷ್ಣನು ಪರಮಾನಂದ ಭರಿತನಾಗಿ ಮಾನಮರ್ಯಾದೆಗಳಿಂದ ಅವರನ್ನು ಇದಿರುಗೊಂಡು ಅವರನ್ನು ತನ್ನ ಅರ ಮನೆಯಲ್ಲಿಯೇ ಕೆಲವು ಕಾಲದ ವರೆಗೂ ಇರಿಸಿಕೊಂಡಿದ್ದನು. ಹೀಗಿರುವಲ್ಲಿ ಒಂದು ದಿನ ದ್ರೌಪದಿಯು ರುಕ್ಮಿಣಿಯನ್ನು ಕುರಿತು,—"ರುಕ್ಮಿಣಿ! ಅನೇಕ ಜನರು ಹೆಂಡಿರಿದ್ದರೂ ಶ್ರೀಕೃಷ್ಣನು ಆವಾಗಲೂ ನಿನ್ನಲ್ಲಿಯೇ ಅನುರಕ್ತ ನಾಗಿರುವನು ಅವನು ನಿರಂತರದಲ್ಲಿಯೂ ನಿನಗೆ ವಿಧೇಯನಾಗಿದ್ದುಕೊಂಡು ಪ್ರಿಯವಾದುದನ್ನೇ ಆಚರಿಸುತ್ತಿರುವನು ನಿನ್ನ ಮಾತನ್ನು ಅವನು ಎಂ ದಿಗೂ ಮೀರನು ಎಲ್ಲರ ಇದಿರಿನಲ್ಲಿಯೂ ನಿನ್ನ ಮಹಿಮೆಯನ್ನೇ ಕೊಂಡಾ ಡುತ್ತಾ ಅಂತರ್ಯದಲ್ಲಿ ಸ್ವರ್ಗಸುಖವನ್ನು ಅನುಭವಿಸುತ್ತಿರುವನು. ಇದೆ ಲ್ಲವೂ ನನಗೆ ಚೆನ್ನಾಗಿಯೂ ಗೊತ್ತುಂಟು ರುಕ್ಮಿಣಿ! ಇದಕ್ಕೆಲ್ಲಾ ಕಾರಣ ವೇನಿರಬಹುದು ? ನೀನು ಎಲ್ಲವನ್ನೂ ಕಪಟವಿಲ್ಲದೆಯೇ ನನಗರುಹು. ನಿನ್ನಲ್ಲಿ ಆವ ಮಣಿ ಮಂತ್ರೌಷಧಗಳಿರುವುವು? ನೀನು ಅದಾವ ತಂತ್ರವನ್ನರಿ ತಿರುವೆ ? ನೀನು ಅದಾವ ವ್ರತವನ್ನು ಆಚರಿಸಿರುವೆ ? ನೀನು ಆವ ಯೋಗ ವನ್ನು ಬಲ್ಲೆ ? ಆವ ಸಿದ್ಧೌಷಧವು ನಿನ್ನಲ್ಲಿರುವುದು ? ಆವ ಶಕ್ತಿ ನಿನ ಗುಂಟು ? ನೀನು ನನ್ನಲ್ಲಿ ದಯೆಯಿಟ್ಟು ಇದರ ಮರ್ಮವನ್ನು ತಿಳಿಯ ಪಡಿಸು. ನಿನ್ನ ಗಂಡನಿಗೆ ಅನೇಕ ಮಂದಿ ಹೆಂಡಿರಿರುವರು ನನಗಾದರೋ

೫ ಜನ ಗಂಡಂದಿರುವರು. ನಿನ್ನಂತೆಯೇ ನಾನೂ ನನ್ನ ಪತಿಗಳನ್ನು ಸ್ವಾಧೀನಕ್ಕೆ ತಂದುಕೊಂಡು ಅವರನ್ನು ಸೇವಿಸಬೇಕೆಂದಿರುವೆನು. ರುಕ್ಮಿಣೀ! ನಿರ್ವಂಚನೆಯಿಂದ ನನಗೆ ಇದರ ಮೂಲ ತತ್ತ್ವವನ್ನು ಉಪದೇಶಮಾಡು," ಎಂದು ಕೇಳಲಾಗಿ, ರುಕ್ಮಿಣಿಯು ನಸುನಗುತೆ ಪ್ರತ್ಯುತ್ತರವಿತ್ತಳು.

" ದ್ರೌಪದಿ! ನೀನು ಹೇಳುವುದೆಲ್ಲವೂ ನಿಜವು. ನೀನು ಕೇಳಿದುದೂ ಸರಿ. ನಿನ್ನ ಪ್ರಶ್ನೆಯೂ ಚೆನ್ನಾಗಿರುವುದು. ಅದಕ್ಕೆ ಉತ್ತರವನ್ನು ನಾನು ಕೊಡಬಲ್ಲೆನು. ಆದರೆ ನನ್ನ ಉತ್ತರವು ಪತಿವ್ರತಾ ಸ್ತ್ರೀಯರಿಗೆ ಪ್ರಯೋಜನವಿರಲಾರದು. ಪತಿವ್ರತೆಯರಿಗೆ ಹೇಳಲು ನನಗೆ ಶಕ್ತಿಸಾಲದು, ಆದರೂ ಲೋಕದಲ್ಲಿ ಅನೇಕಾನೇಕರಾದ ಕೆಟ್ಟ ಹೆಂಗುಸರಿರುವರು ಅವರ ತಿಳಿವಿಗಾಗಿಯಾದರೂ ನನಗೆ ತೋರಿದ ಮಟ್ಟಿಗೆ ತಿಳಿಯಪಡಿಸುವೆನು, ಕೇಳು

ಮಂತ್ರೌಷಧಗಳಿಂದ ಗಂಡನನ್ನು ವಶಮಾಡಿಕೊಳ್ಳುವುದು ಅನ್ಯಾಯವು. ಪತಿಯು ಹೆಂಗುಸಿಗೆ ಪ್ರತ್ಯಕ್ಷದೇವತೆ ಅವನು ಮಂತ್ರೌಷಧಗಳಿಂದೆಂದಿಗೂ ವಶನಾಗತಕ್ಕವನಲ್ಲ ಪತಿಯು ಹೆಂಡಿತಿಯ ಸದಾಚಾರವನ್ನೂ ಸದ್ಗುಣವನ್ನೂ ನೋಡಿ ತಾನಾಗಿಯೇ ಸಂತುಷ್ಟನಾಗುವನು ಆತನು ಹೆಂಡಿತಿಯಲ್ಲಿ ವಿರುದ್ಧಾಚರಣೆಯನ್ನು ಕಂಡರೆ, ಕುಪಿತನಾಗುವನು ಔಷಧದ ಪ್ರಯೋಗದಿಂದ, ಹಿತವಾಗುವ ಮಾತು ಅದಂತಿರಲಿ, ಬಹುವಿಧವಾಗಿ ಕಿಡುಕೇ ಆದೀತು. ವಶೀಕರಣಕ್ಕಾಗಿ ಹೆಂಡಿತಿಯಾದವಳು ಮಂತ್ರ ತಂತ್ರಗಳನ್ನು ಮಾಡುವಳೆಂದು ಸ್ವಾಮಿಗೆ ಗೊತ್ತಾದಲ್ಲಿ ಅವನ ಹೃದಯವು ತತ್ತರಗುಟ್ಟುವುದು. ಈ ಸಂಶಯದಿಂದ ಗಂಡನು ಹೆಂಡಿತಿಯಲ್ಲಿ ದೀರ್ಘದ್ವೇಷವನ್ನು ಸಾಧಿಸಿ ಸಂಸಾರ ಸುಖವನ್ನೇ ನೀಗಿಕೊಳ್ಳುವನು ಮನೆಯಲ್ಲಿ ಹಾವು ಸೇರಿಕೊಂಡಿದ್ದರೆ, ಆವ ರೀತಿಯಲ್ಲಿ ನಿತ್ಯಭಯವುಂಟಾಗುವುದೋ, ಅದೇ ರೀತಿಯಲ್ಲಿ ಮಂತ್ರತಂತ್ರವನ್ನರಿತ ಹೆಂಡಿತಿಯನ್ನು ಕಂಡ ಕೂಡಲೆ ಗಂಡನು ಹೆದರಿ ಆಕೆಯನ್ನು ನಿರ್ಮೂಲ ಮಾಡುವುದಕ್ಕೂ ನಾಕು

ಗಂಡನು ವಶನಾಗಲೆಂದು ಅಸತಿಯರನೇಕರು ಗಂಡನಿಗೆ ಮದ್ದಿಡುವರು. ಇದರಿಂದ ಅಸತಿಯರು ತಮ್ಮ ತಲೆಯ ಮೇಲೆ ತಾವೇ ಬಂಡೆಯನ್ನು ಎಳೆದುಕೊಳ್ಳುವರು. ಬಳಿಕ ಅವರ ಜನ್ಮವು ನಿತ್ಯದುಃಖಕ್ಕೆ ತೌರುಮನೆಯಾಗಿಬಿಡುವುದು. ಹೆಂಗುಸಾದವಳಿಗೆ ಇದಕ್ಕಿಂತಲೂ ನೀಚವಾದ ಪಾಪದ ಕೆಲಸವಿಲ್ಲ. ಇಂತಹ ಹೆಂಗುಸರ ಮೂಲಕವಾಗಿ ವಿಟರು ತಮ್ಮ ಮನೋ

ರಥಗಳನ್ನು ನೆರವೇರಿಸಿಕೊಳ್ಳುವರು. ಇದನ್ನರಿಯದೆಯೇ ಕುಲಟೆಯರು ಈ ಘೋರತರವಾದ ಕೃತ್ಯಕ್ಕೆ ಕೈ ಹಾಕಿ, ಬಳಿಕ ದುರಂತವಾದ ಪಶ್ಚಾತ್ತಾಪ ಪಡುವರು. ದೂರಾಲೋಚನೆಯಿಲ್ಲದ ಹೆಂಗುಸರ ದುರಾಲೋಚನೆಯನ್ನು ಸುಟ್ಟರು.

ಪುರುಷನ ಬುದ್ಧಿಯು ತನ್ನ ಕಡೆಗೆ ತಿರುಗಲೆಂದು ದುರುಳೆಯರು ದುರೌಷಧಗಳನ್ನು ಪ್ರಯೋಗಿಸುವರು. ಅಂತಹವರು ಔಷಧವೆಂಥದೆಂಬ ದನ್ನೂ ಅರಿಯರು. ಔಷಧವಾದರೋ ಬುದ್ಧಿಯನ್ನು ಕಿಡಿಸತಕ್ಕ ಸಾಮುಗ್ರಿ ಗಳಿಂದ ನಿರ್ಮಿಸಲ್ಪಡುವುದು. ಬುದ್ಧಿಭ್ರಾಮಕ ಪದಾರ್ಥಗಳು ಶರೀರದಲ್ಲಿ ವ್ಯಾಪಿಸಿದೊಡನೆಯೇ ಮೊದಲು ರಕ್ತವನ್ನು ಒಡಿಸುವುದು, ಬಳಿಕ ಬುದ್ಧಿ ಯಲ್ಲಿ ಮಾಂದ್ಯವುಂಟಾಗುವುದು. ಬುದ್ಧಿಯು ಮಂದವಾಯಿತೆಂದರೆ, ಬುದ್ಧಿ ಶಕ್ತಿಯೇ ಹಾಳಾಗಿ ಆವ ಕೆಲಸಮಾಡುವುದಕ್ಕೂ ದಿಕ್ಕೇ ತೋರುವುದಿಲ್ಲ. ಈಯವಸ್ಥೆಯಲ್ಲಿರುವ ಪುರುಷನನ್ನು ನೋಡಿ, ಮನೆಹಾಳ ಹೆಂಗುಸರು ಗಂಡನು ವಶನಾದನೆಂದು ಆತನನ್ನು ಬೊಂಬೆಯಂತೆ ಕುಣಿಸುವರು ಅಲ್ಲ ದೆಯೂ ತಮ್ಮ ದುರ್ವ್ಯಾಪಾರಗಳನ್ನೂ ಗುಟ್ಟಾಗಿ ನೆರವೇರಿಸಿಕೊಳ್ಳುವರು. ಆದರೆ ಪುರುಷನಿಗೆ ಇದರಿಂದುಂಟಾಗುವ ದುಷ್ಪರಿಣಾಮವನ್ನು ಮುಟ್ಟಗೆ ಕೆಟ್ಟ ಹೆಂಗುಸರು ಎಂದಿಗೂ ಅರಿಯರು. ಔಷಧವನ್ನು ಪ್ರಯೋಗಿಸಬೇಕೆಂದು ಎಣಿಸುವ ಹೆಂಗುಸರು ಆಂತರ್ಯದಲ್ಲಿ ಗಂಡನನ್ನು ಕೊಲ್ಲಬೇಕೆಂದು ಇಷ್ಟ ಪಟ್ಟಂತೆಯೇ ತೋರುವುದು. ಈ ಅಭಿಪ್ರಾಯವಿರುವುದಾದರೆ ಗಂಡನನ್ನು ಮೆಲ್ಲಮೆಲ್ಲನೆ ಸಾಯಿಸುವುದಕ್ಕಿಂತಲೂ ತೀವ್ರವಾದ ವಿಷವನ್ನು ಪ್ರಯೋ ಗಿಸಿ ಆತನನ್ನು ಸಾಯಿಸುವುದೇ ಮೇಲು. ಬಳಿಕ ದುಷ್ಟ ಹೆಂಗುಸು ಆವ ದುಷ್ಕಾರ್ಯವನ್ನಾದರೂ ನಿರುಪಾಧಿಕವಾಗಿ ನೆರವೇರಿಸಿಕೊಳ್ಳಬಹುದು. ಹೆಂಗುಸು ತಾನು ಮಾಡುವ ಪಾಪ ಕೆಲಸಕ್ಕೆ ಗಂಡನಿಗೆ ಇಹದಲ್ಲಿಯೇ ನರಕ ಯಾತನೆಯನ್ನುಂಟುಮಾಡುವುದು ಅದಾವ ಧರ್ಮವೋ ನಾನು ಕಾಣೆನು.

ಈ ಮದ್ದಿನ ಪ್ರಯೋಗದಿಂದ ಸಂಭವಿಸಿರುವ ಅನರ್ಥಪರಂಪರೆಯಲ್ಲಿ ಕೆಲವನ್ನು ಇಲ್ಲಿ ತಿಳಿಸುವೆನು. ಮದ್ದಿನಿಂದ ಗಂಡಸಿಗೆ ಹೊಟ್ಟೆಯ ನೋವು, ಹುಚ್ಚು, ತೊನ್ನು, ಅಜೀರ್ಣ, ನಿತ್ಯಜ್ವರ, ಕ್ಷಯ, ಅಪಸ್ಮಾರ (ಮೂರ್ಛೆ) ಮೊದಲಾದ ರೋಗಗಳು ಒಂದೇ ಕಾಲದಲ್ಲಿಯೇ ಒದಗಿ ಬಂದು ಗಂಡಸು ಸಾಯದೆಯೂ ಬದುಕದೆಯೂ ಪಡಬಾರದ ಸಂಕಟವನ್ನು ಅನುಭವಿಸುತ್ತಾ

ನರಳುವನು. ಈ ನೋಟವನ್ನು ನೋಡುವುದು ಮಹಾಭಯಂಕರವು. ಅನೇಕರು ಮದ್ದಿನ ಪ್ರಯೋಗದಿಂದ ಕಿವುಡರಾಗಿಯೂ, ಮೂಕರಾಗಿಯೂ, ಬೆಪ್ಪಾಗಿಯೂ, ಶೂನ್ಯ ಸ್ವಭಾವವುಳ್ಳವರಾಗಿಯೂ, ಬದುಕಿದ್ದರೂ ಹೆಣ ದಂತಾಗುವರು; ಇನ್ನೂ ಅನೇಕರು ನಪುಂಸಕರಾಗಿ ಹೋಗಿರುವರು.

ಹೆಂಗುಸರು ತಮಗೆ ತಿಳಿಯದ ದೋಷದಿಂದ ಇತರರ ಮಾತ ಕೇಳಿ ಗಂಡನಿಗೆ ಒಳ್ಳೆಯದನ್ನು ಮಾಡುವುದಕ್ಕೆ ಹೋಗಿ ಅವನನ್ನು ಕೊಂದು ಬಿಡುವರು. ಇದಕ್ಕೆ ಸ್ವಾರ್ಥಪರಾಯಣರಾದ ದುಷ್ಟಜನರ ಸಹವಾಸವೇ ಮೂಲಕಾರಣವು ತಾನು ಹೇಳಿದಂತೆ ಗಂಡನಾದವನು ಕೇಳಿಕೊಂಡಿದ್ದರೆ, ತನಗೆ ಸಂತೋಷವೆಂದು ತಿಳಿದು ಅದಕ್ಕೆ ಅನುಗುಣವಾಗಿಯೇ ಹೆಂಡಿತಿಯು ಕೆಲಸಮಾಡುವಳು. ಫಲವು ವಿಪರೀತವಾಗಿ ಪರಿಣಮಿಸಲು, ಆ ಹೆಂಗುಸು ಮರಣಾವಧಿಯಾಗಿ ಸಂಕಟಕ್ಕೆ ಗುರಿಯಾಗುವಳು ನೀಚಳಾದ ಹೆಂಗುಸು ಇಂತಹ ಸರ್ವನಾಶಕರವಾದ ನೀಚ ಕೆಲಸದಲ್ಲಿ ಮುಂದುವರಿಯುವಳೇ ಹೊರ ತು, ಗುಣವತಿಯಾದವಳು ಎಂದಿಗೂ ಇಂತಹ ಕೆಲಸವನ್ನು ಮಾಡಲು ಇಷ್ಟ ಪಡುವುದೇ ಇಲ್ಲ. ಇದಂತಿರಲಿ.

ನಾನು ಆವ ರೀತಿಯಲ್ಲಿ ವಶೀಕಾರವಿದ್ಯೆಯನ್ನು ಸಂಪಾದಿಸಿ ಪತಿ ಯನ್ನು ಸೇವಿಸಿಕೊಂಡು ಇರುತ್ತಿರುವೆನೋ ಅದನ್ನು ನಿನಗೆ ತಿಳಿಸುವೆನು, ಕೇಳು

ನಾನು ಕಾಮ, ಕ್ರೋಧ, ಅಹಂಕಾರಗಳನ್ನು ತ್ಯಾಗಮಾಡಿ ಪತಿ ಯನ್ನು ಏಕಭಾವದಿಂದ ಸೇವಿಸುತ್ತಿರುವೆನು. ನಾನು ಅಸೂಯೆಯನ್ನೂ, ಮಾನಾಭಿಮಾನಗಳನ್ನೂ ವರ್ಜಿಸಿ ನನ್ನ ಸವತಿಯರನ್ನು ನಿಷ್ಕಲ್ಮಷವಾದ ಹೃದಯದಿಂದ ಪ್ರೀತಿಸುತ್ತಿರುವೆನು. ಆವ ಪ್ರಕಾರದಿಂದಲೇ ಆಗಲಿ, ಪತಿಯ ಮನಸ್ಸಿನಂತೆ ಅನುವರ್ತಿಸಿಕೊಂಡಿರುವುದೇ ನನ್ನ ಕೆಲಸವಾಗಿರುವುದು.

ಪತಿಯು ಬಯ್ಯುವನೋ ಏನೋ, ಹೊಡೆಯುವನೋ ಏನೋ, ದುಃಖಿತನಾಗುವನೋ ಏನೋ, ಕೆಟ್ಟ ದೃಷ್ಟಿಯಿಂದ ನೋಡುವನೋ ಏನೋ, ಭೋಜನದಲ್ಲಿ ಅತೃಪ್ತಿಯನ್ನು ತೋರಿಸುವನೋ ಏನೋ, ಕೋಪದಿಂದ ಹುಬ್ಬು ಗಂಟಿಕ್ಕಿಕೊಳ್ಳುವನೋ ಏನೋ, ಮಾತನಾಡದಿರುವನೋ ಏನೋ, ಎಂದು ಭಯಭಕ್ತಿಗಳಿಂದ ಜಾಗರೂಕೆಯಾಗಿ ನಿತ್ಯವೂ ಪತಿಯ ಸೇವೆ ಯನ್ನು ಮಾಡುತ್ತಿರುವೆನು.

ಪರಪುರುಷನಾದವನು ದೇವತೆಯಾಗಲಿ, ಗಂಧರ್ವನಾಗಲಿ, ಮನ್ಮಥನೇ ಆಗಲಿ, ಮನುಷ್ಯನಾಗಲಿ, ಸರ್ವಾಲಂಕಾರ ಭೂಷಿತನಾದ ಯುವಕನೇ ಆಗಲಿ, ವಿದ್ಯಾವಂತನೇ ಆಗಲಿ, ಚಮತ್ಕಾರಿಯೇ ಆಗಲಿ, ಹಣಗಾರನೇ ಆಗಲಿ, ಪರಮ ಸುಂದರನೇ ಆಗಲಿ, ಅಂತಹವನು ನನಗೆ ಅಪೂಜ್ಯನು, ಅಸ್ಪೃಶ್ಯನು, ಅಸ್ಪೃಹಣೀಯನು.

ಗಂಡನು ಭೋಜನ ಮಾಡದೆ ನಾನು ಭೋಜನ ಮಾಡುವಳಲ್ಲ, ಆತನು ಮಲಗದೆ ನಾನು ಮಲಗುವಳಲ್ಲ, ಆತನು ನಿದ್ರೆ ಹೋಗದೆ, ನಾನು ನಿದ್ದೆಹೋಗುವಳಲ್ಲ. ಬಲುಮಾತಿನಿಂದೇನು ? ಪತಿಯ ಪೋಷ್ಯವರ್ಗದವರೆಲ್ಲರೂ ಭೋಜನ ಮಾಡದೆ ನಾನು ಭೋಜನ ಮಾಡತಕ್ಕವಳಲ್ಲ, ಅವರೆಲ್ಲರೂ ತಮ್ಮತಮ್ಮ ಎಡೆಗಳಲ್ಲಿ ಮಲಗಿ ನಿದ್ರಿಸದೆ, ನಾನು ಮಲಗಿ ನಿದ್ರಿಸುವವಳಲ್ಲ.

ಪತಿಯಾದವನು ಹೊರಗಣಿಂದ ಮನೆಗೆ ಬಂದೊಡನೆಯೇ ನಾನು ಪ್ರತ್ಯುತ್ಥಾನಾದಿಗಳನ್ನು ಮಾಡಿ ಕ್ಲೇಶವನ್ನು ಹೋಗಲಾಡಿಸುವುದರ ಮೂಲಕವಾಗಿ ಆತನಿಗೆ ಸರ್ವಪ್ರಕಾರದಲ್ಲಿಯೂ ಸುಖವನ್ನೇ ಉಂಟುಮಾಡುವೆನು. ಮನೆಯಲ್ಲಿ ಸ್ವಾಮಿಯು ತಂದು ಹಾಕಿದ ಪದಾರ್ಥಗಳನ್ನು ಪೋಲುಮಾಡದೆ ಒಪ್ಪವಾಗಿಟ್ಟುಕೊಂಡಿರುವೆನು ಕೆಟ್ಟು ಹೋಗದ ಪದಾರ್ಥಗಳನ್ನೇ ಅಟ್ಟು ಕಾಲಕಾಲಕ್ಕೆ ಸರಿಯಾಗಿ ಹಿತವಾಗಿರುವಂತೆ ಪತಿಗೆ ಭೋಜನ ಮಾಡಿಸುವೆನು. ಆವ ಪದಾರ್ಥದಲ್ಲಿಯೂ ಕೊಳೆ ಸೇರದಂತೆ ಎಚ್ಚರಿಕೆಯಿಂದ ನಿತ್ಯವೂ ನೋಡಿಕೊಳ್ಳುತ್ತಿರುವೆನು.

ಸಂಪತ್ತಿನಲ್ಲಾಗಲಿ, ವಿಪತ್ತಿನಲ್ಲಾಗಲಿ ಗಂಡನಿದಿರಿಗೆ ನಿಂತು ಕರ್ಣಕಠೋರವಾದ ಮಾತನ್ನು ನಾನೆಂದಿಗೂ ಆಡಿದವಳೇ ಅಲ್ಲ ಕೆಟ್ಟ ಹೆಂಗುಸರ ಸಹವಾಸದಲ್ಲಿ ನಾನು ಒಂದು ಕ್ಷಣಕಾಲವಾದರೂ ಸೇರಿದ್ದವಳಲ್ಲ. ಆವಾಗಲೂ ಬೇಸರಪಡದೆಯೇ ಪತಿಯನ್ನೇ ಧ್ಯಾನಿಸುತ್ತಾ ಆತನಿಗೆ ಅನುಕೂಲವಾದುದನ್ನು ಕಲ್ಪಿಸಿ ಕೊಟ್ಟು ಆತನಿಂದ ಹೊರಡುವುದೇನೆಂಬುದನ್ನೇ ನಿರೀಕ್ಷಿಸಿಕೊಂಡಿರುತ್ತಿರುವೆನು.

ಗಂಡನಿಗೆ ಸಂತೋಷವಾಗುವುದೆಂದು ತಿಳಿದು ಬಂದರೇ ಹೊರತು, ನಾನು ಮತ್ತಾವಾಗಲೂ ನಗುವುದಿಲ್ಲ, ಹಾಸ್ಯಮಾಡುವುದು ಮೊದಲೇ ಇಲ್ಲ. ನಾನಾದರೋ ತಲೆವಾಗಿಲಲ್ಲಾಗಲಿ, ಕಿಟಕಿಗಳಲ್ಲಾಗಲಿ ಅಲಂಕಾರಮಾಡಿಕೊಂಡು ನಿಂತ ಪ್ರಾಣಿಯೇ ಅಲ್ಲ. ಕೆಲಸವಿಲ್ಲದೆ ಮನೆಯ ತಲೆವಾಗಿಲ

ಹೊಸಲನ್ನೂ ದಾಟಿ ಅರಿಯೆ. ನಾನು ಕಾಲಾಕಾಲವನ್ನರಿಯದೆಯೇ ಅಡೋ ಡನೆಯೂ ಗೋಪ್ಯವಾಗಿ ಮಾತನಾಡತಕ್ಕವಳಲ್ಲ. ನಾನೊಬ್ಬಳೇ ನಿರ್ಜನ ವಾದ ಪ್ರದೇಶಗಳಲ್ಲಿ ಕಾಲಿಟ್ಟು ಸಂಚರಿಸುವುದನ್ನು ಹುಟ್ಟಿದಂದಿನಿಂದಲೂ ಅಭ್ಯಾಸಕ್ಕೆ ತಂದುಕೊಂಡಿಲ್ಲ

ಕೃತ್ರಿಮವಾದ ಸಂಭಾಷಣೆಯು ನನ್ನ ಹತ್ತಿರಕ್ಕೆ ಬರಕೂಡದು. ದುಃಖದಲ್ಲಿಯೂ ನನ್ನ ಮುಖವು ಕಂಗೆಡಲಾರದು. ನಾನು ಅವಾಗಲೂ ಇಂದ್ರಿಯ ವ್ಯಾಪಾರಗಳಿಗೆ ಪರಾಧೀನೆಯಾಗಿ ಕೆಲಸ ಮಾಡುವುದಿಲ್ಲ. ಸಖಿ, ದ್ರೌಪದಿ! ನಾನು ಈ ರೀತಿಯಾದ ವ್ರತವೊಂದನ್ನು ಕೈಗೊಂಡು ಪತಿ ಯನ್ನು ಸೇವಿಸುತ್ತಿರುವೆನು ನಾನು ನನ್ನ ಸ್ವಾಮಿಯನ್ನು ಬಿಟ್ಟು ಅರೆ ಗಳಿಗೆಯಾದರೂ ಬೇರೆಯಾಗಿರಲಾರೆನು ಭರ್ತನು ಕಾರಣಾಂತರದಿಂದ ಪರ ದೇಶಕ್ಕೆ ತೆರಳುವಾಗ ನನ್ನ ಬರುವಿಕೆಯುದಲ್ಲಿ ಆತನು ಅಸಮ್ಮತಿಯನ್ನು ತೋರಿಸದಿದ್ದಲ್ಲಿ, ನಾನೂ ಆತನ ಸೇವೆಗಾಗಿ ತೆರಳುವೆನು ಸ್ವಾಮಿಯು ಪ್ರವಾಸ ವ್ರತವನ್ನು ಧಾರಣಮಾಡುವುದಾದರೆ, ನಾನು ಕೂಡ ವ್ರತವನ್ನು ಕೈಕೊಂಡು ಗಂಧ ಮಾಲ್ಯ ತಾಂಬೂಲಾದಿ ಭೋಗ್ಯವಸ್ತುಗಳನ್ನು ಮುಟ್ಟೆನು ಸ್ವಾಮಿಯು ಅವುದನ್ನು ತಿನ್ನುವುದಿಲ್ಲವೋ, ಅವುದನ್ನು ಪಾನ ಮಾಡುವುದಿಲ್ಲವೋ, ಅವುದನ್ನು ವ್ಯವಹರಿಸುವುದಿಲ್ಲವೋ, ನಾನು ಅವೆಲ್ಲ ವನ್ನೂ ವಿಷವೆಂದು ತಿಳಿದು ವರ್ಜಿಸುವೆನು ಪತಿಯ ಸಂತೋಷಕ್ಕಾಗಿ, ನಾನು ಆತ್ಮಸುಖನೆಲ್ಲವನ್ನೂ ತ್ಯಾಗಮಾಡಿ ಆತನ ಚರಣಾರವಿಂದದಲ್ಲಿ ಅಕ್ರೀತದಾಸಿಯಾಗಿ ಕಾದುಬಿದ್ದಿರುವೆನು"

ಸರಳೆಯು ಈ ಕಥೆಯನ್ನು ಹೀಗೆ ಹೇಳಿ ಮುಗಿಸಿದ ಬಳಿಕ ಸವತಿ ಯನ್ನು ಕುರಿತು,—"ಅಕ್ಕ, ತರಳೆ! ರುಕ್ಮಿಣಿಯು ದ್ರೌಪದಿಗೆ ಮಾಡಿದ ಸದುಪದೇಶವನ್ನು ಕೇಳಿದೆಯಾ? ಅದರಂತೆ ನೀನೂ ನಡೆವುದಾದರೆ, ನಿನ್ನ ಪತಿಯು ನಿಜವಾಗಿಯೂ ನಿನ್ನ ವಶದಲ್ಲಿಯೇ ಇರುವನಲ್ಲದೆ, ಅವಾಗಲೂ ನಿನ್ನನ್ನು ಪ್ರೀತಿಸುತ್ತಲೇ ಇರುವನು ಇದನ್ನು ಬಿಟ್ಟು ಮನ ಹಾಳು ಹೆಂ ಗುಸರ ಮಾತ ಕೇಳಿಕೊಂಡು ಗಂಡಸಿಗೆ ವಿಷ ಹಾಕಿ ಕೊಲ್ಲುವುದಕ್ಕೆ ಮುಂದು ವರಿದು ಬಂದೆಯಲ್ಲಾ! ಮಂತ್ರೌಷಧಗಳಿಂದ ಎಂದೆಂದಿಗೂ ಕೈಸೇರಲಾ ರನು. ವಿವೇಕವಿಲ್ಲದ ಹೆಂಗುಸರು ಇದನ್ನು ಎಂದೆಂದಿಗೂ ಜ್ಞಾಪಕದಲ್ಲಿಟ್ಟ ರತಕ್ಕುದು. ತರಳೆ! ಇಂದಿಗೆ ಆಯಿತು. ಮುಂದಾದರೂ ಮನೆಮುರಕರ

ಮಾತನ್ನು ಕೇಳಿಕೊಂಡು ನಿನ್ನ ಅನ್ನ ತಿನ್ನುವ ಬಾಯಿಯಲ್ಲಿ ಮಣ್ಣನ್ನು ತೂರಿಕೊಳ್ಳಬೇಡ. ನಾನು ನಿನ್ನ ಗಂಡನನ್ನೇ ನಂಬಿಕೊಂಡಿರುವುದರಿಂದ, ನನ್ನ ಬಾಯಿಗೂ ಮಣ್ಣನ್ನು ತೂರಬೇಡ. ನಾನು ನಿನ್ನ ಅಡಿದಾವರೆಗಳಿಗೆರಗಿ ಬೇಡಿಕೊಳ್ಳುವೆನು. ತಾಯಿ, ತರಳಕುಮಾರಿ! ನನಗೆ ಮಾಂಗಲ್ಯ ಬಿಕ್ಷೆಯನ್ನು ಕೊಡು, ಸೆರಗೊಡ್ಡಿ ನಿನ್ನನ್ನು ಅಂಗಲಾಚಿ ಬೇಡಿಕೊಳ್ಳುವೆನು. ಅಕ್ಕ ! ಅತಿ ಪ್ರಯಾಸದಿಂದ ಅನುಕೂಲನಾದ ಗಂಡನನ್ನು ಪಡೆದಿರುವೆವು. ಆತನನ್ನು ಕಣ್ಣುಗಳಲ್ಲಿಟ್ಟು ಕಾಪಿಟ್ಟುಕೊಂಡರೆ ನಮ್ಮ ಜನ್ಮವೂ ಸಾರ್ಥಕವಾದೀತು ಇತರರ ಮಾತನ್ನು ಕೇಳಿಕೊಂಡು ಆತನ ಬಾಳಿಗೆ ಕುಂದುಕೊರತೆಯನ್ನುಂಟುಮಾಡಿ ನಾವು ವಿಧವೆಯರಾಗಿ ಕಾಗೆಯಂತೆ ಬಹುಕಾಲವಿದ್ದರೆ ತಾನೇ ಸಾಧಿಸಿಕೊಂಡುದೇನು ? ಬಳಿಕ ನಮಗೆ ಏಳೇಳು ಜನ್ಮಕ್ಕೂ ಸದ್ಗತಿಯೆಂಬುದೇ ಇಲ್ಲದಂತಾಗುವುದು ಅಕ್ಕ ! ನೀನು ಇಷ್ಟು ತಿಳಿದವಳಾದರೂ, ಈ ಮುಂದೆ ಬರುವ ಅನರ್ಥವನ್ನು ಮುಟ್ಟಿಗೆ ತಿಳಿಯದೇ ಹೋದುದಕ್ಕಾಗಿ ಎಷ್ಟು ವ್ಯಸನಪಟ್ಟುಕೊಂಡರೂ ಸಾಲದುದಾಗಿದೆ ನಾನು ಈ ದಿನ ಬಾರದೇ ಹೋಗಿದ್ದರೆ, ಇಷ್ಟು ಹೊತ್ತಿನೊಳಗಾಗಿ ಅನರ್ಥಪರಂಪರೆಗಳು ನಡೆದು ಹೋಗಿಬಿಡುತ್ತಿದ್ದುವು ನನ್ನ ಸೌಭಾಗ್ಯದ ದೇವತೆಯೇ ಈ ದಿನ ನನ್ನನ್ನು ನಿನ್ನಲ್ಲಿಗೆ ಕರೆತಂದು ಬಿಟ್ಟಳು ಇನ್ನು ಮೇಲಾದರೂ ಇಂತಹ ದುರ್ಬುದ್ಧಿಗೆ ಎಡೆಗೊಡದೆ ಪತಿಯನ್ನೇ ಪ್ರತ್ಯಕ್ಷವಾದ ಪರದೇವತೆಯೆಂದು ತಿಳಿದು ಸೇವಿಸುವುದಾದರೆ ಉಭಯ ಕುಲಕ್ಕೂ ಕೀರ್ತಿಯುಂಟಾಗಿ, ನಮಗೂ ಇಹಪರಗಳಲ್ಲಿ ಶಾಶ್ವತವಾದ ಸುಖಗಳುಂಟಾಗುವುವು ಇಷ್ಟರ ಮಟ್ಟಿಗೆ ನೀನು ನಡೆಯಿಸಿಕೊಡಬೇಕೆಂಬುದೇ ನನ್ನ ಕೋರಿಕೆ "

ಸರಳಕುಮಾರಿಯು ಹೀಗೆ ಹೇಳಿದ ಬಳಿಕ ಸವತಿಯ ಕಾಲುಗಳನ್ನು ತನ್ನ ಕಣ್ಣೀರಿನಿಂದ ತೊಳೆದಳು ತರಳಕುಮಾರಿಯು ದಿಕ್ಕು ತೋರದವಳಾಗಿ ತಲೆಯನ್ನು ಬಗ್ಗಿಸಿಕೊಂಡು ಕಂಬನಿಗರೆಯುತ್ತಾ ಕುಳಿತಿದ್ದಳು. ಇದನ್ನು ನೋಡಿ ಸರಳೆಯು,—"ಅಕ್ಕ, ಸುಮ್ಮನೇ ಅಳುವುದರಿಂದ ಆಗುವುದೇನು ? ಅವುದನ್ನೂ ಕೆಲಸಮಾಡಿ ತೋರಿಸಬೇಕೇ ಹೊರತು ಅತ್ತು ಪ್ರಯೋಜನವಿಲ್ಲ," ಎಂದು ಹೇಳಿದುದನ್ನು ಕೇಳಿ ಮನಕರಗಿದ ತರಳಕುಮಾರಿಯು,—"ತಂಗ ! ನೀನು ಹೇಳಿದ ಮಾತೆಲ್ಲವೂ ಸತ್ಯವಾದುದು. ನಾನಾದರೋ ಹಿಂದೆ ಮುಂದೆ ನೋಡದೆಯೇ ಕೆಟ್ಟ ಕೆಲಸದಲ್ಲಿ ಕಾಲಿಟ್ಟೆನು.

ಇದು ನನ್ನ ದೊಡ್ಡ ತಪ್ಪೇ ಸರಿ. ಕಳೆದುದು ಕಳೆದು ಹೋಗಲಿ, ಅದನ್ನು ಎತ್ತಿ ಆಡಿಕೊಳ್ಳುವುದರಿಂದ ಜೀವಕ್ಕೆ ಸುಖವಿಲ್ಲ. ಸರಳಕುಮಾರಿ, ನನ್ನ ಸೌಭಾಗ್ಯದ ಭಾಗ್ಯದೇವತೆ ! ಮುಂದಕ್ಕೆ ನಾನೆಂದಿಗೂ ಇಂತಹ ಆತ್ಮನಾಶಕವಾದ ದುಷ್ಕಾರ್ಯಗಳನ್ನು ಅಂತರಾತ್ಮಸಾಕ್ಷಿಯಾಗಿಯೂ ಮಾಡುವುದಿಲ್ಲವೆಂದು ನಿನ್ನ ಕಾಲ ಮುಟ್ಟಿ ಪ್ರತಿಜ್ಞೆಮಾಡುವೆನು. ನೀನೇ ನನಗೆ ತಾಯಿ, ತಂದೆ, ಬಂಧು, ಬಳಗ, ಗುರು, ಪರಮಗುರು, ನನಗೆ ವಯಸ್ಸಾಗಿಯೂ ಪ್ರಯೋಜನವಿಲ್ಲದೆಯೇ ಹೋದುದು. ತ್ರಿಮೂರ್ತಿಗಳಿರಾ ! ಅಷ್ಟದಿಕ್ಪಾಲರುಗಳಿರಾ! ಸಮಸ್ತ ತತ್ತ್ವಾಭಿಮಾನಿದೇವತೆಗಳಿರಾ! ನನ್ನ ಪ್ರಾಣೇಶ್ವರಾ ! ನನ್ನ ಮಾಂಗಲ್ಯ ಸಂರಕ್ಷಿಣಿಯಾದ ಹೃದಯೇಶ್ವರಿ, ಸರಳಕುಮಾರಿ! ನೀವೆಲ್ಲರೂ ಸಾಕ್ಷಿಯಾಗಿರಿ. ನಾನು ಮುಂದಣ ಆವ ಕಾಲದಲ್ಲಿಯೂ ಸನ್ಮಾರ್ಗದ ಮೇರೆದಪ್ಪಿ ನಡೆಯತಕ್ಕವಳಲ್ಲ ಸತ್ಯವಿದು, ಸತ್ಯವಿದು, ಸತ್ಯವಿದು. ಸರಳಕುಮಾರಿ ! ನೀನು ನನ್ನ ಮಾತನ್ನು ದೃಢವಾಗಿಯೂ ನಂಬು. ಶ್ರೀ ರುಕ್ಮಿಣೀದೇವಿಯು ಆವ ರೀತಿಯಲ್ಲಿ ಮಹಿಳೆಯರಿಗೆ ಪತಿವ್ರತಾ ಧರ್ಮವನ್ನು ಬೋಧಿಸಿದಳೋ, ನಾನೂ ಅದರಂತೆಯೇ ನಡೆದುಕೊಳ್ಳುವೆನು ನಾನು ಪ್ರತಿನಿತ್ಯದ ಕೆಲಸಗಳಲ್ಲಿಯೂ ರುಕ್ಮಿಣಿಯನ್ನೇ ಆರಾಧ್ಯದೇವತೆಯನ್ನಾಗಿ ಮಾಡಿಕೊಂಡು ಪತಿಯನ್ನು ಏಕಭಾವದಿಂದ ಸೇವಿಸುವೆನು ಅಲ್ಲದೆಯೂ, ಸರಳಕುಮಾರಿ! ನನ್ನ ಅಜ್ಞಾನಾಂಧಕಾರವನ್ನು ದೂರಮಾಡಿ ನನಗೆ ಸದ್ಗತಿಪ್ರದವಾದ ಜ್ಞಾನೋಪದೇಶವನ್ನು ಮಾಡಿದ ನಿನಗೆ ಅನಂತಕಾಲದ ವರೆಗೂ ಮಂಗಳವುಂಟಾಗಲೆಂದು ನಾನು ಮನೋಭೀಷ್ಟದೇವತೆಯ ಚರಣಾರವಿಂದಗಳಲ್ಲಿ ನಿರಂತರವೂ ಭಕ್ತಿಪುಷ್ಪಗಳನ್ನು ಸಮರ್ಪಿಸುತ್ತಿರುವೆನು," ಎಂದು ತ್ರಿಕರಣ ಶುದ್ಧಿಯಿಂದ ಉತ್ತರವಿತ್ತಳು

ಸರಳಕುಮಾರಿಯೂ ತರಳಕುಮಾರಿಯೂ ತಮ್ಮ ತಮ್ಮ ಸೌಭಾಗ್ಯದೇವತೆಯನ್ನು ಪರಿಪರಿಯಾಗಿ ಕೊಂಡಾಡುತ್ತಾ ಅಂದಿನ ದಿನವನ್ನು ವರ್ಣಿಸಲಸದಳವಾದ ಸಂತೋಷದಿಂದ ಕಳೆದರು



# ಇಪ್ಪತ್ತನಾಲ್ಕನೆಯ ಲಂಬಕ.

## ಸು ಖ ಸಂ ಸಾ ರ.

ಸರಳಕುಮಾರಿಯು ಕಾಲವರಿತು ಸರಿಯಾದ ಕ್ಷೇತ್ರದಲ್ಲಿಯೇ ಬೀಜವನ್ನು ನಟ್ಟಳು. ಬೀಜವು ಕಾಲಕ್ರಮದಲ್ಲಿ ಮೊಳೆತು ಫಲಪುಷ್ಪ ಭರಿತವಾದ ಮರವಾಯಿತು ಸರಳೆಯು ಮಾಡಿದ ಪತಿವ್ರತಾ ಧರ್ಮೋಪದೇಶವು ತರಳೆಯ ಹೃದಯದಲ್ಲಿ ಬೇರೂರಿ ಸನ್ಮಾರ್ಗಪ್ರವರ್ತನೆಗೆ ಸಹಾಯವಾಗಿ ಪರಿಣಮಿಸಿತು ತರಳಕುಮಾರಿಯು ಆವಾಗಲೂ ಸರಳಕುಮಾರಿಯ ಸದುಪದೇಶವನ್ನು ಜ್ಞಾಪಕದಲ್ಲಿಟ್ಟು ಸ್ತ್ರೀಧರ್ಮಕ್ಕೆ ಅನುಸಾರವಾಗಿ ಪತಿಯನ್ನು ಸೇವಿಸುತ್ತಾ ಬಂದಳು ತರಳೆಯ ಜ್ಞಾನವು "ಸ್ವಾಮಿಯ ಸುಖವೇ ತನ್ನ ಸುಖವು, ಸ್ವಾಮಿಯ ದುಃಖವೇ ತನ್ನ ದುಃಖವು," ಎಂದು ಭಾವಿಸುವಷ್ಟು ಪರಿಪಕ್ವಸ್ಥಿತಿಯನ್ನು ಹೊದ್ದಿತು

ಸರಳೆಯು ಎಂದಿನಂತೆಯೇ ದೇವಕಾರ್ಯದಲ್ಲಿ ನಿರತೆಯಾಗಿ ಗುರುಹಿರಿಯರನ್ನು ಪರಿಶುದ್ಧವಾದ ಹೃದಯದಿಂದ ಸೇವಿಸುತ್ತಾ ಎಲ್ಲರ ಪ್ರೀತಿ ವಿಶ್ವಾಸಗಳಿಗೂ ಪಾತ್ರವೆನಿಸಿಕೊಂಡು ವಾಸವಾಗಿರುತ್ತಿದ್ದಳು.

ತರಳಕುಮಾರಿಯು ವಿನಯಕುಮಾರನನ್ನು ಮದುವೆಯಾಗಿ ಗಂಡನ ಮನೆಗೆ ಬರುವಾಗ ತಕ್ಕಮಟ್ಟಿಗ ಸ್ತ್ರೀಧನವನ್ನು ತೆಗೆದುಕೊಂಡು ಬಂದಿದ್ದಳು. ಅವಳಿಗೆ ಜ್ಞಾನೋದಯವಾಗುವ ವರೆಗೂ ಆ ಹಣವನ್ನು ಗುಟ್ಟಿನಲ್ಲಿಟ್ಟುಕೊಂಡು ತನ್ನ ಪ್ರಾಣಕ್ಕಿಂತಲೂ ಹೆಚ್ಚಾಗಿ ಕಾಪಿಡುತ್ತಿದ್ದಳು. ಸರಳೆಯ ಉಪದೇಶವಾದ ಮೇಲೆ, ತರಳೆಯು ಹಣವೆಲ್ಲವನ್ನೂ ಪತಿಯ ಪಾದಮೂಲದಲ್ಲಿಟ್ಟು ತನ್ನ ಮಹಾಪರಾಧವನ್ನು ಕ್ಷಮಿಸಬೇಕೆಂದು ಬೇಡಿಕೊಂಡಳು. ವಿನಯನು ತರಳೆಯ ಸ್ವಭಾವದಲ್ಲಿ ಇಂತಹ ಪರಿವರ್ತನೆಯುಂಟಾದುದನ್ನು ನೋಡಿ ಸಂತೋಷಪಟ್ಟುಕೊಂಡು ಆ ಹಣವನ್ನು ಯುಕ್ತವಾದ ವ್ಯಾಪಾರದಲ್ಲಿ ವಿನಿಯೋಗಿಸಿದನು. ವ್ಯಾಪಾರದ ಧರ್ಮವಾದರೋ ಹೀಗಿರುವುದು.—

"ಆವ ವಿಧವಾದ ವ್ಯಾಪಾರವಾದರೂ ಮನುಷ್ಯನಿಗೆ ಆಯಾ ಕಾಲದಲ್ಲಿ ಉಪಯೋಗವುಳ್ಳುದಾಗಿಯೇ ಇರುವುದು. ಆದುದರಿಂದ ವ್ಯಾಪಾರ

ದಲ್ಲಿ ಉಚ್ಚನೀಚಗಳೆಂಬ ಭೇದವನ್ನು ಕಲ್ಪಿಸುವುದು ಅಸಂಗತವು. ಕೆಲವು ವ್ಯಾಪಾರದಿಂದ ಗೌರವವು ಕಿಡುವುದೆಂದೂ, ಕೆಲವು ವ್ಯಾಪಾರದಿಂದ ಗೌರವವು ಹೆಚ್ಚುವುದೆಂದೂ ಕೆಲವರ ಅಭಿಪ್ರಾಯವುಂಟು. ಇದು ಯುಕ್ತಿಯುಕ್ತವಾಗಲಾರದು. ವ್ಯಾಪಾರದಲ್ಲಿ ಉಚ್ಚನೀಚಗಳಿಲ್ಲ ವ್ಯಾಪಾರ ಮಾಡತಕ್ಕವನ ಗುಣಗಳೇ ವ್ಯಾಪಾರದಲ್ಲಿಯೂ ಸೇರಿಕೊಂಡು ಬರುವುವು ಆದುದರಿಂದಲೇ ಅದಕ್ಕೂ ಹೀನತೆಯಾಗಲಿ ಗೌರವವಾಗಲಿ ಉಂಟಾಗುವುದು. ಗೌರವಕ್ಕೆ ಪಾತ್ರವಾದವನು ತನಗೂ ತನ್ನ ವ್ಯಾಪಾರಕ್ಕೂ ಗೌರವವನ್ನುಂಟುಮಾಡಿಕೊಳ್ಳುವನು. ನೀಚರು ವ್ಯಾಪಾರಮಾಡಿ, ವ್ಯಾಪಾರದಲ್ಲಿ ಗೌರವ ಬರಬೇಕೆಂದರೆ ಹೇಗೆ ತಾನೇ ಸಾಧ್ಯವಹುದು ?

ವ್ಯಾಪಾರದಲ್ಲಿ ಅನೇಕ ತತ್ತ್ವಗಳಿರುವುವು ವ್ಯಾಪಾರದಲ್ಲಿ ಮೂಲಧನವಾದರೋ ನಂಬುಗೆಯೊಂದೇ ಆಗಿರುವುದು ಅನೇಕ ಮಹನೀಯರು ಹಣವನ್ನು ಬಂಡವಾಳವಾಗಿಟ್ಟುಕೊಳ್ಳದೆಯೇ ನಂಬುಗೆಯೊಂದರಿಂದಲೇ ದೊಡ್ಡ ದೊಡ್ಡ ವ್ಯಾಪಾರಗಳನ್ನು ಮಾಡಿ ಗಣ್ಯರಾಗಿರುವರು. ವ್ಯಾಪಾರದಲ್ಲಿ ಮೋಸಮಾಡಿ ಅನೇಕರು ಬದುಕಿರುವರೆಂದು ಬಲು ಜನರ ಅಭಿಪ್ರಾಯವಿದ್ದಿರಬಹುದು. ಅಧರ್ಮವು ಕೆಲವು ವೇಳೆ ಜಯಿಸುವುದು, ಆದರೆ ಎಲ್ಲಾ ಕಾಲಗಳಲ್ಲಿಯೂ ಅಧರ್ಮಕ್ಕೇ ಜಯವೆಂದು ನಂಬಿಕೊಂಡು ಕೆಲಸಮಾಡುವುದು ಅಪಾಯಕರವು ಅಧರ್ಮದಿಂದ ಸಂಪಾದಿಸಿದ ಹಣವು ಬಹುಕಾಲ ನಿಲ್ಲಲಾರದು ಅದು ನಾಶವಾಗುವ ಕಾಲದಲ್ಲಿ ಧರ್ಮದಿಂದ ಸಂಪಾದಿಸಿದುದನ್ನೂ ನಿರ್ಮೂಲ ಮಾಡಿಬಿಡುವುದು ತತ್ತತ್ಕಾಲದ ಸುಖವನ್ನೇ ಬಯಸತಕ್ಕ ಜನರಿಗೆ ಇದರ ಮರ್ಮವು ಗೊತ್ತಾಗಲೊಲ್ಲದು ದೀರ್ಘಕಾಲ ಪರಿಶೀಲಿಸಿ ನೋಡಿದರೆ, ಅಧರ್ಮಸಂಪರ್ಕವಿಲ್ಲದ ಧರ್ಮದಿಂದ ಸಂಪಾದಿಸಿದ ಹಣವೇ ಶಾಶ್ವತವಾಗಿ ನಿಲ್ಲುವುದು. ಇಷ್ಟು ಪರಿಶೀಲಿಸುವಷ್ಟು ತಾಳ್ಮೆಯು ಸಾಮಾನ್ಯ ಜನರಿಗೆಲ್ಲಿಯದು ? ಕಲಿಗಾಲದಲ್ಲಿ ಕಾರ್ಯಕ್ಕೂ ಕಾರಣಕ್ಕೂ ಹೆಚ್ಚಿನ ಕಾಲದ ವ್ಯವಧಾನವಿರುವುದಿಲ್ಲ ನಾವು ಮಾಡುವ ಕೆಟ್ಟ ಕೆಲಸವೇ ಆಗಲಿ, ಒಳ್ಳೆಯ ಕೆಲಸವೇ ಆಗಲಿ, ಕೊಂಚಕಾಲದೊಳಗಾಗಿಯೇ ಫಲಿಸುವುದು; ಆದರೆ ಇಂತಹ ಕಾರ್ಯಕ್ಕೆ ಇಂಥದೇ ಕಾರಣವೆಂದು ತಿಳಿದು ಹೇಳುವಷ್ಟು ಸೂಕ್ಷ್ಮವಾದ ಬುದ್ಧಿಶಕ್ತಿಯನ್ನು ನಾವಿನ್ನೂ ಸಂಪಾದಿಸಿಕೊಂಡಿಲ್ಲ.

ಪರಮಾತ್ಮನು ನ್ಯಾಯಪರನೇ ಅಹುದೆಂದು ಎಲ್ಲರೂ ಒಪ್ಪತಕ್ಕ ವಿಷಯವಾಗಿಯೇ ಇರುವುದು ಆತನು ಅನ್ಯಾಯಕ್ಕೆ ಬಹುದೂರನು. ಅಂತಹ ಪರಮಾತ್ಮನಿಂದ ನಿರ್ಮಿತವಾದ ಪ್ರಪಂಚವು ಪರಸ್ಪರವಾಗಿ ಅವಿರೋಧವಾದ ನಿಯಮಗಳಿಂದ ಬದ್ಧವಾಗಿಯೇ ಇರುವುದು ಒಂದೇ ಬಗೆಯಾದ ನಿಯಮಕ್ಕೆ ಕಟ್ಟುಬಿದ್ದಿರುವ ಪ್ರಪಂಚದಲ್ಲಿ ಜನರು ಮಟ್ಟಿಗೆ ಆವ ಕಟ್ಟಿಗೂ ಒಳಪಡದೆ ಮನಬಂದಂತೆ ಕೆಲಸಮಾಡುವುದನ್ನು ನೋಡಿದರ, ಅದನ್ನು ಗ್ರಂಥದಲ್ಲಿ ವರ್ಣನೆ ಮಾಡುವುದು ನಾಚುಗಗೇಡಾಗಿರುವುದು ಒಂದೊಂದು ವೇಳೆಯಲ್ಲಿ ನಿಯಮದಲ್ಲಿಯೇ ಕುಂದುಂಟಾಗುವುದುಂಟು, ಎಂದ ಮೇಲೆ ಅನಿಯಮದಲ್ಲಿ ಅನುಕೂಲತೆಯುಂಟಾಗುವುದೆಂದು ಹೇಳುವವರ ಮಾತು ಎಷ್ಟರ ಮಟ್ಟಿಗೆ ನಂಬತಕ್ಕುದಾಗಿರುವುದು ?

ಆದುದರಿಂದ ಜನರು ವ್ಯಾಪಾರ ಮಾಡಲಿ, ಮಾಡದಿರಲಿ, ಈ ವ್ಯವಹಾರ ತತ್ತ್ವವನ್ನು ಚೆನ್ನಾಗಿಯೂ ಅರಿತು ನಡೆವುದಾದರೆ ಇಷ್ಟವಾದ ಫಲವು ಕರಗತವಾಗಿಯೇ ಆಗುವುದು. ವಿಚಾರವಿಲ್ಲದ ಮನಬಂದಂತೆ ಕೆಲಸಮಾಡಿ ಅನಿಷ್ಟಫಲವು ಲಭಿಸುವುದಾದರ, ಆ ದೋಷವನ್ನು ವಿಧಿಯ ಮೇಲೆಯೋ, ಪ್ರಾಚೀನ ಕರ್ಮದ ಮೇಲೆಯೋ, ಇಲ್ಲವೆ, ಮತ್ತೊಬ್ಬ ಮನುಷ್ಯನ ಮೇಲೆಯೋ ಒರಗಿಸಿ ಕಡುಪಾಡಿಗೇಡಾಗುವ ಮೂಢರು ಪ್ರಪಂಚಕ್ಕೆ ಕಂಟಕಸ್ವರೂಪರೇ ಸರಿ. ಅಂತಹವರಿಂದ ಪ್ರಪಂಚಕ್ಕೆ ಕಿಂಚಿತ್ತಾದರೂ ಪ್ರಯೋಜನವಿರಲಾರದು ಅಂತಹವರು ಬದುಕಿ ಬಾಳುವುದಕ್ಕಿಂತಲೂ ಸಾಧ್ಯವಾದಷ್ಟು ಬೇಗನೆ ಪರಲೋಕ ಯಾತ್ರೆಗೆ ತೆರಳುವುದೇ ಮೇಲು ಇದು ತ್ರಿಕಾಲದಲ್ಲಿ ಸರಿಹೋಗುವ ಕಾಲಜ್ಞಾನವು ”

ವಿನಯಕುಮಾರನು ಪೂರ್ವಾಪರವನ್ನು ವಿಚಾರಮಾಡದೆ ಕೆಲಸಮಾಡತಕ್ಕವನಾಗಿರಲಿಲ್ಲ. ಆತನು ಆವ ಕೆಲಸ ಮಾಡಬೇಕಾದರೂ ಸಾಧ್ಯಾಸಾಧ್ಯಗಳನ್ನು ಚೆನ್ನಾಗಿಯೂ ಪರಿಶೀಲಿಸಿ ನೋಡುವನು ಅನೇಕ ಲೋಕಾನುಭವಗಳಿಂದ ತನ್ನ ಯೋಗ್ಯತೆಯನ್ನು ಪರೀಕ್ಷಿಸಿ ನೋಡಿಕೊಳ್ಳುವನು ತನ್ನ ಆಲೋಚನೆಗೂ ಲೋಕಾನುಭವಕ್ಕೂ ಸಾಮರಸ್ಯವಿರುವುದಾದರ ಕೆಲಸದಲ್ಲಿ ಕೈಹಾಕುವನು, ಬಳಿಕ ಅದರ ಫಲವನ್ನೂ ಹೊಂದುವನು

ಈ ರೀತಿಯಲ್ಲಿ ವಿನಯನು ತನ್ನ ಹಣವನ್ನು ಕಾಲ ದೇಶಕ್ಕೆ ಅನುಗುಣವಾಗಿ ಉಪಯೋಗಿಸಿ ಕೊಂಚ ಕಾಲವನ್ನು ವಿನೋದಾರ್ಥವಾಗಿಯೇ ಹಣ

ಗಾರನಾದನು. ಹೆಚ್ಚಾಗಿ ಬಂದ ನೀರು ಕೋಡಿಯ ಮೂಲಕವಾಗಿ ಹರಿದು ಹೋದರೆ ಕೆರೆಗೆ ಕ್ಷೇಮವುಂಟಾಗುವಂತೆ, ವಿನಯನು ಹೆಚ್ಚಾಗಿ ಸಂಪಾದಿಸಿದ ಹಣವನ್ನು ಧರ್ಮದಾನದಿಂದ ಸದ್ವಿನಿಯೋಗ ಮಾಡುತ್ತಿದ್ದನು. ಇದರಿಂದ ಆತನ ಹಣವು ಅಕ್ಷಯಪಾತ್ರದಲ್ಲಿದ್ದಂತೆಯೇ ದಿನದಿನಕ್ಕೂ ಹೆಚ್ಚುತ ಬಂದಿತು ಹಣವು ಹೆಚ್ಚಿದ ಹಾಗೆಲ್ಲಾ, ಆತನಿಂದ ಲೋಕಕ್ಕೆ ತುಂಬಾ ಉಪಕಾರವೇರ್ಪಟ್ಟಿತು ಈ ಮಹೋಪಕಾರಕ್ಕೆ ಪ್ರತಿಯಾಗಿ ವಿನಯನಿಗೆ ಲೋಕದಲ್ಲಿ ಗೌರವವೂ ಕೀರ್ತಿಯೂ ಆತ್ಮಸುಖವೂ ಏರ್ಪಟ್ಟು, ಆತನು ಇತರರಿಂದ ನಡೆಯಲಸಾಧ್ಯವಾದ ಸ್ವರ್ಗಭೋಗವನ್ನು ಇಲ್ಲಿಯೇ ಇದ್ದುಕೊಂಡು ಅನುಭವಿಸಲಾರಂಭಿಸಿದನು

ಇಂತಹ ಸಚ್ಚರಿತ್ರನಾದ ಮಹಾಪುರುಷನೆನಿಸಿದ ಶ್ರೀಯುತ ವಿನಯಕುಮಾರ ದೇವನನ್ನು ಶಾಶ್ವತಗೊಳಿಸುವುದಕ್ಕೂ, ಎಷ್ಟು ತುಂಬಿದರೂ ತುಂಬದ ಈ ಹಾಳು ಹೊಟ್ಟೆಗಾಗಿ ನೀಚಾಶಯರ ದೋಷಗಳೆಲ್ಲವನ್ನೂ ಗುಣಗಳನ್ನಾಗಿ ಮಾಡಿಕೊಂಡು ವರ್ಣನೆ ಮಾಡಿದುದರಿಂದುಂಟಾದ ಮಹಾಪಾತಕವನ್ನು ಕಳೆದುಕೊಳ್ಳುವುದಕ್ಕೂ, ನಾವು ಈ ನವನ್ಯಾಸವನ್ನು ಬರೆಯಲು ಮುಂದುವರಿದು ಬಂದೆವು ಈ ಗ್ರಂಥದಲ್ಲಿ ನೀಚನನ್ನು ಸ್ತೋತ್ರ ಮಾಡಿಲ್ಲ, ಅಧರ್ಮಕ್ಕೆ ಜಯವನ್ನು ತೋರಿಸಿಲ್ಲ ಧರ್ಮಜ್ಞನೊಬ್ಬನಿಗೇ ಲೋಕದಲ್ಲಿ ಜಯವುಂಟೆಂಬುದು ಮುಟ್ಟಿಗ ಈ ಗ್ರಂಥದಲ್ಲಿ ಪ್ರತಿಪಾದ್ಯವಾಗಿರುವುದು ಈ ಗ್ರಂಥವನ್ನು ಸಾಮಾನ್ಯವಾಗಿ ಎಲ್ಲರೂ, ವಿಶೇಷವಾಗಿ ಹೆಂಗುಸರೂ, ಅಡಿಗಡಿಗೆ ಓದುತ್ತಲೇ ಇರಬೇಕೆಂದು ಗ್ರಂಥಕರ್ತರ ಆಶಯವು ಇದು ಸ್ತ್ರೀಯರಿಗಾಗಿಯೇ ಬರೆಯಲ್ಪಟ್ಟಿದೆಂದು ಹೇಳಿದರೂ ಬಾಧಕವಿರಲಾರದು ಆದುದರಿಂದ ನಮ್ಮ ಪ್ರಿಯ ಸಹೋದರಿಯರಿರಾ ! ನೀವು ಆವ ಕೆಲಸವಿದ್ದರೂ ಬಿಟ್ಟು ನಮ್ಮ ಈ ಚಿಕ್ಕ ಗ್ರಂಥವನ್ನು ಓದಿ ಸಂತೋಷಪಡುವುದಾದರೆ ನಮ್ಮ ಶ್ರಮವು ಸಾರ್ಥಕವೆನಿಸೀತು

ಲೋಕದಲ್ಲಿ ಒಡವೆಯೆಂದರೆ ಸ್ತ್ರೀಜಾತಿಗೆ ಬಲು ಇಷ್ಟವು. ತಮ್ಮ ಇಷ್ಟವನ್ನು ನೆರವೇರಿಸಿಕೊಳ್ಳುವುದಕ್ಕಾಗಿ ಸ್ತ್ರೀಯರು ಚತುರೋಪಾಯವನ್ನು ಅವಲಂಬಿಸಿ ತಮ್ಮ ತಮ್ಮ ಗಂಡಂದಿರಿಂದ ಬೇಕುಬೇಕಾದ ಆಭರಣಗಳನ್ನು ಪಡೆವರು ಅನುಕೂಲವಿದ್ದಲ್ಲಿ ಹೆಂಗುಸು ಬಯಸಿದುದೆಲ್ಲಾ ನೆರವೇರುವುದು ಅನುಕೂಲವಿಲ್ಲದಿದ್ದಲ್ಲಿ, ಹೆಂಗುಸಿನ ಸಂಕಟವನ್ನೂ ಕಿರುಕುಳ

ವನ್ನೂ ಹೇಳಿ ತೀರದು. ಇಂತಹವರ ಸಂಸಾರವಾದರೋ ನಿಸ್ಸಾರವಾದುದೇ ಸರಿ. ನಾವು ಗಂಡಹೆಂಡಿರಿಗೆ ಸಾರ್ವಕಾಲಿಕವಾದ ಸೌಹಾರ್ದವಿರಬೇಕೆಂದು ಪರ್ಯಾಲೋಚಿಸಿ, ಎಲ್ಲರಿಗೂ,—ಎಂದರೆ, ಭಾಗ್ಯವಂತರಿಗೂ, ಬಡವರಿಗೂ, ಅನುಕೂಲಿಸಲೆಂದು ಅಲ್ಪವಾದ ಬೆಲೆಗೆ ಅಮೂಲ್ಯವಾದ ಆಭರಣವೊಂದನ್ನು ಸಿದ್ಧಪಡಿಸಿರುವೆವು. ಈ ಆಭರಣಕ್ಕೆ "ಕಂಠಾಭರಣ" ಎಂದು ಹೆಸರು ಈ ಕಂಠಾಭರಣವು ಸವೆದುಹೋಗತಕ್ಕುದಲ್ಲ ಅಪಹರಿಸುವುದಕ್ಕೆ ಕಳ್ಳರಿಗೆ ಸಿಕ್ಕತಕ್ಕುದಲ್ಲ. ಇದು ಉಪಯೋಗಿಸಿದಷ್ಟೂ ಉಜ್ಜ್ವಲವಾದೀತೇ ಹೊರತು ಕಳೆಗುಂದತಕ್ಕುದಲ್ಲ. ಇತರಾಭರಣಗಳಂತೆ ಶರೀರವನ್ನು ಚುಚ್ಚಿ ತೊಂದರೆ ಪಡಿಸತಕ್ಕ ಭಾರವಾದ ಒಡವೆಯು ಇದು ಮೊದಲೇ ಅಲ್ಲ ಇಂತಹ ಅಸಾಧಾರಣವಾದ ಆಭರಣವನ್ನು ನಾವು ಬಹುಕಾಲದ ವರೆಗೂ ಪರಿಶೀಲನೆ ಮಾಡಿ ಸ್ತ್ರೀಯರಿಗಾಗಿಯೇ ಸಿದ್ಧಪಡಿಸಿರುವೆವು ನಮ್ಮ ಆಭರಣದ ಮಹಿಮೆಯನ್ನು ನಾವೇ ತಿಳಿಯಪಡಿಸುವುದು ಅಸಮಂಜಸವಾದರೂ, ಇಲ್ಲಿ ಕೊಂಚಮಟ್ಟಿಗಾದರೂ ತಿಳಿಯಪಡಿಸಲು ಬಾಧ್ಯಪಟ್ಟಿರುವೆವು ಈ ಕಂಠಾಭರಣದಲ್ಲಿ ಮಂತ್ರಶಕ್ತಿ, ತಂತ್ರಶಕ್ತಿ, ಔಷಧಶಕ್ತಿ, ಯೋಗಶಕ್ತಿಮುಂತಾದ ಮಹಾ ಮಹಾ ಶಕ್ತಿಗಳು ಅಡಗಿರುವುವು ಇದು ಸ್ತ್ರೀಯರಿಗೆ ತಮ್ಮ ತಮ್ಮ ಗಂಡಂದಿರನ್ನು ಸ್ವಾಧೀನದಲ್ಲಿಟ್ಟುಕೊಳ್ಳುವ ವಶೀಕಾರವಿದ್ಯೆ, ಸಂಸಾರದಲ್ಲಿನ ಸಾರವನ್ನೆಲ್ಲಾ ಸಂಗ್ರಹಮಾಡಿ ತೆರತೆರನಾಗಿ ಶೋಧಿಸಿ ನಿರ್ದುಷ್ಟವಾದ ಸಾರವುಳಿವ ವರೆಗೂ ಮಹಾ ಪುಟಗಳನ್ನು ಹಾಕಿ ಸ್ಥಿರವಾಗಿ ನಿಂತುದನ್ನು ಕೈಯಿಂದ ನಿರ್ಮಾಣ ಮಾಡಿದರೆ ಕೆಟ್ಟುಹೋದೀತೆಂಬ ಭಯದಿಂದ ಮನಸ್ಸಿನಿಂದಲೇ ನಿರ್ಮಾಣ ಮಾಡಿ ಈ ಕಂಠಾಭರಣವನ್ನು ವ್ಯಾಪಾರಕ್ಕೆ ಸಿದ್ಧಪಡಿಸಿರುವೆವು ಸ್ತ್ರೀಯರು ಈ ಕಂಠಾಭರಣವನ್ನು ತಂದುಕೊಂಡಂತೆ ತಮ್ಮ ತಮ್ಮ ಪತಿಯನ್ನು ನಿರ್ಬಂಧಪಡಿಸಿದರೂ, ಅವರು ಪತಿಯನ್ನು ಹಿಂಸಮಾಡಿದ ಪಾಪಕ್ಕೆ ಎಂದಿಗೂ ಗುರಿಯಾಗಲಾರರು ಇದರಲ್ಲಿ ನಮ್ಮದೊಂದು ಬಿನ್ನಹವುಂಟು ನಮ್ಮ ಕಂಠಾಭರಣವನ್ನು ಒಂದು ಸಲ ಧರಿಸಿದ ಮೇಲೆ ಆವಾಗಲೂ ಧರಿಸಿಯೇ ಇರಬೇಕು ಆಗಲೇ ಇದರ ಫಲವು ಗೋಚರಕ್ಕೆ ಬಂದೀತು. ತೆಗೆಯುವುದೂ ಹಾಕುವುದೂ ಮಾಡಿದರೆ ಇದರ ಶಕ್ತಿಯು ಕಡಮೆಯಾಗುವುದರಲ್ಲಿ ಸಂಶಯವಿಲ್ಲ ಅನಂತರದಲ್ಲಿ ನಿಷ್ಫಲವಾದ ಆಭರಣವನ್ನು ಮೋಸದಿಂದ ತಲೆಗೆ ಕಟ್ಟಿದರೆಂದು ಗ್ರಂಥಕಾರರನ್ನು ಮುಟ್ಟಿಗೆ

ನಿಂದಿಸಲಾಗದು. ವೈದ್ಯನು ಹೇಳಿದ ಅನುಪಾನಗಳಿಂದ ಆತನ ಔಷಧವು ಹೇಗೆ ಫಲಕಾರಿಯಾಗುವುದೋ, ಹಾಗೆಯೇ ನಾವು ಹೇಳುವ ಧಾರಣರೀತಿ ಯಿಂದಲೇ ನಮ್ಮ ಆಭರಣವೂ ಅನಂತಫಲದಾಯಕವಾಗುವುದು. ಇದರಲ್ಲಿ ಆರಿಗೂ ಸಂಶಯಬೇಡ. " ಸಂಶಯಾತ್ಮಾ ವಿನಶ್ಯತಿ " ಎಂದು ಬಲ್ಲವರು ನುಡಿದಿರುವರು. ಬಹುಮಾತಿನಿಂದೇನು? ಪ್ರಪಂಚಕ್ಕೆಲ್ಲಾ ಅನುಕೂಲಮಾ ಡುವಷ್ಟು ಶಕ್ತಿ ನಮ್ಮಲ್ಲಿಲ್ಲದುದರಿಂದ ಯೋಗ್ಯತಾನುಗುಣವಾಗಿ ಕೊಂಚ ಮಟ್ಟಿಗೆ ಈ ಆಭರಣವನ್ನು ಸಿದ್ಧಪಡಿಸಿರುವೆವು. ಕಾಲಹರಣ ಮಾಡದೆ ಕೂಡಿದಷ್ಟು ಬೇಗನೆ ಮಹನೀಯರಾರಾದರೂ ಈ ಕಂಠಾಭರಣವನ್ನು ತರಿ ಸಿಕೊಳ್ಳುವ ಸುಯೋಗವನ್ನು ಪಡೆವುದಾದರೆ ಉಭಯ ಪಕ್ಷದವರೂ ಧನ್ಯ ರಾಗುವರು, ಫಲವೂ ಅದಕ್ಕನುಸಾರವಾಗಿಯೇ ಇರುವುದು, ಎಂದು ಮಟ್ಟಿಗೆ ತಿಳಿಯಪಡಿಸಿ ನಮ್ಮ ಕಥೆಯ ಶೇಷಭಾಗವನ್ನು ನಮ್ಮ ಪ್ರಿಯ ಪಾಠಕ ಮಹಾಶಯರಿಗೆ ಅರುಹುವೆವು

ವಿನಯಕುಮಾರನು ಕಾಲಕ್ರಮದಲ್ಲಿ ಕೊಬ್ಬಿದ ಹಣಗಾರನಾದನು. ಹಣವು ಹೆಚ್ಚಿದಷ್ಟೂ ಅವನು ತನ್ನ ಪೂರ್ವಾವಸ್ಥೆಯನ್ನು ಮರೆಯದೆ ಮತ್ತಷ್ಟು ನಮ್ರಭಾವವನ್ನು ತಾಳಿದನು. ಈ ಘಟನಾವಳಿಗಳ ಮಧ್ಯದಲ್ಲಿ ವಿನಯನ ತಂಗಿ ಸ್ವರ್ಣಲತೆಯು ದುರ್ದೈವ ವಿಪಾಕದಿಂದ ವಿಧವೆಯಾಗಿ ಅಣ್ಣನ ಮನೆಯಲ್ಲಿಯೇ ವಾಸಮಾಡಲು ಬಂದು ಸೇರಿದಳು ಮನೆಯಲ್ಲಿ ಇಬ್ಬರು ಹೆಂಗುಸರಿದ್ದೊಡನೆಯೇ ಮಹಾ ಭಾರತದ ಯುದ್ಧವು ನಡೆದು ಹೋಗುವುದು. ವಿನಯನ ಸಂಸಾರದಲ್ಲಿಯಾದರೋ ಹೆಂಗುಸರೆಲ್ಲರೂ ಅನೇಕ ರೂಪವನ್ನು ತಾಳಿದ ಒಬ್ಬ ದೇವತೆಯಂತೆ ಅನ್ಯೋನ್ಯಭಾವದಿಂದಿ ರುತ್ತಿದ್ದರು. ಹೀಗಿರುವುದು ಪೂರ್ವಾರ್ಜಿತಪುಣ್ಯವೇ ಸರಿ. ವಿನಯನ ಸಂಸಾರದಲ್ಲಿ ಐಕಮತ್ಯವಿದ್ದುದರಿಂದ ವರ್ಷಗಳು ಕೂಡ ಒಂದು ನಿಮಿಷ ದಂತೆಯೇ ಕಳೆದುಹೋಗುತ್ತಿದ್ದುವು ಆರಿಗೂ ಗೋಚರವಾಗದಂತೆ ವರ್ಷ ಗಳ ಮೇಲೆ ವರ್ಷಗಳು ಕಳೆದುಹೋದುವು, ಆದರೂ ಸರಳೆಗೆ ಸಂತಾನವಾ ಗಲೇ ಇಲ್ಲ ಸರಳೆಯು ಮಕ್ಕಳಾಗಲಿಲ್ಲವೆಂದು ಒಂದುದಿನವಾದರೂ ಮನ ಸ್ಸಿಗೆ ಕಿರಿಕಿರಿಯನ್ನು ಹಚ್ಚಿಕೊಂಡು ಕೊರಗಿದವಳಲ್ಲ. ತರಳೆಗೆ ಮೇಲೆ ಮೇಲೆ ಮಕ್ಕಳಾಗುತಿದ್ದುದನ್ನು ನೋಡಿ ಸರಳೆಯು ಅವುಗಳನ್ನೇ ತನ್ನ ಮಕ್ಕಳೆಂದು ಭಾವಿಸಿಕೊಂಡು ಆನಂದದಿಂದ ಕಾಲವನ್ನು ಕಳೆಯುತ್ತಿದ್ದಳು.

ಆರ ಮಕ್ಕಳಾದರೇನು ? ಮಕ್ಕಳು ಎಲ್ಲರಿಗೂ ಆದರಣೀಯವಾದುವುಗಳೇ ಸರಿ. ತನಗೆ ಮಕ್ಕಳಾದ ಮಾತ್ರಕ್ಕೆ ಬಂದ ಭಾಗ್ಯವೇನು? ಇತರರ ಮಕ್ಕಳು ಮಕ್ಕಳಲ್ಲವೇ ? ನಾವು ಮಕ್ಕಳಲ್ಲಿ ತಾರತಮ್ಯವನ್ನು ಎಣಿಸುವುದು ತಪ್ಪು. ಮಕ್ಕಳ ನಿರ್ದುಷ್ಟವಾದ ಹೃದಯವೂ, ಮೋಸವನ್ನರಿಯದ ಮನೋಭಾವವೂ, ಸರಳತೆಯೂ, ಮನೋಮೋಹಕರವಾದ ಬಾಲಲೀಲೆಯೂ, ಮುಖದ ಪ್ರಶಾಂತತೆಯೂ, ದೇಹದ ಮಾರ್ದವವೂ ಎಂತಹ ಕಟುಕರಾದರೂ ಅವರ ಹೃದಯವನ್ನು ದಯಾರಸದಿಂದ ತೋಯಿಸಿಬಿಡುವುವು.

* * * * *

ಫಾಲ್ಗುನ ಮಾಸದಲ್ಲಿ ಒಂದು ದಿನ ಸಂಧ್ಯಾಕಾಲವು ಮೆಲ್ಲಮೆಲ್ಲಗೆ ಆವರಿಸಿಕೊಂಡು ಬರುತ್ತಿರುವುದು. ಮನೋಹರವಾದ ಸಂಧ್ಯಾಮಾರುತವು ಮೃದುವಾಗಿ ಬೀಸುತ್ತಿರುವುದು. ಚಂದ್ರನು ಬೆಳ್ದಿಂಗಳೆಂಬ ಮೋಹ ಚೂರ್ಣವನ್ನು ಜನಗಳ ಮೇಲೆ ಬೀರುವುದಕ್ಕೆ ಕತ್ತಲೆಯು ಬರಲೆಂದು ಸಮಯವನ್ನು ನಿರೀಕ್ಷಿಸಿಕೊಂಡಿರುತ್ತಿದ್ದನು. ಇಂತಹ ಸಮಯದಲ್ಲಿ ವಿನಯಕುಮಾರನು ಒಂದು ಕಾಗದವನ್ನು ಕಯ್ಯಲ್ಲಿ ಹಿಡಿದುಕೊಂಡು ಬಂದು ಸರಳೆಯ ಕಿರುಮನೆಯೊಳಗೆ ಪ್ರವೇಶಮಾಡಿದನು. ಆಗ ತಾನೇ ಸರಳೆಯು ಮನೆಯ ಕೆಲಸವೆಲ್ಲವನ್ನೂ ತೀರಿಸಿ ತರಳೆಯ ಮಕ್ಕಳ ಯೋಗಕ್ಷೇಮವನ್ನೂ ವಿಚಾರಿಸಿಕೊಂಡು ಒಂದು ಮಹಾಭಾರತದ ಶಾಂತಿಪರ್ವದಲ್ಲಿ ಒಂದು ಉಪಾಖ್ಯಾನವನ್ನು ಓದಬೇಕೆಂದು ಪುಸ್ತಕವನ್ನು ತೆರೆಯುತ್ತಿದ್ದಳು. ಆಗ ಸರಳೆಯು ವಿನಯನನ್ನು ನೋಡಿ ಮಂದಹಾಸವನ್ನು ತೋರ್ಪಡಿಸುತ್ತಾ ತಟ್ಟನೆ ಎದ್ದು ನಿಂತುಕೊಂಡು ವಿನೋದವಾಗಿ,—"ಇಂದು ಶ್ರೀಕೃಷ್ಣಪರಮಾತ್ಮನು ಅಕಾಲದಲ್ಲಿ ಈ ಲತಾಗೃಹಕ್ಕೆ ಬರಲು ಕಾರಣವೇನೋ ತಿಳಿಯದು," ಎಂದಳು.

ವಿನಯ—(ನಗುತ್ತಾ) ಭಯವೇನೂ ಇಲ್ಲ. ಯಮುನಾನದಿಯ ತೀರದಲ್ಲಿ ರಾಸಕ್ರೀಡೆಯ ಚಿಂತೆ. ನಾವು ಭೈರವೀನದಿಯ ತೀರದಲ್ಲಿರುವೆವು.

ಸರಳೆ—ಹಾಗೆಯೋ! ಹಾಗಾದರ ರಾಧೆಯು ಎಲ್ಲಿಯೋ ಪಲಾಯನವಾದಳೆಂದು ತಿಳಿದು ಅವಳನ್ನು ಹುಡುಕಿಕೊಂಡು ಬಂದಂತಿದೆ. ನಾನು ರಾಧೆಯಲ್ಲ, ಸರಳೆ.

ವಿನಯ—ನನಗೆ ರಾಧೆಯಾದರೇನು, ಅನೂರಾಧೆಯಾದರೇನು? ಸರಳೆಯಾದರೇನು, ತರಳೆಯಾದರೇನು ? ಎಲ್ಲರೂ ಒಂದೇ, ತರಳೆಯು ಸರಳೆಯಾ

ಗಿಯೂ, ಸರಳೆಯು ತರಳೆಯಾಗದೆಯೂ ಇದ್ದರೆ ಸರಿ. ಈಗ ನಾನು ಬಂದ ಕೆಲಸವೇ ಬೇರೆ.

ಸರಳೆ—ಈ ಅಕಾಲದಲ್ಲಿ ಕೆಲಸವೆಂತಹುದು ?

ವಿನಯ—ನಿನ್ನಲ್ಲಿಗೆ ಬರಲು ನನಗೆ ಕಾಲವಾವುದು, ಅಕಾಲವಾವುದು ? ನಾನು ಬಂದುದೇ ಕಾಲವು. ಕಾಲಾಕಾಲಗಳನ್ನು ಕಲ್ಪಿಸಿ ಕೊಂಡಿರುವವರೇ ನಾವು

ಸರಳೆ—ಹಾಗಾದರೆ ಈ ಆಸನದ ಮೇಲೆ ಕುಳಿತುಕೊಳ್ಳೋಣವಾಗಲಿ. ಬಂದ ಕೆಲಸವೇನೆಂದು ನಾನು ಕೇಳಬೇಕಾದ ಆವಶ್ಯಕವೇನೂ ಇರುವುದಿಲ್ಲ. ಶಾಂತಿಪರ್ವದಲ್ಲಿ ಒಂದು ರಸವತ್ತಾದ ಭಾಗವನ್ನು ತೆಗೆದು ಓದುವೆನು, ಕೇಳೋಣವಾಗಲಿ.

ವಿನಯ—ಬಂದ ಕೆಲಸವಾದ ಮೇಲೆ, ನೀನು ಓದುವುದಕ್ಕೂ ನಾನು ಕೇಳುವುದಕ್ಕೂ ಕಾಲವು ಬೇಕಾದಹಾಗಿರುವುದು ಪ್ರಕೃತದಲ್ಲಿ ಜಾನಕೀ ನಾಥನ ಮಗುವಿಗೆ ಅನ್ನ ಪ್ರಾಶನವಂತೆ, ನಾಳೆಯ ಬೆಳಗ್ಗ ಜನರನ್ನು ಕಳು ಹುವರಂತೆ, ಅವರ ಜತೆಯಲ್ಲಿ ನೀನು ಹೊರಡಬೇಕಂತೆ

ಸರಳೆ—ಸರಿ, ಸರಿ, ದೊಡ್ಡ ವಿಷಯವೇ ಸರಿ. ನನ್ನಲ್ಲಿ ಬರುವುದಕ್ಕೆ ಏನಾದರೊಂದು ನೆಪವಿದ್ದೇ ಇರುವುದು. ಸುಮ್ಮನೇ ಬಂದರೆ ಆರಾದರೂ ಪರ್ಯಾಯವಾಗಿ ತಿಳಿದುಕೊಂಡಾರೆಂಬುದನ್ನು ತಪ್ಪಿಸಿಕೊಳ್ಳಲು ಏನೋ ಒಂದು ಉಪಾಯವು. ಇದೆಲ್ಲಾ ಹಾಗಿರಲಿ

ಸರಳೆಯು ಹೀಗೆ ಹೇಳಿ ಓದುವುದಕ್ಕೆ ಮೊದಲು ಮಾಡಿದಳು ವಿನಯನು ಕೇಳುತ್ತಾ ಅಲ್ಲಿಯೇ ಕುಳಿತುಬಿಟ್ಟನು

*   *   *   *   *

ಮರುದಿನ ಬೆಳಗ್ಗ ಶಿವರಾಮಪುರದಿಂದ ಜನರು ಪಾಲ್ಕಿಯನ್ನು ತೆಗೆದುಕೊಂಡು ಬಂದರು ಸರಳೆಯು ಪಾಲ್ಕಿಯನ್ನೇರಿ ತೌರುಮನೆಗೆ ಬಂದು ಬಿಟ್ಟಳು.

ಜೋಡೀದಾರನಾದ ಅಚ್ಯುತಾನಂತ ಗೋವಿಂದಶರ್ಮನು ಸಚ್ಚಿದಾನಂದ ಸರಸ್ವತಿಯನ್ನು ನೋಡಿದಂದಿನಿಂದಲೂ ಹೊಸಬನಾಗಿ ಬಿಟ್ಟಿದ್ದನು. ಅವನ ಸ್ವಭಾವವಾದರೋ ಬಲು ಮಟ್ಟಿಗೆ ಮಾರ್ಪಟ್ಟುಹೋಗಿದ್ದಿತು. ಅಚ್ಯುತಮಹಾಶಯನಿಗೆ ಮೊದಲಿನಂತೆ ಸಂಸಾರದಲ್ಲಿ ಆಸಕ್ತಿಯಿಲ್ಲ, ಮೊದ

ಲಿನಂತೆ ಬಡಬಗ್ಗರ ರಕ್ತಹೀರಿ ಹಣವನ್ನು ಸಂಪಾದಿಸಬೇಕೆಂಬ ಹಾಹಾಕಾರವಿಲ್ಲ. ದುಃಖಿಗಳಲ್ಲಿ ನಿರ್ದಯವಾಗಿ ಪ್ರವರ್ತಿಸುತ್ತಿದ್ದ ಆತನ ಕಲ್ಲಿನಂತಹ ಹೃದಯವು ಈಗ ಮೃದುವಾಗಿರುವುದು ಈಗ ಅತನು ಕಷ್ಟಪಡತಕ್ಕ ಜನರ ಕಷ್ಟಗಳನ್ನು ಹೋಗಲಾಡಿಸುವುದಕ್ಕೋಸ್ಕರ ಹಗಲಿರುಳೂ ಯತ್ನಮಾಡುತ್ತಿರುವನು. ಇಂತಹ ಅಚ್ಯುತಾನಂತನು ಪ್ರಕೃತ ಸಂದರ್ಭದಲ್ಲಿ ಜೋಡೀದಾರನಾಗಿರಲಿಲ್ಲ. ಅವನು ಈಗ ಕೇವಲವಾಗಿ ವಿರಕ್ತನು. ಜೋಡೀದಾರನ ಕಾರ್ಯಭಾರವೂ, ಸಂಸಾರಭಾರವೂ, ಕುಮಾರ ಜಾನಕೀನಾಥನ ತಲೆಯ ಮೇಲೆ ಬಿದ್ದಿದ್ದುವು

ಜ್ಞಾನದ ಮಹಿಮೆಯನ್ನು ಬಲ್ಲವರಾರು ? ಜ್ಞಾನಿಗಳು ಅಜ್ಞಾನಿಗಳ ಮುಂದೆ ಜ್ಞಾನದ ಲಕ್ಷಣವನ್ನು ಹೇಳುವುದಾದರೆ, ಕೋಣನ ಮುಂದೆ ಕಿನ್ನರಿಯನ್ನು ಬಾರಿಸಿದಂತಾಗುವುದು ಜ್ಞಾನಿಗಳಿಗೆ ಜ್ಞಾನದ ವಿಷಯವನ್ನು ತಿಳಿಸಬೇಕಾಗಿಲ್ಲ, ಅಜ್ಞಾನಿಗಳಿಗೆ ತಿಳಿಸಿದರೂ ಪ್ರಯೋಜನವಾಗುವಂತಿಲ್ಲ ಹೀಗ ಹೇಳುವುದಾದರೆ, ಕಲಿಯತಕ್ಕವರೂ ಕಲಿಸತಕ್ಕವರೂ ಎಂಬುದೇ ಇಲ್ಲದಂತಾಗುವುದು ಹಾಗಾಗುವುದಾದರೆ ನಮ್ಮ ಪ್ರಯತ್ನವು ನಿಷ್ಫಲವಾದುದೇ ? ಹಾಗ ಭಾವಿಸಕೂಡದು. ನಾವೇನೋ ತಿಳಿದುದನ್ನು ತಿಳಿದ ಮಟ್ಟಿಗೆ ತಿಳಿಯಪಡಿಸುವೆವು ಇದರಿಂದ ತಿಳಿದವರಿಗೆ ದಾರ್ಢ್ಯವುಂಟಾಗುವುದು, ತಿಳಿಯದೇ ಇದ್ದು ತಿಳಿದುಕೊಳ್ಳಬೇಕೆಂಬ ಆಸಯಿರತಕ್ಕವರಿಗೆ ಮಾರ್ಗವನ್ನಾದರೂ ತೋರಿಸಿದಂತಾಗುವುದು ಏನೂ ಬೇಡವೆನ್ನುವವರಿಗೆ ಹೇಳಬೇಕಾದುದೇನೂ ಇರುವುದಿಲ್ಲ ನಾವಂತೂ ಕಂಡು ಕೇಳಿದುದದನ್ನು ಕ್ರಮವಾಗಿಯೋ ಅಕ್ರಮವಾಗಿಯೋ ತಿಳಿಸಿಬಿಡುವೆವು ಆರು ಹೇಗೆ ಬೇಕಾದರೂ ತಿಳಿದುಕೊಳ್ಳಲಿ

ಜ್ಞಾನವು ಸಮಸ್ತವನ್ನೂ ಸ್ವಾಧೀನದಲ್ಲಿಟ್ಟುಕೊಳ್ಳುವ ಅದೊಂದು ಬುದ್ಧಿಯ ವಿಲಕ್ಷಣವಾದ ಶಕ್ತಿವಿಶೇಷವು ನರನು ಮೊದಮೊದಲು ಆವಾವ ವಸ್ತುಗಳಿಗೆ ಅಧೀನನಾಗಿರುವನೋ, ಜ್ಞಾನದ ಅವಸ್ಥೆಯಲ್ಲಿ ಆಯಾ ವಸ್ತುಗಳೇ ಆತನಿಗೆ ಅಧೀನವಾಗಿಬಿಡುವುವು ಸ್ವಾರ್ಥತೆ ಮುಂತಾದುವು ಜ್ಞಾನಿಯ ಲಕ್ಷಣವೇ ಅಲ್ಲ. ಅಜ್ಞಾನದಿಂದ ಆವ ನೀಚವಾದ ವಸ್ತುವಿಗೆ ಗೌರವವೇರ್ಪಡುವುದೋ, ಆ ಗೌರವವು ಜ್ಞಾನದಿಂದ ಲಾಘವವನ್ನು ಹೊದ್ದುವುದು ಜನರು ನಿಷ್ಕಾರಣವಾಗಿ ಅನೇಕ ಪದಾರ್ಥಗಳಿಂದ ಬದ್ಧರಾಗಿರು

ವರು. ಇದೇ ಅಜ್ಞಾನದ ಪರಿಣಾಮವು. ನೀರಿಲ್ಲದ ಸ್ಥಳದಲ್ಲಿ ನೀರಿನ ಭ್ರಾಂತಿಯನ್ನುಂಟುಮಾಡಿಕೊಂಡು ಅದರಲ್ಲಿ ಕಾಲ ಜಾರಿ ಬೀಳುವುದು ಆವುದರ ಫಲವೋ, ಬಂಧನವಿಲ್ಲದಿದ್ದರೂ ಬಂಧನವೆಂದು ತಿಳಿದು ಕಷ್ಟಗಳಿಗೀಡಾಗುವುದೂ ಅದರ ಫಲವೇ ಆಗಿರುವುದು ಬಂಧನವೆಂಬುದು ಅಜ್ಞಾನದ ಉಲ್ಬಣಾವಸ್ಥೆಯು, ಮುಕ್ತಿಯೇ ಜ್ಞಾನದ ಫಲವು. ಕಾಮ ಕ್ರೋಧ ಲೋಭ, ಸುಖ ದುಃಖ, ಮಮತಾಹಂಕಾರ ಮುಂತಾದ ಸಾಮಗ್ರಿಗಳಿಂದ ನರನು ಬಲವತ್ತರವಾದ ಕೋಟೆಯನ್ನು ಕಟ್ಟಿಕೊಂಡು ಅಜ್ಞಾನವೆಂಬ ರಾಜ್ಯವನ್ನಾಳುವುದಕ್ಕೆ ತೊಡಗುವನು ಜ್ಞಾನವಾಯುವು ಒಂದು ಸಲ ಬೀಸಿತೆಂದರೆ, ಐಂದ್ರಜಾಲಿಕನ ವೃಕ್ಷವು ಮಾಯವಾಗುವಂತೆ ಅಜ್ಞಾನದ ಪರಿಕರವೆಲ್ಲವೂ ಶಿಥಿಲವಾಗುವುವು ಅಜ್ಞಾನದ ದಸೆಯಲ್ಲಿ ಮನುಷ್ಯನು ತನ್ನ ಮನೆಗೆ ಮಟ್ಟಿಗೆ ಮನುಷ್ಯನಾಗಿರುವನು, ಜ್ಞಾನಬಂದಾಗ ಆತನೇ ಪ್ರಪಂಚಕ್ಕೆಲ್ಲಾ ಮನುಷ್ಯನಾಗುವನು ಪುತ್ರ ಮಿತ್ರ ಕಳತ್ರಾದಿಗಳೆಂಬ ಅಭಿಮಾನವು ಜ್ಞಾನಿಗಿಲ್ಲ ಅಜ್ಞಾನಿಯಾದರೋ ಪ್ರಪಂಚವೆಲ್ಲವೂ ತನಗಾಗಿಯೇ ಉತ್ಪನ್ನವಾಗಿದೆಯೆಂದು ತಿಳಿದು ಕಷ್ಟಕ್ಕೆ ಸಿಕ್ಕುವನು. ತತ್ತ್ವವನ್ನು ವಿಚಾರಿಸಿ ನೋಡಲಾಗಿ, ಆರಿಗೆ ಆರುಂಟು? ಈಗ ನಮ್ಮವರೆಂದು ಕರೆಯಲ್ಪಡತಕ್ಕವರು ಹಿಂದಣ ಜನ್ಮದಲ್ಲಿ ಏನಾಗಿದ್ದರು? ಮುಂದೆ ಅವರೇನಾದಾರು? ಒಂದು ಕ್ಷಣಕಾಲದ ಮಟ್ಟಿಗೆ ಅವರು ನಮ್ಮ ಸಮೀಪದಲ್ಲಿ ಇದ್ದ ಮಾತ್ರಕ್ಕೆ ಆವಾಗಲೂ ನಮ್ಮವರಾಗಿಯೇ ಇರುವರೇ? ಇದಕ್ಕಾಗಿಯೇ ಬೆಳಗಿನಿಂದ ಬೈಗಿನ ವರೆಗೂ ಅಲೆದಾಟ! ಮಾನವ ಮಹಾಶಯ! ಇದೆಲ್ಲವೂ ಅಜ್ಞಾನದ ದೋಷವಲ್ಲವೇ? ಜ್ಞಾನೋನ್ಮೇಷದಲ್ಲಿ "ನಾನು ನನ್ನದು" ಎಂಬ ಭೇದ ಬುದ್ಧಿಯಿರುವುದಿಲ್ಲ, ಸುಖದುಃಖವಿಲ್ಲ, ಮಾನಾಭಿಮಾನವಿಲ್ಲ, ಲಾಭಾಲಾಭವಿಲ್ಲ, ಜಯಾಪಜಯವಿಲ್ಲ ಜ್ಞಾನಿಗೆ ಎಲ್ಲವೂ ಒಂದೇ, ಎಲ್ಲರೂ ಒಂದೇ ಆಗಿರುವರು. ಜ್ಞಾನಿಗಳಿಗೆ ಭೇದಾಭೇದಗಳಿಲ್ಲ, ಪುಣ್ಯಪಾಪಗಳಿಲ್ಲ, ವಿಧಿನಿಷೇಧಗಳಿಲ್ಲ. ಜ್ಞಾನವು ಬಂದೊಡನೆಯೇ ಮನುಷ್ಯನು ಈ ಪ್ರಪಂಚದೊಳಗೆ ಇದ್ದರೂ ಪ್ರಪಂಚದ ಹೊರಗೆ ಇದ್ದಂತೆಯೇ ಸರಿ ಜ್ಞಾನಿಯು ಪ್ರಪಂಚದ ಪದಾರ್ಥಗಳಲ್ಲಿ ಸಂಬಂಧವನ್ನು ಕಲ್ಪಿಸಿಕೊಂಡಿದ್ದರೂ ನಿರ್ಲಿಪ್ತನೆನಿಸುವನು. ಬಲು ಮಾತಿನಿಂದೇನು? ಅಜ್ಞಾನದ ಬಲದಿಂದ ಬಗೆಬಗೆಯಾಗಿ ಕಾಣಿಸಿಕೊಳ್ಳುವ ಪ್ರಪಂಚವು ಜ್ಞಾನದಿಂದ ಒಂದೇ ವಿಧವಾಗುವುದು.

ಸಚ್ಚಿದಾನಂದ ಸರಸ್ವತಿಯ ಜ್ಞಾನೋಪದೇಶದಿಂದ ಅಚ್ಯುತಾನಂತನಿಗೆ ಅಜ್ಞಾನಾಂಧಕಾರವು ದೂರ ತೊಲಗಿ ಜ್ಞಾನೋದಯವಾಯಿತು ಜ್ಞಾನ ಬಂದ ಮೇಲೆ ಕಾಲಹರಣಕ್ಕವಕಾಶಗುಡದೆ, ಕಣ್ಮರೆಯಾಗಿದ್ದ ಸರಳಕುಮಾರಿಯನ್ನು ಹುಡುಕಲು ಹೊರಟನು. ಸರ್ವವನ್ನೂ ತ್ಯಾಗಮಾಡಿ ಸಂಚಾರ ಮಾಡುವುದಕ್ಕೆ ಅನುತಾಪವೇ ಮುಖ್ಯ ಕಾರಣವು.

ತಂದೆಯು ಸರ್ವಸಂಗಪರಿತ್ಯಾಗವನ್ನು ಮಾಡಿ ವಿರಕ್ತನಾಗಿದ್ದರೂ, ಜಾನಕೀನಾಥನು ಆವ ಕೆಲಸ ಮಾಡಬೇಕಾದರೂ ತಂದೆಯನ್ನು ಕೇಳದೆ ಮಾಡುತ್ತಿರಲಿಲ್ಲ. ಅಚ್ಯುತನು ತನ್ನ ಮಗನ ಧರ್ಮಬುದ್ಧಿಯನ್ನು ನೋಡಿ ತನ್ನೊಳಗೆ ತಾನೇ ಬಹಳವಾಗಿ ಕೊಂಡಾಡುತ್ತಿದ್ದನು

ಜಾನಕೀನಾಥನ ಗಂಡುಗೂಸಿನ ಅನ್ನಪ್ರಾಶನದ ಮುಹೂರ್ತಕ್ಕೆ ಬಂಧುಬಾಂಧವರೆಲ್ಲರೂ ಬಂದು ಸೇರಿರುವರು ಮುಹೂರ್ತವೂ ಒದಗಿ ಬಂದಿತು. ಜಾನಕೀನಾಥನು ತಂದೆಯ ಪಕ್ಕದಲ್ಲಿಯೇ ಕುಳಿತುಕೊಂಡು ಅನ್ನಪ್ರಾಶನದ ವಿಧಿಯನ್ನು ಸಾಂಗವಾಗಿ ನೆರವೇರಿಸಿದನು ಆ ಕಾಲದಲ್ಲಿ ಸರಳೆಯು ಬಂದು, ಸುತ್ತಮುತ್ತಲೂ ಇರತಕ್ಕ ಗ್ರಾಮಗಳಲ್ಲಿರುವ ಮಕ್ಕಳ ಅಭಿವೃದ್ಧಿಗಾಗಿ,—ಎಂದರೆ, ಮಕ್ಕಳ ಬಾಲ್ಯವಿದ್ಯಾಭ್ಯಾಸಕ್ಕೂ ಅನ್ನವಸ್ತ್ರಾದಿಗಳಿಗೂ ಸಾಮೋದ್ಧಾರವಾಗಿ ಅನುಕೂಲಿಸುವಂತೆ ಒಂದು ಪಾಠಶಾಲೆಯನ್ನೂ ಅದಕ್ಕೆ ಸೇರಿದ ಹಾಗೆ ಒಂದು ಭೋಜನಶಾಲೆಯನ್ನೂ ಕಟ್ಟಿಸುವ ಏರ್ಪಾಡಿಗಾಗಿ ಒಂದು ಲಕ್ಷ ರೂಪಾಯಿಗಳನ್ನು ತಾನು ತನ್ನ ಗಂಡನಿಂದ ಕೊಡಿಸುವುದಾಗಿ ವಾಗ್ದಾನ ಮಾಡಿದಳು ಪಾಠಕ ಮಹಾಶಯ! ಬೀದಿಯ ಬಿಕಾರಿಯ ವೇಷದಲ್ಲಿದ್ದ ಸರಳೆಯನ್ನು ಒಂದು ಕ್ಷಣಕಾಲವಾದರೂ ಧ್ಯಾನಿಸಿ ನೋಡಿರಿ ಆ ಸರಳೆಗೂ ಈ ಸರಳೆಗೂ ತಾರತಮ್ಯವೇನೆಂಬುದನ್ನು ನೀವೇ ತಿಳಿದುಕೊಳ್ಳಿರಿ ಆ ಮಹೋತ್ಸವ ಕಾಲದಲ್ಲಿ ನೆರೆದಿದ್ದವರೆಲ್ಲರೂ ಸರಳೆಯ ಸರಳ ಸ್ವಭಾವವನ್ನು ನೋಡಿ ಬಹಳವಾಗಿ ಆನಂದಪಟ್ಟರು ಹುಡುಗಿಗೆ ಎಷ್ಟರ ಮಟ್ಟಿಗೆ ಭೂತದಯಾವಾತ್ಸಲ್ಯವಿರುವುದೆಂದು ಕಂಡುಕೊಂಡ ದೊಡ್ಡದೊಡ್ಡ ಮೀಸೆಯ ಗಂಡಸರೆಲ್ಲರೂ ನಾಚಿಕೆಯಿಂದ ತಲೆಯನ್ನು ತಗ್ಗಿಸಿಕೊಂಡು ತಮ್ಮ ತಮ್ಮ ಮನೆಗಳಿಗೆ ತೆರಳಿದರು.

ಮನುಷ್ಯನಾದವನು ಯಾವ ಕೆಲಸ ಮಾಡಬೇಕಾದರೂ, ಅವನಿಗೆ ಸಾಕಾದಷ್ಟು ಲೋಕಾನುಭವವಿರಬೇಕು, ಭೂತದಯಾವಾತ್ಸಲ್ಯವಿ

ಬೇಕು. ಇವೆರಡಿದ್ದಾತನೇ ಲೋಕದಲ್ಲಿ ಸರಳಕುಮಾರಿಯಂತೆ ಪರಹಿತ ಕಾರ್ಯದಲ್ಲಿ ನಿರತನಾಗುವನು



# ಇಪ್ಪತ್ತೈದನೆಯ ಲಂಬಕ.



## ಉಪಸಂಹಾರ.

ಸರೋಜಿನಿ, ಸರಳೆ, ಮನೋರಮೆ ಮೊದಲಾದ ಸಮಾನ ವಯಸ್ಕರಾದ ಯುವತಿಯರು ಮಹಡಿಯ ಮೇಲೆ ಒಂದು ಕೋಣೆಯಲ್ಲಿ ಕುಳಿತು ಕೊಂಡು ಮಾತನಾಡುತ್ತಿದ್ದರು ಸರೋಜಿನಿ ಸರಳೆಯನ್ನು ನೋಡಿ,— "ಸರಳೆ! ನೀನು ವಿನಯನನ್ನು ಮದುವೆಯಾಗುವೆಯೆಂದು ನಾನೆಂದಿಗೂ ನಂಬಿರಲಿಲ್ಲ ನಿನ್ನ ಮೊದಲಿನ ಕಷ್ಟಗಳನ್ನೂ ಗೋಳಾಟಗಳನ್ನೂ ನೋಡಿ, ಸುಖಪಡುವುದು ನಿನ್ನ ಹಣೆಯಲ್ಲಿ ಬರೆಯಲಿಲ್ಲವೆಂದು ಎಲ್ಲರೂ ತಿಳಿದಿದ್ದರು," ಎಂದಳು

ಸರಳೆ— [illegible] ಮನುಷ್ಯಮಾತ್ರದವನ ಪ್ರಯತ್ನದ [illegible]ಸಿರುವುದು" ಬಂದುದೆಲ್ಲವನ್ನೂ ಬಾಯಿ ಮುಚ್ಚಿಕೊಂಡು ಅನುಭವಿಸು ಎಂದೇ ಮನುಷ್ಯನ ಹಣೆಯಲ್ಲಿ ಬರೆದಿರುವುದು

ಮನೋರಮಾ—ವಿನಯನು ಲೋಕಕುಮಾರಿಯನ್ನು ವಿವಾಹ ಮಾಡಿಕೊಂಡನೆಂದು ನಾನು ತಿಳಿದ ದಿವಸ, ಸರಳೆಗೆ ಉಂಟಾದ ದುಃಖವನ್ನು ನಾನೆಂತು ವರ್ಣಿಸಲಿ! ಬೇರೆಯು ಕಡೆ ವಿವಾಹ ಮಾಡಿಕೊಂಡ ವಿನಯನನ್ನು ಸರಳೆಯು ಮದುವೆಯಾಗುವಳೆಂಬ ಭರವಸೆಯು ಆರಿಗೂ ಇರಲಿಲ್ಲ. ಇದು ದೈವ ಸಂಕಲ್ಪವೇ ಹೊರತು ಬೇರೆಯಲ್ಲ

ಸರಳೆ—(ನಸುನಗುತ್ತಾ) ಮನೋರಮೆ! ಈ ಮಾತುಗಳೆಲ್ಲವೂ ಹಾಗಿರಲಿ ಈ ದಿನ ಒಂದು ಹಾಡನ್ನು ಹಾಡು ನಿನ್ನ ಹಾಡ ಕೇಳಿ ತುಂಬಾ ದಿನಗಳಾದುವು

ಮನೋರಮಾ - ನಾನು ಆವಾಗ ಬೇಕಾದರೂ ಹಾಡನ್ನು ಹಾಡುವೆನು. ಮೊದಲಿನಂತೆಯೇ ನಿನಗೆ ಕೋಪ ಬರುವುದಾದರೆ ನಾನೇನ ಮಾಡಲಿ

ಸರಳೆ—ನನಗೆ ಕೋಪ ಬಂದರೆ ಬರಲಿ. ನೀನು ಹಾಡಬೇಕೆಂದಿರುವುದನ್ನು ಹಾಡಿಬಿಡು.

ಮನೋರಮಾ— ಹಾಗಾದರೆ ನೀನು ಹರಮೋಣಿಯನ್ನು ತೆಗೆದುಕೊಂಡು ಬಾರಿಸು, ನಾನು ಅದರ ಶ್ರುತಿಗೆ ಹಾಡುವೆನು

ಸರಳೆಯು ಹರಮೋಣಿಯಲ್ಲಿ ಮಧ್ಯಮ ಶ್ರುತಿಯನ್ನು ಹಿಡಿದಳು. ಮನೋರಮೆ ಅದಕ್ಕೆ ಸರಿಯಾಗಿಯೇ ಹಾಡಿದಳು ಎಲ್ಲರಿಗೂ ಬ್ರಹ್ಮಾನಂದವಾಯಿತು ಸರಳೆಗೆ ಉಂಟಾದ ಆನಂದಕ್ಕೆ ಪಾರವೇ ಇಲ್ಲದೆ, ಸರಳೆಯು ಮನೋರಮೆಯನ್ನು ಗಟ್ಟಿಯಾಗಿ ಅಪ್ಪಿಕೊಂಡು ಮುದ್ದಾಡಿದಳು.

ಈ ಆನಂದದಲ್ಲಿಯೇ ಆ ದಿನವು ಕಳೆಯಿತು ಮರುದಿನ ಅನ್ನಪ್ರಾಶನದ ಮಹೋತ್ಸವವನ್ನು ನಿಮಿತ್ತಮಾಡಿಕೊಂಡು ಒಂದು ದೊಡ್ಡ ಸಮಾರಾಧನೆಯು ನಿರ್ವಹಿಸಲ್ಪಟ್ಟಿತು ಅಕ್ಕಪಕ್ಕದ ಗ್ರಾಮಗಳಲ್ಲಿನ ಆಬಾಲವೃದ್ಧರೆಲ್ಲರೂ ಭೋಜನಕ್ಕೆ ಒಂದು ಸೇರಿದರು ಅನೇಕ ಮಂದಿ ಬಡಬಗ್ಗರೂ, ದೀನಾನಾಥರೂ, ಕುಂಟ ಕುರುಡರೂ ಮೊದಲಾಗಿ ಎಲ್ಲರೂ ಭೋಜನ ಶಾಲೆಯಲ್ಲಿ ತಕ್ಕಂತೆ ಹೋಗಿದ್ದರು ಎಲ್ಲರಿಗೂ ಭೋಜನದಲ್ಲಿ ಅವರವ... ರೀತಿಯಾಗಿ ನಡೆಯಿತು ಭೋಜನಾನಂತರದಲ್ಲಿ ಅತಿ ವಿಜೃಂಭಣೆ... ನಡೆದ ನೃತ್ಯಗೀತಗಳನ್ನು ಎಲ್ಲರೂ ನೋಡಿಕೊಂಡು ಸಂಧ್ಯಾ... ತಮ್ಮ ತಮ್ಮ ಮನೆಗಳಿಗೆ ತೆರಳಿದರು ಸರಳಕುಮಾರಿಯು...

...ವೇ ತನ್ನ ಗಂಡನ ಮನೆಗೆ ಹೊರಡಲು ಸಿದ್ಧ...

...ಯು ಸರಳೆಯ ಗಲ್ಲವನ್ನು ಹಿಡಿದುಕೊ...

ನೀನು ನಮ್ಮ ಮನೆಗೆ ಬರುತ್ತಿರಬೇ...

...ಳಿ, ಸರಳೆಯು,—"ನರೋ...

...ಲ್ಲವೇ ಹೇಗೆ? ...

...ಜನರೇನ...

...

ಮಾತನಾಡಿಸಿ ತನ್ನ ಪತಿಯ ಮನೆಗೆ ಆನಂದದಿಂದ ತೆರಳಿದಳು ಸರಳೆಯು ಮನೆಗೆ ಬಂದೊಡನೆಯೆ! ತರಳೆಯ ಮಕ್ಕಳುಮರಿಗಳೆಲ್ಲವೂ ಸರಳೆಯ ಸುತ್ತಲೂ ಸುತ್ತಿಕೊಂಡು ಸಂತೋಷದಿಂದ ಹಿಗ್ಗಿ ಹಿಗ್ಗಿ ಬಿದ್ದು ಬಿದ್ದು ಒದ್ದಾಡಿದುವು. ತರಳಕುಮಾರಿಯೂ ಇದನ್ನು ನೋಡಿ ಬಹಳವಾಗಿ ಸಂತೋಷಪಟ್ಟುಕೊಂಡಳು ಗ್ರಾಮದವರೆಲ್ಲರೂ ಸರಳೆಯನ್ನು ಪರಿಪರಿಯಾಗಿ ಕೊಂಡಾಡುತ್ತಾ ಆನಂದಸಾಗರದಲ್ಲಿ ಮುಳುಗಿ ತೇಲುತ್ತಿದ್ದರು.

ಗೃಹದ ಸೌಭಾಗ್ಯದೇವತೆಯು ಗೃಹದಲ್ಲಿಯೇ ನಿಂತಳು.



ಹೀಗೆಂದು ಕಂಠಾಭರಣಂ ಮುಗಿದುದು



## ಶ್ರೀಮತ್ಕರ್ಣಾಟದೇಶಬಾಂಧವ ಮಹಾಶಯರಲ್ಲಿ
## ವಿಜ್ಞಾಪನೆಗಳು

---

ಸುಪ್ರಸಿದ್ಧ ನವನ್ಯಾಸ ಲೇಖಕರಾದ ವಿದ್ವಾನ್ ಬಾಲಸರಸ್ವತಿಯವ ರ ವಿರಚಿತವಾಗಿದ್ದ ಚಿತ್ರಗುಪ್ತನ ದಪ್ತರವೆಂಬ ಪತ್ತೇದಾರರ ಸಾಹಸ ಗಳನ್ನೋದಿ ಆನಂದಪಟ್ಟ ಮಹನೀಯರಲ್ಲಿ ಅನೇಕರು ಚಿತ್ರಗುಪ್ತನ ರದಲ್ಲಿ ಎರಡನೆಯ ದಪ್ತರದ ಕಥಾವಳಿಯನ್ನು ಮುದ್ರಿಸಿ ವಾಚಕ ಹಾಶಯರ ಅವಲೋಕನಕ್ಕಾಗಿ ಪ್ರಚಾರಪಡಿಸಬೇಕೆಂದು ಕೇಳಿಕೊಂಡ ದ ಪ್ರಕಾರವಾಗಿ, ನಾವು ಈ ಗುರುತರವಾದ ಕಾರ್ಯವನ್ನು ಕೈಕೊಂಡು ಡನೆಯ ಭಾಗದಲ್ಲಿಯೂ ೧೨ ಗ್ರಂಥಗಳನ್ನು ಮುದ್ರಿಸಿ ಪ್ರಚಾರಪಡಿಸ ಕೆಂದು ಸಂಕಲ್ಪಿಸಿರುವೆವು ಉದಾರ ಮಹಾಶಯರೆಲ್ಲರೂ ಮೊದಲಿನಂ ಲೆ ಈಗಲೂ ಪ್ರೋತ್ಸಾಹವಿತ್ತು ಭಾಷಾಸೇವೆಯು ಇತೋಪ್ಯತಿಶಯ ಗಿ ನೆರವೇರುವಂತೆ ಏರ್ಪಡಿಸಿ ಶ್ರೀ ಸರಸ್ವತೀದೇವಿಯ ಪೂರ್ಣಕಟಾ ಕ್ಷಪಾತ್ರರಾಗಬೇಕೆಂದು ಪ್ರಾರ್ಥನೆ

### ಚಿತ್ರಗುಪ್ತನ ದಪ್ತರದ ಎರಡನೆಯ ದಪ್ತರದಲ್ಲಿ

# ಪಿಶಾಚ ಪರಿವಾರ

### ಎಂಬ ಮೊದಲನೆಯ ಪುಸ್ತಕವು

ಮುದ್ರಣಕ್ಕೆ ಸಿದ್ಧವಾಗಿರುವುದು

---

ಈ ಪುಸ್ತಕಗಳ ಪ್ರಚಾರಕರು,

H. VENKATARAMIAH & Sons,

Vidyanidhi Book Depot,

MYSORE